ಬಾಬು ಬಂಕಿಮ ಚಂದ್ರರ

# ಕಮಲಾಕಾಂತನ ಕಡತ

ದ. ಕೃ. ಭಾರದ್ವಾಜ

ಶ್ರೀನಿವಾಸರ ಮುನ್ನುಡಿ ಸಹಿತ

ಪ್ರಕಾಶಕರು

ಆನಂದ್ ಬ್ರದರ್ಸ್

ಬೆಂಗಳೂರು-೨.

# ಅ ರ್ಪ ಣೆ

---

ಕನ್ನಡನಾಡು, ನುಡಿಗಳ ಏಳಿಗೆಗಾಗಿ

ಕರ್ಣಾಟಕದ ಏಕೀಕರಣ ಚಳವಳದ ಮತ್ತು

ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕಾರಣಕರ್ತರಲ್ಲೊಬ್ಬರಾದ

**ಪೂಜ್ಯ ಶ್ರೀಮಾನ್ ಆಲೂರು ವೆಂಕಟರಾಯರಿಗೆ**

ಮತ್ತು

ಕನ್ನಡನಾಡ ಏಕೀಕರಣ ಮತ್ತು ನುಡಿ, ಸಂಸ್ಕೃತಿಗಳ

ಪ್ರಚಾರ ಕಾರ್ಯದಲ್ಲಿ ತಮ್ಮ ತನು, ಮನ, ಧನಗಳನ್ನು ಧಾರೆ ಎರೆದ

ದಿವಂಗತ

**ಶ್ರೀ। ಭಾರತಿ ಸಂಪಂಗಿರಾಮಯ್ಯನವರು**

**ಶ್ರೀ। ಕಡಪಾ ರಾಘವೇಂದ್ರರಾಯರು**

**ಶ್ರೀ। ಮುದವೀಡು ಕೃಷ್ಣರಾಯರು**

ಮತ್ತು

**ಶ್ರೀ। ಆಚಾರ್ಯ "ಶ್ರೀ"**

ಅವರು ನಾಲ್ವರು ಹಿರಿಯರ

ಪವಿತ್ರ-ಶಾಶ್ವತ-ನೆನಪಿಗೆ.

# ವಿಷಯಾನುಕ್ರಮಣಿಕೆ

# ಮುನ್ನುಡಿ

ನನ್ನ ಮಾನ್ಯಮಿತ್ರರಾದ ಶ್ರೀ ದತ್ತಾತ್ರೇಯ ಕೃಷ್ಣ ಭಾರದ್ವಾಜರು ತಾವು ಮಾಡಿರುವ "ಕಮಲಾಕಾಂತನ ದಫ್ತರ"ದ ಈ ಭಾಷಾಂತರಕ್ಕೆ ಎರಡು ಮಾತನ್ನು ಮುನ್ನುಡಿಯಾಗಿ ಕೂಡಿಸುವ ಭಾಗ್ಯವನ್ನು ನನ್ನ ಬೊಗಸೆಯಲ್ಲಿ ತುಂಬಿದಾರೆ. ಇತ್ತೀಚೆಗೆ ನಾನು ಇಂಥ ಕೆಲಸವನ್ನು ಒಪ್ಪಿಕೊಳ್ಳುತ್ತಿಲ್ಲ. ಆದರೆ ಈ ಮಿತ್ರರು ಈ ಕೆಲಸವನ್ನು ನನಗೆ ಒಪ್ಪಿಸಿದ್ದು ಹಲವು ವರ್ಷಗಳ ಹಿಂದೆ. ಅಲ್ಲದೆ ಮೂಲ ಬಂಕಿಂ ಚಂದ್ರರದು, ಅನುವಾದಕರು ಭಾರದ್ವಾಜರು, ಕೃತಿ ಕಮಲಾಕಾಂತನನ್ನು ಕುರಿತದ್ದು, ಎಂಬ ಕಾರಣಗಳಿಂದ ನನ್ನ ಮನಸ್ಸು ಈ ಕೆಲಸದಲ್ಲಿ ಸುಖವನ್ನು ಕಾಣುತ್ತಿದೆ. ಆದ ಕಾರಣ ನಾನು ಈ ಮುನ್ನುಡಿಯ ನುಡಿಗಳನ್ನು ಬಹು ಸಂತೋಷದಿಂದ ಬರೆಯುತ್ತಿದೇನೆ.

ಕಮಲಾಕಾಂತ ನನ್ನ ಬಾಲ್ಯದ ಸ್ನೇಹಿತ. ನಾನು ಹಳ್ಳಿಯ ಶಾಲೆಯಲ್ಲಿ ಓದುತ್ತಿದ್ದ ದಿನಗಳಲ್ಲಿ ನನ್ನ ಸೋದರತ್ತೆ ಬೆಂಗಳೂರಿಂದ ಹಳ್ಳಿಗೆ ಅತ್ತೆಯ ಮನೆಗೆ ಬಂದರು. ಬರುತ್ತ ಯುಗಳಾಂಗುರೀಯ, ರಾಧಾರಾಣಿ, ಕಮಲಾಕಾಂತನ ದಫ್ತರ, ಈ ಪುಸ್ತಕಗಳನ್ನು ತಂದರು. ಮೂರನ್ನೂ ನಾನು ಅವು ಬಂದ ದಿನ ಮಾರನೆಯ ದಿನವೇ ಓದಿ ಓದಿ ನಲಿದೆನು. ಇವುಗಳ ನೆನಪು ಈಗಲೂ ನನಗೆ ಬಹು ಸವಿಯಾಗಿದೆ. ಆಗ್ಯೆ ಅವು ಎಂಥ ಶ್ರೇಷ್ಠ ಸಾಹಿತ್ಯವೆಂದು ನನಗೆ ತಿಳಿಯುವ ಸಂದರ್ಭ ಇರಲಿಲ್ಲ. ಅವುಗಳ ಮೂಲ ಲೇಖಕರು ಭಾರತ ವರ್ಷದ ಮಹಾ ಪುರುಷರಲ್ಲಿ ಒಬ್ಬರೆಂದಾಗಲಿ ಅವುಗಳ ಆ ಕನ್ನಡ ರೂಪದ ಕರ್ತೃಗಳಾದ ಶ್ರೀ ಬಿಂಡಿಗನವಲೆ ವೆಂಕಟಾಚಾರ್ಯರು ಕನ್ನಡದ ಹೊಸ ಸಾಹಿತ್ಯದ ತಳಹದಿಯನ್ನು ಹಾಕಿಕೊಡುತ್ತಿದ್ದರೆಂದಾಗಲಿ ನನಗೆ ಒಂದು ಕಲ್ಪನೆ ಬರುವುದು ಸಾಧ್ಯವಾಗಿರಲಿಲ್ಲ. ರಾಮಾಯಣ ಭಾರತದ ಕಥೆಗಳನ್ನು ಸಂಗ್ರಹಗಳಲ್ಲಿ ಓದಿದ್ದ ಹುಡುಗ ಈ ಕತೆಗಳನೂ ಆನಂದದಿಂದ ಓದಿದೆನು. ಯುಗಳಾಂಗುರೀಯದ ತರುಣ, ತರುಣಿ, ರಾಧಾರಾಣಿ, ಕಮಲಾಕಾಂತ, ಇವರನ್ನು ರಾಮ ಸೀತಾ ಭೀಮ ಹನುಮ ಇವರ ಜೊತೆಗೆ ಪೋಣಿಸಿ ಮನಸ್ಸಿನಲ್ಲಿ ಒಂದು ಮಣಿ ಹಾರವನ್ನು ಮಾಡಿಕೊಂಡೆನು.

ಮಣಿಗಳು ಸ್ವಲ್ಪ ಕಲಬೆರಕೆ ಆದವೆಂದು ಈಗ ನಮಗೆ ತೋರ ಬಹುದು. ಎಳೆಯ ಮನಸ್ಸಿಗೆ ಇಂಥ ಶಂಕೆ ಇರುವುದಿಲ್ಲ. ಆದರಲ್ಲೂ ಆ ಕೋರ್ಟಿನಲ್ಲಿ ಅಷ್ಟು ಧೈರ್ಯವಾಗಿ ಮಾತನಾಡಿ ಎಲ್ಲರನ್ನೂ ನಗಿಸಿದ ಆ ಅಫೀಮುಕೋರ ಕಮಲಾಕಾಂತ ನನಗೆ ತುಂಬ ಮೆಚ್ಚಿಗೆಯ ವ್ಯಕ್ತಿ ಯಾದನು. ಅಷ್ಟೇ ನಿಜವಾದ ವ್ಯಕ್ತಿಯೂ ಆದನು. ಅವನೊಂದಿಗೆ ಅವನಿಗೆ ಯಾವ ನಂಬಿಕೆಯಿಂದಲೋ ಅಷ್ಟೊಂದು ಹಾಲನ್ನು ಬೆಲೆ ಕೇಳದೆ ಕೊಟ್ಟ ಆ ಗೌಳಗಿತ್ತಿ ಪ್ರಸನ್ನೆಯೂ ನನ್ನ ಪರಿಚಯದ ಹೆಂಗಸಾದಳು. ಕಮಲಾ ಕಾಂತನನ್ನು ನಾನು ನಮ್ಮೂರಿನ ಯಾವ ಒಬ್ಬ ವ್ಯಕ್ತಿಯೊಂದಿಗೂ ಐಕ್ಯ ಮಾಡುವಂತಿರಲಿಲ್ಲ. ಈ ಗೌಳಗಿತ್ತಿ ನಮ್ಮ ಆ ಹಳ್ಳಿಯ ದನ ಸಾಕಿದ ಹೆಣ್ಮಕ್ಕಳಲ್ಲಿ ಐದಾರು ಜನರಲ್ಲಿ ಯಾರು ಬೇಕಾದರೂ ಆಗಬಹುದಾಗಿದ್ದಿತು, ಒಬ್ಬಾಕೆ ಆದಳು; ಈಗಲೂ ಅವಳೇ ಆಗಿದ್ದಾಳೆ. ಇಬ್ಬರೂ ಮನಸ್ಸಿಗೆ ಪುರಾಣದ ನಾಯಕ ನಾಯಕಿಯರಂತೆಯೇ ಪ್ರಿಯರಾದದ್ದಲ್ಲದೆ ಬೆಲೆಯ ವ್ಯಕ್ತಿಗಳೂ ಆದರು; ಬಾಲಕನ ಸ್ವಭಾವದ ಯಾವುದೋ ಒಂದು ಭಾಗವನ್ನು ತಮ್ಮ ಇರವಿನ ಅಮೃತ ಸೇಚನದಿಂದ ತಣಿಸಿದರು ಬೆಳಸಿದರು. ಕಮಲಾ ಕಾಂತನನ್ನು ಕುರಿತ ಆ ಪುಸ್ತಕ ಬಹು ಸಣ್ಣದು: ಆಂಗ್ಲೈಯುಗಲದ ಹತ್ತು ಹನ್ನೆರಡು ಪುಟದ್ದು ಅಷ್ಟೇ. ಆದರೂ ಅದು ನನ್ನ ಬಾಳಿನಲ್ಲಿ ಒಂದು ಮಹಾ ಗ್ರಂಥದ ಸ್ಥಾನವನ್ನು ಪಡೆದಿದೆ.

ಆಮೇಲೆ ಬಹುದಿನ ಕಳೆಯುವ ಮುನ್ನ ನಾನು "ದೇವೀ ಚೌಧುರಾಣಿ"ಯನ್ನು ಓದಿದೆನು; ಅದರ ನಾಯಕಿಯ ವ್ಯಕ್ತಿತ್ವಕ್ಕೆ ಮನ ಸೋತೆನು. "ಆನಂದಮಠ"ವನ್ನು ಓದಿದೆನು; ಅದರ ದೇಶಪ್ರೇಮಕ್ಕೆ ಶೌರ್ಯಸಾಹಸಗಳಿಗೆ ಮರುಳಾದೆನು. "ಚಿತ್ರವಿಚಿತ್ರಾವಳಿ"ಯನ್ನು ಓದಿದೆನು; ಅದರ ವಿಡಂಬನದಿಂದ ನಲಿದೆನು. ಆಮೇಲೆ ದಿನಕಳೆದು ಇವನ್ನು ಬರೆದ ಮನುಷ್ಯ ಸಾಮಾನ್ಯನಲ್ಲ ಎಂದು ಮನಗಂಡೆನು. ಬಂಕಿಂಚಂದ್ರ ಭರತ ವರ್ಷದ ಭಾಗ್ಯಮೂರ್ತಿ. ಆತನನ್ನು ಜನ ಹೊಗಳಿದಾರೆ. ಆದರೆ ನಮ್ಮ ದೇಶದ ಸಾಹಿತ್ಯದಲ್ಲಿ ಇತಿಹಾಸದಲ್ಲಿ ಆತನ ಸ್ಥಾನ ಎಷ್ಟು ಹಿರಿಯದೆಂದು ಈಗಲಾದರೂ ನಾವೆಲ್ಲ ಗ್ರಹಿಸಿದ್ದೇವೆಂದು ನಾನು ಹೇಳಲಾರೆ. ಈ ವಿಷಯವನ್ನು ವಿವರವಾಗಿ ಗುರುತಿಸಲು ಇದು ಸ್ಥಳವಲ್ಲ. ಆದರೆ ಒಂದು

ಮಾತನ್ನು ಹೇಳುವ ಸಾಹಸವನ್ನು ಇಲ್ಲಿ ನಾನು ಮಾಡಬಹುದು. ಪ್ರಪಂಚ ಮೆಚ್ಚಿ ಹಿರಿಯರೆಂದ ರವೀಂದ್ರನಾಥ ಠಾಕೂರರು ಬಂಕಿಂಚಂದ್ರರಿಗಿಂತ ಹಿರಿಯರಲ್ಲ ಎಂದು ಕೆಲವುವೇಳೆ ನನಗೆ ತೋರಿದೆ. ಹಿರಿಯರಲ್ಲ ಎನ್ನು ವುದು ಅಷ್ಟೇಅಲ್ಲ, ಒಂದು ಅಂಶದಲ್ಲಿ ಸಮನೂ ಅಲ್ಲ.

ಆ ಅಂಶ ಬಂಕಿಂ ಚಂದ್ರರ ಸಮಾಜ ವಿಜ್ಞಾನ, ಸುಧಾರಕ ಮನೋ ಧರ್ಮ. ರವೀಂದ್ರರೂ ಸುಧಾರಕ ವರ್ಗದಲ್ಲಿ ಸೇರಿದವರೆ. ಆದರೆ ಅವರು ನಡೆದ ದಾರಿ ಅವರ ಹಿರಿಯರು ಹಾಕಿದ್ದದ್ದು. ಬಂಕಿಂಚಂದ್ರರು ಈ ಕೆಲಸ ದಲ್ಲಿ ತಮ್ಮ ದಾರಿಯನ್ನು ತಾವೆ ಮಾಡಿಕೊಂಡರು.

ಮಣ ಚಿನ್ನ ಮಣ ಬೆಳ್ಳಿಯನ್ನು ಎಡಬಲದ ತಟ್ಟೆಗಳಲ್ಲಿಟ್ಟು ಎಡ ಗೈಯಿಂದ ತಕ್ಕಡಿಯನ್ನೆತ್ತುವೆನೆನ್ನುವುದು ಅವಿವೇಕ. ಇಲ್ಲಿ ನಾನು ಈ ಕೆಲಸದಲ್ಲಿ ತೊಡಗಿದೇನೆಂದು ಯಾರೂ ತಿಳಿಯಬಾರದು.

ಬಂಕಿಂಚಂದ್ರರ ಈ ಅನ್ಯಾದೃಶ ಸಮಾಜ ವಿಜ್ಞಾನ "ಕಮಲಾ ಕಾಂತ"ನ ಬಾಯಲ್ಲಿ ರೂಪುಗೊಂಡಿತು. ಹಾಗೆಯೇ ಅವರು ಈ ಅರೆ ಹುಚ್ಚನ ಬಾಯಲ್ಲಿ ತಮ್ಮ ಮನಸ್ಸಿನ ಸೌಂದರ್ಯ ಜ್ಞಾನ, ದೇಶಭಕ್ತಿ, ದೀನವಾತ್ಸಲ್ಯ, ಮುಂತಾದ ಹಲವು ಪ್ರವೃತ್ತಿಗಳಿಗೂ ಮಾತನ್ನು ಒದಗಿ ಸಿದರು. ವಿದ್ಯಾರ್ಥಿದೆಸೆ ಮುಗಿದು ಒಂದು ನೆಲೆಯಲ್ಲಿ ನಿಂತು ನಾನು ಬಂಗಾಳಿ ಕಲಿಯಬೇಕೆಂದು ಯೋಚಿಸಿದಾಗ ಬಂಕಿಂಚಂದ್ರರ ಉಪನ್ಯಾಸಗಳನ್ನು ಮೊದಲು ಕೈಗೆ ತೆಗೆದುಕೊಂಡೆನು; ಅವರ "ಆ ಹಾಡು ಯಾರದು ?" "ಬೆಕ್ಕು" "ಮನುಷ್ಯಫಲ" ಮುಂತಾದ ಲೇಖನ ಗಳನ್ನು ಮೂಲದಲ್ಲಿ ಓದಿ ಆನಂದಿಸಿದೆನು; ಇವನ್ನೆಲ್ಲ ಯಾರಾದರೂ ಕನ್ನಡಕ್ಕೆ ತಂದರೆ ಒಳ್ಳೆಯದಾದೀತಲ್ಲ ಎಂದುಕೊಂಡೆನು.

ಆ ಕೆಲಸವನ್ನು ಆಮೇಲೆ ಗೆಳೆಯರು ಮಾಡಿದರು. ಆ ಗೆಳೆಯರಲ್ಲಿ ಶ್ರೀ॥ ಭಾರದ್ವಾಜರು ಒಬ್ಬರು. ಇದು ನನಗೆ ತಿಳಿಯುವ ಪ್ರವಕ್ಕೆ ಮೊದಲು ಒಂದು ಸಲ ಶ್ರೀ॥ ಭಾರದ್ವಾಜರೊಡನೆ ಮಾತನಾಡುತ್ತ ಯಾವುದೊ ಮಾತಿಗೆ ನಾನು ಕಮಲಾಕಾಂತನ ದಫ್ತರದ ಒಂದು ಲೇಖನದ ಪರಿವರ್ತನ

ವೊಂದನ್ನು ಮೆಚ್ಚಿಕೊಂಡೆನು. ಆ ಪರಿವರ್ತನ ನಮ್ಮ ಮಿತ್ರರು ದಿವಂಗತರಾದ ಶ್ರೀ|| ವೆಂಕಟಾದ್ರಿ ಶಾಸ್ತ್ರಿಗಳದು ಎಂದು ನನ್ನ ತಿಳಿವಳಿಕೆ. ಶ್ರೀ|| ಭಾರದ್ವಾಜರು ಅದು ತಮ್ಮ ಕೃತಿ ಎಂದು ನನಗೆ ತಿಳಿಸಿದರು. ಆ ಲೇಖನಗಳನ್ನು ಮುಂದರಿಸಿ ಒಟ್ಟುಗೂಡಿಸಿ ಪ್ರಕಟಿಸುವ ಉದ್ದೇಶವಿದೆಯೆಂದು ತಿಳಿಸಿದರು. ಆಗಲೇ ಈ ಮುನ್ನುಡಿಯನ್ನು ಬಯಸಿದರು. ಅವರ ಆ ಕೆಲಸ ಈಗ ರೂಪಕ್ಕೆ ಬಂದಿರುವುದು ನನಗೆ ಸಂತೋಷದ ಸಂಗತಿ. ಈ ವಿಷಯದಲ್ಲಿ ನಾನು ಅವರನ್ನು ಅಭಿನಂದಿಸುತ್ತೇನೆ.

ಜೊತೆಗೆ ನಮ್ಮ ಜನರ ಪರವಾಗಿ ಅವರಿಗೆ ವಂದನೆಯನ್ನೂ ಒಪ್ಪಿಸುತ್ತೇನೆ. ಬಂಕಿಂಚಂದ್ರರ ಈ ಕೃತಿಗಳನ್ನು ಮೊದಲೇ ನೋಡಿದ್ದವರಿಗೆ ಇದರ ಕಾರಣ ಸ್ಪಷ್ಟವಾಗಿಯೇ ಇರುತ್ತದೆ. ಈಗತಾನೇ ಮೊದಲಾಗಿ ನೋಡುವವರು ತಮ್ಮ ಆನಂದದಲ್ಲಿ ಆ ಕಾರಣವನ್ನು ಕಂಡುಕೊಳ್ಳುತ್ತಾರೆ.

ಗವೀಪುರದ ವಿಸ್ತರಣ,
ಬೆಂಗಳೂರು,
ಖರ ಸಂವತ್ಸರ,
ಕಾರ್ತೀಕ ಪೂರ್ಣಿಮಾ,
ತಾ|| 13-11-1951

**ಶ್ರೀನಿವಾಸ.**

# ಮೊದಲ ಮಾತು

ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧಕಾಲ. ಭಾರತದಲ್ಲಿ ಇಂಗ್ಲೀಷಭಾಷೆ, ನಡೆ, ನುಡಿ ವಿಚಾರಗಳು ಗೌರವಶಿಖರವನ್ನಡರಿದ ಕಾಲ. ಕ್ರೈಸ್ತಧರ್ಮ ಪ್ರಚಾರಕ್ಕೂ ಬ್ರಿಟಿಷ ಸರ್ಕಾರವು ಪ್ರೋತ್ಸಾಹವೀಯುತ್ತಿತ್ತು. "ಒಂದು ಕೈಲಿ ಬೈಬಲ್ ಮತ್ತೊಂದು ಕೈಲಿ ತಕ್ಕಡಿ ತೋರುತ್ತ ಇಂಗ್ಲೀಷರು ಭಾರತದಲ್ಲಿ ರಾಜ್ಯ ವಿಸ್ತರಣೆ ಮಾಡಿದರು" ಎಂಬ ಮಾತೂ ಗಾದೆಯು ಮಾತಾಯಿತು. ಆಗ ನಾಗರಿಕರೆನಿಸಿಕೊಳ್ಳಬೇಕಾದರೆ ಇಂಗ್ಲಿಷಿನಲ್ಲಿ ಮಾತಾಡಬೇಕು, ಇಲ್ಲವೆ ನಾಲ್ಕಾರು ಇಂಗ್ಲಿಷ ಪದಗಳನ್ನು ಮಧ್ಯೆ ಸೇರಿಸಿ ಮಾತಾಡಬೇಕು; ಇಲ್ಲವಾದರೆ ವ್ಯಕ್ತಿಯು ಸುಶಿಕ್ಷಿತನಲ್ಲ, ಲೋಕವ್ಯವಹಾರವನ್ನರಿತವನಲ್ಲ ಎಂಬ ಭಾವನೆಯು ಸಾಮಾನ್ಯವಾಗಿ ಜನರಲ್ಲಿ ಮೂಡಿತ್ತು. ಭಾರತದ ಇತರ ಎಲ್ಲ ಭಾಗಗಳಿಗಿಂತಲೂ ದಕ್ಷಿಣ ಭಾರತದಲ್ಲಿ ಸಮುದ್ರ ತೀರದ ಪ್ರಾಂತ್ಯಗಳು, ಉತ್ತರ ಭಾರತದಲ್ಲಿ ವಂಗ (ಬಂಗಾಳ) ಪ್ರಾಂತ್ಯ, ಇವುಗಳಲ್ಲಿ ಈ ನವನಾಗರಿಕತೆಯ ಪ್ರಭಾವವು ಸಮಾಜದಲ್ಲಿ ಅಲ್ಲೋಲಕಲ್ಲೋಲವನ್ನುಂಟುಮಾಡಿತ್ತು. ಇದರಿಂದ ಇನ್ನು ಕೆಲವೇ ದಿನಗಳಲ್ಲಿ ಜನರೆಲ್ಲ ಕ್ರೈಸ್ತ ಧರ್ಮಾವಲಂಬಿಗಳಾಗಿ, ಅವರ ನಡೆ ನುಡಿ ವಿಚಾರಗಳೆಲ್ಲ ಇಂಗ್ಲಿಷ ಮಯವಾಗುವವೊ ಎಂಬ ಭೀತಿಯೂ ಭಾರತ ಸಂಸ್ಕೃತಿ ಪ್ರೇಮಿಗಳಾದ ಕೆಲ ಜನ ಸುಶಿಕ್ಷಿತರಲ್ಲಿಯೂ ತಲೆದೋರಿತು. ಅದೇ ಸಮಯದಲ್ಲಿ ಬಂಗಾಳದಲ್ಲಿ ರಾಜಾಮೋಹನರಾಯ್ ಅವರು, ಹಿಂದಿನ ವೈದಿಕ ಧರ್ಮದಲ್ಲಿ ನುಸುಳಿ ಬಂದಿದ್ದ ಅನೇಕ ಅನಾಚಾರಗಳನ್ನು ತಪ್ಪಿಸಲು ಹಲವು ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳನ್ನು ಮಾಡಿದರು. ಅವರ ಬಳಿಕ ಶ್ರೀ ಕೇಶವಚಂದ್ರಸೇನ್ ಮತ್ತು ಶ್ರೀರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು–ಕೇವಲ ಬಂಗಾಳದಲ್ಲಿ ಮಾತ್ರವಲ್ಲ–ಸಮಗ್ರ ಭಾರತದಲ್ಲಿ ಸುಶಿಕ್ಷಿತರ ವಿಚಾರ ಧಾರೆಯನ್ನು ಭಾರತೀಯ ಧಾರ್ಮಿಕ ಸಂಸ್ಕೃತಿಯ ಕಡೆಗೆ ತಿರುಗಿಸಿದರು. ಅದೇ ಸಮಯದಲ್ಲಿ ಬ್ರಹ್ಮಜ್ಞಾನ ಸಮಾಜದ ದಿವಂಗತ ಶ್ರೀಮತಿ ಆನಿಬೆಸಂಟರೂ ಭಾರತೀಯ ಧರ್ಮ ಸಂಸ್ಕೃತಿಗಳ ಪುನರುಜ್ಜೀವನಕ್ಕಾಗಿ ಅಲ್ಲಲ್ಲಿ ತಮ್ಮ ಸಂಸ್ಥೆಯ ಶಾಖೆಗಳನ್ನು

ಸ್ಥಾಪಿಸಿ ಕೆಲಸ ಮಾಡಲಾರಂಭಿಸಿದರು. ಆದರೆ ಈ ಮಹನೀಯರ ಉಪದೇಶಗಳನ್ನು ಕೇಳುವವರ ಮೇಲೆ ಮಾತ್ರ ಅವುಗಳ ಪರಿಣಾಮವಾಗುತ್ತಿತ್ತೆ ವಿನಾ, ಬೇರೆಯವರ ಮೇಲೆ ಆದರ ಪರಿಣಾಮವಾಗಲು ಅವಕಾಶವಿರಲಿಲ್ಲ. ಅದಕ್ಕಾಗಿ ಸಾಹಿತ್ಯವನ್ನು ಉಪಯೋಗಿಸಿಕೊಂಡು ಅದರಿಂದ ಜನರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಸ್ಫೂರ್ತಿದಾಯಕ ಮತ್ತು ಬೋಧಪ್ರದವಾದ ಲೇಖನಗಳನ್ನು ಬರೆಯುವ ಸಾಹಿತಿಯು ಹುಟ್ಟಬೇಕಾಗಿತ್ತು. ಇಂದು ವಾಚಕರ ಮುಂದಿಟ್ಟಿರುವ ಈ 'ಕಮಲಾಕಾಂತನ ಕಡತ'ದ ಮೂಲ ಲೇಖಕರಾದ ಬಾಬು ಬಂಕಿಮಚಂದ್ರ ಚಟ್ಟೋಪಾಧ್ಯಾಯರು ಆಗ ಹುಟ್ಟಿದರು. ವಿಶ್ವವಿದ್ಯಾಲಯದ ಪದವೀಧರರಾಗಿ, ನ್ಯಾಯಾಧೀಶರೂ ಆಗಿ ಸರ್ಕಾರದ ಮನ್ನಣೆಗೂ ಪಾತ್ರರಾಗಿ, 'ರಾಯ್ ಬಹದ್ದೂರ್' ಮತ್ತು 'ಸಿ. ಐ. ಇ.' ಬಿರುದುಗಳನ್ನೂ ಪಡೆದಿದ್ದರು. ಅಂದಿನ ಪಾಶ್ಚಾತ್ಯ ನಾಗರಿಕತೆಯ ಸುಳಿಗೆ ಸಿಕ್ಕಿದ್ದ ವಂಗೀಯ ಸುಶಿಕ್ಷಿತ ಸಮಾಜದಲ್ಲಿ ಕ್ರಾಂತಿಯನ್ನುಂಟುಮಾಡಿದ ಪೂರ್ಣ ಯಶಸ್ಸು ಬಾಬು ಬಂಕಿಮಚಂದ್ರರಿಗೆ ಸಲ್ಲತಕ್ಕದ್ದು. ಅಷ್ಟು ಮಾತ್ರವಲ್ಲದೆ ಅವರು ಮುಂದೆ 'ರಾಷ್ಟ್ರಗೀತೆ'ಯಾದ "ವಂದೇ ಮಾತರಮ್" ಮಂತ್ರದ ಋಷಿಗಳೆನಿಸಿದರು. ಅದಕ್ಕಾಗಿ 'ಕ್ರಾಂತಿಕಾರ'ರ ಚಳವಳಿಯನ್ನು ಸದೆಬಡಿಯುವ ಉದ್ದೇಶದಿಂದ ಸಿದ್ಧಪಡಿಸಲ್ಪಟ್ಟ 'ರೌಲತ್ ಕಮಿಟಿ' ವರದಿಯಲ್ಲಿ ಬಂಕಿಮಚಂದ್ರರ ಹೆಸರನ್ನು ಕ್ರಾಂತಿಕಾರರ ಪ್ರಥಮ ಶ್ರೇಣಿಯಲ್ಲಿ ಸೇರಿಸಿರುವರು.

ಬಾಬು ಬಂಕಿಮ ಚಂದ್ರರು ೨೪-ಪರಗಣೆ (ಬಂಗಾಳ) ಪ್ರಾಂತ್ಯಕ್ಕೆ ಸೇರಿದ ಕಾಂಟಲಪಾಡಾದಲ್ಲಿ ೧೮೩೮ನೆಯ ಸಾಲಿನಲ್ಲಿ ಹುಟ್ಟಿದರು. ಅವರು ನಾಲ್ವರು ಸೋದರರು. ಬಂಕಿಮರ ಅಣ್ಣಂದಿರಾದ ಸಂಜೀವ ಚಂದ್ರರು ತಮ್ಮನ ಸಾಹಿತ್ಯಕ್ಷೇತ್ರದಲ್ಲಿ ಅವರಿಗೆ ನೆರವಾಗಿ ಪ್ರೋತ್ಸಾಹವನ್ನೀಯುತ್ತಿದ್ದರು. ವಂಗೀಯ ಸಾಹಿತ್ಯಕ್ಷೇತ್ರದಲ್ಲಿ ಬಂಕಿಮ ಬಾಬುಗಳಿಗೆ ಮುಂಚೆ ಅನೇಕ ಕವಿಗಳೂ ಗದ್ಯ ಲೇಖಕರೂ ಆಗಿ ಹೋಗಿದ್ದರು. ಆದರೆ ಆಧುನಿಕ ವಂಗೀಯ ಗದ್ಯಸಾಹಿತ್ಯಕ್ಕೆ ತಳಹದಿಯನ್ನು ಹಾಕಿದವರಲ್ಲಿ ರಾಜಾ ರಾಮಮೋಹನ್‌ರಾಯ್ ಮತ್ತು ಪಂಡಿತ ಈಶ್ವರಚಂದ್ರ ವಿದ್ಯಾಸಾಗರರು ಗಣ್ಯರಾಗಿರುವರು. ಈ ತಳಹದಿಯ ಮೇಲೆ ದಿವ್ಯವೂ ಭವ್ಯವೂ

ಆದ ವಿಶ್ವದೇವಕುಲಮಂದಿರವನ್ನು ಕಟ್ಟುವ ಸಾಹಿತ್ಯಶಿಲ್ಪಿಯ ಕಾರ್ಯವು ಬಂಕಿಮ ಚಂದ್ರರಿಗೆ ಮೀಸಲಾಗಿತ್ತೆಂದು ಕಾಣುವುದು. ಬಂಕಿಮ ಚಂದ್ರರು ಪ್ರಪಥಮ ವಂಗೀಯ ಕಾದಂಬರಿಕಾರರೆನಿಸಿದುದಲ್ಲದೆ, ತಮ್ಮ ಪ್ರಾಂತೀಯರಿಗೆ ವಿಮರ್ಶಾತ್ಮಕ, ವೇದಾಂತ ಸಂಬಂಧವಾದ ಮತ್ತು ವಿವಿಧ ವಿಷಯಾತ್ಮಕ ಪ್ರಬಂಧಗಳನ್ನು ಹೇಗೆ ಬರೆಯಬೇಕೆಂಬುದನ್ನು ತೋರಿ ಕೊಟ್ಟರು. ಅವರು ತಮ್ಮ ಮೂಲವಾಸಸ್ಥಾನವಾದ ಕಾಂಟಲಪಾಡಾದಲ್ಲಿ "ವಂಗದರ್ಶನ ಪ್ರೆಸ್" ಎಂಬ ಮುದ್ರಣಾಲಯವನ್ನು ಸ್ಥಾಪಿಸಿ, ಆದರ ಮೂಲಕ "ವಂಗದರ್ಶನ"ವೆಂಬ ಮಾಸಪತ್ರಿಕೆಯನ್ನು ಪ್ರಕಟಿಸಲಾರಂಭಿಸಿದರು. ಆ ಮಾಸ ಪತ್ರಿಕೆಯಲ್ಲಿ ಬರುತ್ತಿದ್ದ ಸರಳಸುಂದರ ಶೈಲಿಯ ಗಹನ ವಿಷಯಾತ್ಮಕ ಲೇಖನಗಳು ವಂಗದೇಶದಲ್ಲಿ ರಚನಾತ್ಮಕ ಸಾಹಿತ್ಯ ಸೃಷ್ಟಿಯಲ್ಲಿ ಒಂದು ಕ್ರಾಂತಿಕಾರಕ ಚಳುವಳಿಗೆ ಮೂಲಕಾರಣವಾದವು.

ಬಂಕಿಮ ಬಾಬುಗಳು ಮೊದಲು ಈಶ್ವರಚಂದ್ರ ಗುಪ್ತರ 'ಪ್ರಭಾಕರ' ಎಂಬ ಪತ್ರಿಕೆಗೆ ಕೆಲವು ಪದ್ಯ ರಚನೆಯಿಂದ ತಮ್ಮ ಸಾಹಿತಿಕ ಜೀವನವನ್ನಾರಂಭಿಸಿದರು. ಆದರೆ ಅದರಲ್ಲಿ ಹೆಚ್ಚು ಯಶಸ್ವಿಗಳಾಗಲಿಲ್ಲ. ಆನಂತರ ಅವರು "ರಾಜಮೋಹನನ ಪತ್ನಿ" ಎಂಬ ಇಂಗ್ಲಿಷ್ ಕಾದಂಬರಿಯನ್ನು ಬರೆಯಲಾರಂಭಿಸಿದರು. ಅದನ್ನು ಬರೆಯುತ್ತಿರುವಾಗಲೆ ಪರಕೀಯ ಭಾಷೆಯಲ್ಲಿ ಎಷ್ಟೇ ಪಾಂಡಿತ್ಯವಿದ್ದರೂ ಅದರಲ್ಲಿ ಪೂರ್ಣ ಯಶಸ್ವಿಯಾಗುವುದು ದುಸ್ತರ. ಅದಕ್ಕಿಂತ "ವಂಗೀಯ ಸುಶಿಕ್ಷಿತರು ತಾಯ್ನುಡಿಯ ಸೇವೆ ಮಾಡುವುದರಿಂದ ವಂಗ ಭಾಷೆಯು ಪ್ರಗತಿಯಾಗುವುದಲ್ಲದೆ, ವಂಗ ದೇಶದ ಉನ್ನತಿಯೂ ಆಗುವುದು" ಎಂದು ಮನಗಂಡರು. ಆನಂತರ ಅವರ ಜೀವನ ಕಾಲವನ್ನೆಲ್ಲ (ಸನ್ ೧೮೯೪ರವರೆಗೆ) ತಾಯ್ನುಡಿಯ ಸೇವೆಗಾಗಿ ತಮ್ಮ ಜೀವನವನ್ನು ಮುಡುಪಾಗಿರಿಸಿದರು. ಈ ನಿರ್ಧಾರದ ಪರಿಣಾಮವಾಗಿ, ಅವರ ಪ್ರಥಮ ಐತಿಹಾಸಿಕ ಕಾದಂಬರಿ "ದುರ್ಗೇಶ ನಂದಿನಿ"ಯು ಮೊದಲು ಪ್ರಕಟವಾಯಿತು. "ವಂಗೀಯ ಸಾಹಿತ್ಯಕಾರರಲ್ಲಿ ನೂತನ ಅರುಣೋದಯ" ಎಂಬ ತಲೆಬರೆಹದಿಂದ ಪತ್ರಿಕೆಗಳಲ್ಲಿ ಈ ಗ್ರಂಥವು ಪ್ರಶಂಸಿತವಾಯಿತು. ಪ್ರೊ. ಕೊವೆಲ್ ಸಾಹೇಬನು "ಮ್ಯಾಕ್ಮಿಲನ್ಸ್ ಮೆಗಜೀನ್" ಎಂಬ ಇಂಗ್ಲಿಷ್ ಮಾಸಪತ್ರಿಕೆಯಲ್ಲಿ (೧೮೭೨ರಲ್ಲಿ)

ಇದನ್ನು ಮುಕ್ತಕಂಠದಿಂದ ಹೊಗಳಿದನು! ಇದರಿಂದ ಬಂಕಿಯು ಬಾಬು ಗಳ ಹೃದಯದಲ್ಲಿ ಅಡಗಿದ್ದ ಸ್ಫೂರ್ತಿಗೆ ಪುಟವಿಟ್ಟಂತಾಯಿತು. ಅನಂತರ ವಂಗೀಯ ಸಾಹಿತ್ಯ ಸೂರ್ಯನ ಕಿರಣಗಳು ಎಲ್ಲೆಡೆಗಳಲ್ಲಿಯೂ ಪ್ರಜ್ವಲಿಸ ಲಾರಂಭಿಸಿತು. ಕಾದಂಬರಿಗಳು, ಸುಪ್ತಸಮಾಜವನ್ನು ಚಾಟಿಯಿಂದ ನೋಯದಂತೆ ಹೊಡೆದೆಬ್ಬಿಸುವಂತಹ ಪ್ರಬಂಧಗಳು, ಬಂಕಿಮ ಚಂದ್ರರ ಕ್ರಾಂತಿಕಾರಕ ಪ್ರತಿಭೆಯನ್ನು ಪ್ರಕಾಶಗೊಳಿಸಲಾರಂಭಿಸಿದವು. ಕ್ರಮೇಣ ರಚನಾತ್ಮಕ ವಾಚನ, ರಚನಾತ್ಮಕ ಚಿಂತನ, ರಚನಾತ್ಮಕ ಸಾಹಿತ್ಯ-ರಚನಾಕ್ರಮಗಳನ್ನು ಬಂಕಿಮ ಬಾಬುಗಳು ವಂಗೀಯರಿಗೆ-ಅವರಿಗೆ ಏಕೆ–ಭಾರತೀಯರಿಗೆ ಬೋಧಿಸಿದರು. ಸುಪ್ರಸಿದ್ಧ ಕಾವ್ಯ ವಿಮರ್ಶಕರೆನಿಸಿದ್ದ ಯೋಗಿ ಅರವಿಂದ ಘೋಷರು ಬಂಕಿಮರ ಶೈಲಿಯನ್ನು ಕುರಿತು "ಗದ್ಯ ಸಾಹಿತ್ಯದ ಅತ್ಯಂತ ಮಧುರವಾಣಿ" ಎಂದು ಹೊಗಳಿರುವರು.

ವಂಗೀಯ ಸಾಹಿತ್ಯದಲ್ಲಿ ಬಂಕಿಮ ಬಾಬುಗಳು ಪರಮಶ್ರೇಷ್ಠ ಕಾದಂಬರಿಕಾರರೆಂದು ವಿಖ್ಯಾತರಾಗಿರುವರು. ಅದರಂತೆಯೆ ಆಧುನಿಕ ಸಾಮಾಜಿಕ ಸಮಸ್ಯೆಗಳು ಮತ್ತು ಹಿಂದಿನ ಐತಿಹಾಸಿಕ ವಿಷಯಗಳಿಂದ ಜೀವನ ಚಿತ್ರಗಳನ್ನು ರಚಿಸುವುದರಲ್ಲಿಯೂ ಅವರು ತಮ್ಮ ಕೌಶಲ್ಯವನ್ನು ತೋರಿರುವರು. ಅವರ "ವಿಷವೃಕ್ಷ" ಮತ್ತು "ಕೃಷ್ಣಕಾಂತನ ಉಯಿಲು" ಎಂಬ ಸತ್ಯಕಥನಾತ್ಮಕ (Realistic) ಕಾದಂಬರಿಗಳಲ್ಲಿ ನಾಗೇಂದ್ರ ಮತ್ತು ಗೋವಿಂದಲಾಲರು ದೇವತಾ ಸ್ತ್ರೀಯರಂತಹ ಸತಿಯರನ್ನು ಪಡೆದಿದ್ದರೂ ಆತ್ಮ ಸಂಯಮವಿಲ್ಲದೆ ಇಬ್ಬರು ವಿಧವಾ ಯುವತಿಯರ ರೂಪಜ್ವಾಲೆಗೆ ಮರುಳಾಗುವರು; ಆಗ ಪತಿ ಪ್ರೇಮದಿಂದ ವಂಚಿತರಾದ ಸೂರ್ಯಮುಖಿ ಮತ್ತು ಭ್ರಮರೆಯರ ಕರುಣಾಜನಕಸ್ಥಿತಿಯು ಬೇರೆಯವರ ಹೃದಯವನ್ನು ಹೇಗೆ ಮಿಡಿಯುವುದು ಎಂಬುದನ್ನು ಮಾರ್ಮಿಕ ರೀತಿಯಲ್ಲಿ ತೋರಿರುವರು. "ವಿಷವೃಕ್ಷ" ಕಾದಂಬರಿಯು ಈಶ್ವರಚಂದ್ರ ವಿದ್ಯಾಸಾಗರರ ವಿಧವಾ ವಿವಾಹದ ಚಳವಳದ ಸಾಧಕ ಬಾಧಕಗಳನ್ನು ವ್ಯಕ್ತಪಡಿಸುವದು. "ಚಂದ್ರ ಶೇಖರ" ಎಂಬ ಸಾಮಾಜಿಕ (Social) ಕಾದಂಬರಿಯಲ್ಲಿ ವಿವಾಹ ಪೂರ್ವದ ಪ್ರತಾಪ, ಶೈವಲಿನಿಯರ ಪ್ರಣಯವು ಹೇಗೆ ಅಹಿತಕರ ರೀತಿಯಲ್ಲಿ ಬೆಳೆದುಕೊಂಡು ಹೋಗುವುದು, ಅದರಲ್ಲಿ ಪ್ರತಾಪನು

ಶೈವಲಿನಿಯ ಹಿತಕ್ಕಾಗಿ ಎಂತಹ ತ್ಯಾಗವನ್ನು ತೋರುವನು ಎಂಬುದನ್ನು ಕಾವ್ಯರೀತಿಯಲ್ಲಿ ವಿಶದಗೊಳಿಸಿರುವರು. ಐತಿಹಾಸಿಕ ಹಿನ್ನೆಲೆಯಲ್ಲಿ ರಚಿಸಲ್ಪಟ್ಟ "ಕಪಾಲ ಕುಂಡಲೆ" ಎಂಬ ಧ್ಯೇಯಾತ್ಮಕ (Idealistic) ಕಾದಂಬರಿಯಲ್ಲಿ ನೈಸರ್ಗಿಕ ನಿಯಮ, ಸಾಮಾಜಿಕ ಆಚಾರಗಳು, ಅದೃಷ್ಟ ಮತ್ತು ಮಾನವ ಪ್ರಯತ್ನಗಳಲ್ಲಿ ಎಷ್ಟು ಅಂತರಗಳಿರುವವು ಎಂಬುದನ್ನು ತಿಳಿಯಾಗಿ, ಸರಳವಾಗಿ ವಿವರಿಸಿರುವರು. ಬಂಕಿಮ ಚಂದ್ರರು ಕೇವಲ ಸಾಹಿತಿ ಮಾತ್ರವಲ್ಲದೆ, ಉಜ್ವಲರಾಷ್ಟ್ರ ನಿರ್ಮಾಪಕ ಮಹಾಪುರುಷರಲ್ಲೊಬ್ಬರೂ ಆಗಿದ್ದರೆಂಬುದನ್ನು ಅವರು "ಸೀತಾರಾಮ", "ದೇವಿ ಚೌಧುರಾಣಿ" ಮತ್ತು "ಆನಂದಮಠ" ಎಂಬ ಕಾದಂಬರಿ ತ್ರಯಗಳನ್ನು ರಚಿಸಿ ವ್ಯಕ್ತಪಡಿಸಿದರು. ಭಾರತವನ್ನು ಬ್ರಿಟಿಷರ ದಾಸ್ಯದಿಂದ ಬಿಡಿಸಲು ಅವರ "ಆನಂದ ಮಠ"ವೇ ರಾಷ್ಟ್ರವೇದವಾಗುವುದೆಂದೂ, ಅದು ಕ್ರಾಂತಿಕಾರರ ಕೈಪಿಡಿಯಾಗುವುದೆಂದೂ ಅಂದು ಅವರಿಗೆ ಭಾಸವಾಗಿತ್ತೋ ಇಲ್ಲವೊ? ರಾಷ್ಟ್ರೀಯ ಚಳವಳಕ್ಕೆ ಮೂಲ ಬೀಜ ಬಿತ್ತಿದವರೆ ಬಾಬು ಬಂಕಿಮರೆಂದು ಹೇಳಬಹುದು. ಮುಂದೆ ರಾಷ್ಟ್ರ ಗೀತೆಯಾದ 'ವಂದೇ ಮಾತರಂ' ಗೀತೆಯು 'ಆನಂದ ಮಠ' ದಿಂದ ಬಂದದ್ದು! ಅವರಾ 'ರಾಜಸಿಂಹ' ಎಂಬ ಐತಿಹಾಸಿಕ ಕಾದಂಬರಿಯಲ್ಲಿ ಮೊಗಲ ಸಮ್ರಾಟ ಔರಂಗಜೇಬನನ್ನು ಹೇಗೆ ಒಬ್ಬ ರಜಪೂತ ದೊರೆಯು ಸೋಲಿಸಿದನೆಂಬುದನ್ನು ಮರ್ಮಭೇದಕವಾಗಿ ವರ್ಣಿಸಲಾಗಿದೆ. "ಇಂದಿರಾ" "ರಾಧಾರಾಣಿ", "ಯುಗಳಾಂಗುರೀಯ" ಎಂಬ ಮೂರೂ ಬಂಕಿಮರ ಬಹು ರಮ್ಯವಾದ ಕಾಲ್ಪನಿಕ (Romantic) ಕಥೆಗಳಾಗಿವೆ. ಅವರ "ರಜನಿ" ಕಾದಂಬರಿಯು ಒಬ್ಬ ಕುರುಡು ಹುಡುಗಿಯ ಹೃದಯವು ಮಿಡಿಯುವ ರೀತಿಯನ್ನು ವರ್ಣಿಸುವುದಾಗಿದೆ. ಅವರಾ ಕಾದಂಬರಿಗಳೆಲ್ಲ ಕನ್ನಡ, ಹಿಂದಿ, ಮರಾಠಿ, ತೆಲುಗು, ಮಲಯಾಳಿ ಮೊದಲಾದ ದೇಶೀಯ ಭಾಷೆಗಳಲ್ಲಿ ಮಾತ್ರವಲ್ಲದೆ ಇಂಗ್ಲಿಷ ಭಾಷೆಗೂ ಪರಿವರ್ತಿತವಾಗಿವೆ. ಬಂಕಿಮರ ಕಾದಂಬರಿಗಳು, ಗದ್ಯ-ಪದ್ಯಗಳ, ಕಾಲ್ಪನಿಕ ಕಥೆ ಮತ್ತು ನಾಟಕಗಳ ಅಂಚಿನಲ್ಲಿ ನಿಲ್ಲುವವು. ಅವುಗಳನ್ನು ಓದುವಾಗ ಕೆಲವು ವೇಳೆ ಕಾವ್ಯವನ್ನು ಓದುತ್ತಿರುವಂತೆಯೆ ಭಾಸವಾಗುವಂಥಾ ಶೈಲಿಯಲ್ಲಿ ಅವು ರಚಿಸಲ್ಪಟ್ಟಿವೆ. ಮತ್ತೆ ಅವರಾ ಕಾದಂಬರಿಗಳಲ್ಲಿ ಹಲವು ನಾಟಕರೂಪವಾಗಿ ಈಗ ರಂಗಮಂದಿರ

ಗಳಲ್ಲಿ, ಸಿನೀಮಾ ವಾಕ್ಚಿತ್ರ ಮಂದಿರಗಳಲ್ಲಿ ಲೋಕಮನೋರಂಜನೆಗಾಗಿ ಪ್ರದರ್ಶಿಸಲ್ಪಡುತ್ತಿವೆ. ಕೀರ್ತಿಶೇಷರಾದ ಶ್ರೀ|| ಬಿ. ವೆಂಕಟಾಚಾರ್ಯರು ಅವರ ಕಾದಂಬರಿಗಳನ್ನೆಲ್ಲಕನ್ನಡಕ್ಕೆ ಪರಿವರ್ತಿಸಿ ಕಳೆದ ಶತಮಾನದ ಉತ್ತರಾರ್ಧದಲ್ಲಿ ನಮ್ಮ ನಾಡಿನಲ್ಲಿ ಅನೇಕ ಸುಶಿಕ್ಷಿತರ ಮನಸ್ಸನ್ನು ಕನ್ನಡ ನುಡಿಯ ಕಡೆಗೆ ಆಕರ್ಷಿಸಿ, ಕನ್ನಡದ ಹೊಸ ಸಾಹಿತ್ಯದ ತಳಹದಿಯನ್ನು ಹಾಕಿಕೊಟ್ಟರು.

ಬಂಕಿಮ ಚಂದ್ರರ "ಕೃಷ್ಣಚರಿತ"ವು ಅವರಾ ಸಂಶೋಧನಾತ್ಮಕ ಬುದ್ಧಿಯ ಆಳವನ್ನು ವ್ಯಕ್ತಪಡಿಸುತ್ತಿದೆ. "ಲೋಕ ರಹಸ್ಯ" ಎಂಬ ಅವರ ಕೃತಿಯು ಬಹು ರಸಭರಿತವಾದ ಉಚ್ಚ ವಿಡಂಬನೆಯಿಂದ ತುಂಬಿ ತುಳುಕುತ್ತಿರುವುದು.

ಅವುಗಳಲ್ಲಿ ಕೆಲವು ಅಂಶಗಳನ್ನು ಕೀರ್ತಿಶೇಷ ಶ್ರೀ|| ಬಿ. ವೆಂಕಟಾಚಾರ್ಯರು ಎಷ್ಟೋ ವರ್ಷಗಳ ಹಿಂದೆಯೆ ಕನ್ನಡಿಗರ ಮುಂದಿರಿಸಿರುವರು. ಅವರಿಂದ ಪರಿವರ್ತಿತವಾದ ಗ್ರಂಥಗಳನ್ನೋದಿಯೆ ನಾನು ಬಂಗಾಳಿಯನ್ನು ಕಲಿಯಲು ಪ್ರೇರಿತನಾದ್ದು. ನನಗೆ ಬಂಗಾಳಿಯನ್ನು ಕಲಿಸಿದ ಶ್ರೀರಾಮ ಕೃಷ್ಣಾಶ್ರಮದ ಶ್ರೀ|| ಸ್ವಾಮಿ ನಿಶಿದ್ಧಾನಂದರನ್ನು ನಾನು ಈ ಸಮಯದಲ್ಲಿ ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ. ನನ್ನ ೧೨-೧೩ನೆಯ ವಯಸ್ಸಿನಿಂದಲೆ ನಾನು ವೆಂಕಟಾಚಾರ್ಯರ ಭಾಷಾಂತರಗಳನ್ನು ಓದಲಾರಂಭಿಸಿ, ಅನಂತರ ಹೈಸ್ಕೂಲುಗಳಲ್ಲಿ ನನ್ನ ಸಹಾಧ್ಯಾಯಿಗಳ ಮುಂದೆ, ಮಿತ್ರರ ಮುಂದೆ, ಬಂಧುಗಳ ಮುಂದೆ ಎಷ್ಟೋ ಬಾರಿ ಅವುಗಳನ್ನೆಲ್ಲ, ಮುಖ್ಯವಾಗಿ "ಆನಂದ ಮಠ, ದೇವಿ ಚೌಧುರಾಣಿ, ಸೀತಾರಾಮ" ಕಾದಂಬರಿಗಳನ್ನು ಪುನಃ ಪುನಃ ಪಠಿಸಿರುವೆನು. ಅದರಿಂದ ನನ್ನ ಬಾಳಿನ ಭವಿಷ್ಯ ಕ್ರಮದ ಮೇಲೂ ಒಂದು ಪರಿಣಾಮವಾಗಿ ನನ್ನ ಮನಸ್ಸು ಭಾರತೀಯ ಸಾಂಸ್ಕೃತಿಕ ವಿಚಾರಗಳ ಕಡೆಗೆ ತಿರುಗಿತು

ಬಂಕಿಮ ಬಾಬುಗಳು ಮಹಾ ಮೇಧಾವಿಗಳು, ಉತ್ಕಟ ದೇಶಭಕ್ತರು, ನುಡಿದೇವಿಯ ಉಪಾಸಕರು, ಭಾರತೀಯ ಸಂಸ್ಕೃತಿಯ ಅಭಿಮಾನಿಗಳು. ವಂಗದರ್ಶನದಲ್ಲಿ ಪ್ರಕಟವಾಗುತ್ತಿದ್ದ ಅವರ ಅನೇಕ ಸಾಮಾನ್ಯ ಪ್ರಬಂಧಗಳಲ್ಲಿ, ವಿಡಂಬನಾತ್ಮಕ ಪ್ರಬಂಧಗಳಲ್ಲಿ ಅವರಾಗುಣಗಳು ಸ್ಪಷ್ಟವಾಗಿ

ವ್ಯಕ್ತವಾಗುವಂತಿವೆ. ಅವರ ವಂಗ ಭಾಷಾಭಿಮಾನವಂತೂ ಅತ್ಯುದಾತ್ತವಾಗಿತ್ತು. ಕೀರ್ತಿಶೇಷ ಇತಿಹಾಸಜ್ಞರಾದ ರಮೇಶಚಂದ್ರದತ್ತರು ವಿಲಾಯಿತಿಯಲ್ಲಿಯೆ ಶಿಕ್ಷಣಪಡೆದು, ರಾಮಾಯಣ ಮಹಾಭಾರತ ಗ್ರಂಥಗಳನ್ನು ಕೂಡ ಇಂಗ್ಲೀಷ ಕಾವ್ಯರೂಪದಲ್ಲಿ ರಚಿಸಿದರು. ಅವರು ತಮ್ಮ ಮಿತ್ರರಿಗೆ ಪತ್ರ ಬರೆಯುವಾಗ ಕೂಡ ಇಂಗ್ಲಿಷಿನಲ್ಲಿಯೆ ಬರೆಯುತ್ತಿದ್ದರು. ಬಂಕಿಮ ಬಾಬುಗಳು ಅವರನ್ನು ಒಂದು ಸಲ ಭೇಟಿಯಾದಾಗ–"ನೀವು ಇಂಗ್ಲೀಷಿನಲ್ಲಿ ಗ್ರಂಥಗಳನ್ನು ಬರೆಯುವಿರಿ. ಅದರಂತೆಯೆ ನೀವು ಬಂಗಾಳಿ ಭಾಷೆಯಲ್ಲಿಯೂ ಕೆಲವು ಲೇಖನಗಳನ್ನು ಬರೆಯಬೇಕೆಂದು ಆಗ್ರಹಪೂರ್ವಕವಾಗಿ ವಿನಂತಿ ಮಾಡಿಕೊಳ್ಳುತ್ತೇನೆ" ಎಂದರು. ರಮೇಶ ಬಾಬುಗಳು–"ನನಗೆ ಮಾತೃಭಾಷೆಯಲ್ಲಿ ಬರೆಯುವ ಅಭ್ಯಾಸವಿಲ್ಲ. ನಾನು ವಿಚಾರಮಾಡುವುದು, ಚಿಂತಿಸುವುದು, ಬರೆಯುವುದು ಎಲ್ಲ ಇಂಗ್ಲಿಷ ಭಾಷೆಯಲ್ಲಿಯೆ ನಡೆದು ಬಂದಿದೆ" ಎಂದು ಉತ್ತರವಿತ್ತರು. ಬಂಕಿಮ ಬಾಬುಗಳು–"ನೀವು ಹೇಳುವ ಮಾತು ಆನಂದದಾಯಕವಾಗಿಲ್ಲ. ನೀವು ಏನು ಬರೆಯುವಿರೊ ಅದೇ ಒಳ್ಳೆಯ ಲೇಖನವಾಗುವುದು. ಮಾತೃಭಾಷೆಯಲ್ಲಿ ಬರೆಯಲು ಓದಲು ಅಭ್ಯಾಸದ ಅವಶ್ಯಕತೆ ಇಲ್ಲ, ಅದಕ್ಕೆ ಯೋಗ್ಯತೆ ಬೇಕು!" ಎಂದರು. ಈ ಸಂಭಾಷಣೆಯ ಪರಿಣಾಮವಾಗಿ, ಮುಂದೆ ರಮೇಶದತ್ತರ ಲೇಖನಿಯಿಂದ 'ಮಾಧವೀಕಂಕಣ, ಸಮಾಜ, ಜೀವನ ಸಂಧ್ಯಾ, ಜೀವನ ಪ್ರಭಾತ, ಸಂಸಾರ' ಮೊದಲಾದ ವಂಗೀಯ ಕಾದಂಬರಿಗಳು ಹೊರಬೀಳುವಂತಾದವು. ಕೀರ್ತಿಶೇಷರಾದ ಭಾರತಿ ಸಂಪಂಗಿರಾಮಯ್ಯನವರು 'ಮಾಧವೀಕಂಕಣ' ಮತ್ತು 'ಜೀವನಸಂಧ್ಯಾ' ಕಾದಂಬರಿಗಳನ್ನು ಕನ್ನಡಿಸಿ ಪ್ರಕಟಿಸಿದರು.

ವಂಗದರ್ಶನ ಪತ್ರಿಕೆಯಲ್ಲಿ ವಂಗೀಯ ಸಮಾಜವನ್ನು ಸುಪ್ತಾವಸ್ಥೆಯಿಂದ ಬಡಿದೆಬ್ಬಿಸಲು ಅನೇಕ ವಿಡಂಬನಾತ್ಮಕ ಲೇಖನಗಳು ಪ್ರಕಟವಾಗುತ್ತಿದ್ದವು. ಅವುಗಳಲ್ಲಿ 'ಕಮಲಾಕಾಂತೇರ ದಫ್ತರ' ಎಂಬುದು ಒಂದು ಲೇಖನ ಮಾಲೆ. ದಫ್ತರದ ಲೇಖಕ ಕಮಲಾಕಾಂತನು ಅಫೀಮುಖೋರನೆನಿಸಿದ ಒಬ್ಬ ಕಾಲ್ಪನಿಕ ವ್ಯಕ್ತಿ ಮಾತ್ರ. ಈ ಲೇಖನ ಮಾಲೆಯಲ್ಲಿ ಪ್ರತಿಭಾಶಾಲಿಗಳಾದ ಬಂಕಿಮ ಬಾಬುಗಳು ಬಹು ಮಾರ್ಮಿಕವಾಗಿ ಅಪ್ರತ್ಯಕ್ಷ ರೀತಿಯಲ್ಲಿ ಸಮಾಜಕ್ಕೆ ಶಿಕ್ಷಣವಿತ್ತಿರುವರು. ಅಂಥಾ ಶಿಕ್ಷಣವು

ಸಾಹಿತ್ಯದ ಒಂದು ಅಂಗವಾಗುವುದು. ಅವರು ಹಾಸ್ಯರಸವನ್ನಾಶ್ರಯಿಸಿ ಸಾಮಾಜಿಕ, ನೈತಿಕ ಮತ್ತು ಧಾರ್ಮಿಕ ಅನಾಚಾರಗಳನ್ನೆತ್ತಿ ಕನ್ನಡಿಯಂತೆ ಜನರೆದುರಿಗೆ ಇಟ್ಟರು. ಆದರೆ ಅವರ ಹಾಸ್ಯವು ವಿದ್ರೂಪಮಯವಾಗಿಲ್ಲ. ತೀವ್ರ ವಿದ್ರೂಪಮಯ ಹಾಸ್ಯದಿಂದ ಓದುಗರಿಗೆ ತಾತ್ಕಾಲಿಕವಾಗಿ ಮನೋರಂಜನೆ ಉಂಟಾಗಬಹುದು. ಆದರೆ ಅದರಿಂದ ಲೇಖಕನ ಉದ್ದೇಶ್ಯ ಸಿದ್ಧಿಯಾಗುವುದಿಲ್ಲ. ಹಾಸ್ಯರಸವನ್ನು ಸಜೀವ ರಸವಾಗಿ ಉಪಯೋಗಿಸಿಕೊಳ್ಳಬಲ್ಲ ಲೇಖಕನು ಅದನ್ನು ಶಿಕ್ಷಾಪ್ರದವಾದ, ಸಮಾಜದ ಮೇಲೆ ಪರಿಣಾಮಕಾರಿಯಾಗುವಂಥ ಲೇಖನಗಳನ್ನು ರಚಿಸಲು ಉಪಯೋಗಿಸಿಕೊಳ್ಳುವನು. ಬಂಕಿಮ ಬಾಬುಗಳ ಈ ವಿಡಂಬನಾತ್ಮಕ ಲೇಖನ ಮಾಲೆಯಲ್ಲಿ ಗೂಢ ವ್ಯಂಗ್ಯತೆ, ಶಿಕ್ಷಣ, ದೇಶಾಭಿಮಾನ,ಮರ್ಮಭೇದಕ ಹೃದಯದ ಭಾವಗಳು, ದೇಶಪ್ರೇಮಿಯ ಬಿಸಿಯುಸಿರುಗಳ ಪ್ರವಾಹವು ಅಲೆ ಅಲೆಯಾಗಿ ಹರಿದಿರುವುದು. ಇಂಗ್ಲಿಷಿನಲ್ಲಿ ಡಿಕನ್ಸ್, ಮೋಲಿಯರ್ ಮೊದಲಾದ ಲೇಖಕರು ಇಂತಹ ಅನೇಕ ಪ್ರಬಂಧಗಳನ್ನೂ, ನಾಟಕಗಳನ್ನೂ ರಚಿಸಿರುವರು. ಬಂಕಿಮಬಾಬುಗಳ ಈ ಲೇಖನ ಮಾಲೆಯು ಯೋಗ್ಯತೆಯಲ್ಲಿ ಅವುಗಳಾವುದಕ್ಕೂ ಕಡಿಮೆಯಾಗಿಲ್ಲ. ಕನ್ನಡಿಗರಿಗೆ ಅದರ ಪರಿಚಯವಾಗಬೇಕೆಂದು ಆ ಲೇಖನಮಾಲೆಯಲ್ಲಿ ಕೆಲವನ್ನು ಭಾಷಾಂತರಿಸಿ, 'ನಗುವನಂದ' ಮಾಸಪತ್ರಿಕೆಯ ಮೊದಲ ವರ್ಷದ ಸಂಚಿಕೆಗಳಲ್ಲಿ ಪ್ರಕಟಿಸಲಾಗಿತ್ತು. ಈಗ ಸಮಗ್ರಮಾಲೆಯನ್ನು ಈ ಪುಸ್ತಕ ರೂಪವಾಗಿ ಕನ್ನಡಿಗರ ಮುಂದಿಟ್ಟಿರುವೆನು.

ಈ ಪ್ರಬಂಧಗಳು ಮಾನವ ಸ್ವಭಾವವು, ಕೆಲವು ಮುಖ್ಯ ವಿಚಾರಗಳಲ್ಲಿ ಜಾತಿ ಕುಲಗೋತ್ರ ಕಾಲ, ದೇಶ ಭೇದಗಳಿಲ್ಲದೆ, ಹೇಗೆ ಏಕರೀತಿಯಾಗಿರುವುದು ಎಂಬುದನ್ನು ನಿದರ್ಶಿಸುತ್ತಿವೆ. ಮಾನವ ವ್ಯವಹಾರವನ್ನು ಸಂತೆಯ ವ್ಯಾಪಾರವಾಗಿ, 'ಭ್ರಮರ'ವನ್ನು ಪದವೃದ್ಧಿಹೊಂದಿದ ಪಂಡಿತನಾಗಿ, ನಾಯಿಯನ್ನು 'ಪಾಲಿಟಿಷಿಯನ್ನಾಗಿ', ಬೆಕ್ಕನ್ನು 'ಸೋಷಿಯಲಿಸ್ಟ್' ಆಗಿ, ಒನಕೆಯನ್ನು 'ದೇಶಭಕ್ತನಾಗಿ' ಮಾಡಿ, ಇಂದಿನ ನ್ಯಾಯಾಲಯಗಳ ಪರಿಸ್ಥಿತಿಯನ್ನು ಕಮಲಾಕಾಂತನ ಸಾಕ್ಷ್ಯದಲ್ಲಿ ವಿಡಂಬನಾತ್ಮಕವಾಗಿ, ಮರ್ಮಭೇದಕವಾಗಿ ರಚಿಸಿರುವ ಅವರ ಕೌಶಲ್ಯವನ್ನು ಓದುಗರು ನೋಡಬಹುದು.

ಬಂಕಿಮ ಚಂದ್ರರು ದೇಶದಲ್ಲಿ ಪರಿಸ್ಥಿತಿಯು ಬದಲಾಯಿಸುತ್ತಿರುವಾಗ ಹೊಸ ಮತ್ತು ಹಳೆಯ ಧ್ಯೇಯಗಳಿಗೆ ಘರ್ಷಣೆಗೆ ಆರಂಭವಾದಾಗ ಹುಟ್ಟಿದರು. ಅದರ ಪ್ರಭಾವವೂ ಅವರ ಮನಸ್ಸಿನ ಮೇಲಾಯಿತು. ಇದನ್ನು ಅವರಾಕೃತಿಗಳಲ್ಲೆಲ್ಲ ಕಾಣಬಹುದು. ಅವರು ಪೌರ್ವಾತ್ಯ ಸಂಯೋಗ ವಾದ, ಪಾಶ್ಚಾತ್ಯ ವಿಶ್ಲೇಷಣ ವಾದಗಳ ಮಧ್ಯಸ್ತಮಾರ್ಗವನ್ನು ಸರಳ ಸ್ವತಂತ್ರ ರೀತಿಯಲ್ಲಿ ಹಿಡಿದಿದ್ದರೂ, ಅಂತರ್ಯದಲ್ಲಿ ಸ್ವಸಂಸ್ಕೃತಿ ಮತ್ತು ಸ್ವಧರ್ಮವನ್ನು ಪೋಷಿಸಿಕೊಂಡೇ ಬಂದವರು. "ಪಾಶ್ಚಾತ್ಯ ವಿಜ್ಞಾನವನ್ನು ತುಲನಾತ್ಮಕ ದೃಷ್ಟಿಯಿಂದ ಪೌರ್ವಾತ್ಯ ಆಧ್ಯಾತ್ಮವಿಜ್ಞಾನದೊಂದಿಗೆ ಅಧ್ಯಯನಮಾಡಿ, ಮನನಮಾಡಿ ದೇಶೋನ್ನತಿಗಾಗಿ, ಜಗತ್ತಿನ ಹಿತಸಾಧನೆಗಾಗಿ ಕೆಲಸ ಮಾಡಿ" ಎಂದು ಅವರು ಸಾರಿರುವರು.

ನಮ್ಮ ನಾಡಿನ ಸುಪ್ರಸಿದ್ಧ ಕವಿ, ನಾಟಕಕಾರ, ಸಣ್ಣಕಥೆಗಳ ಜನಕರು ಎನಿಸಿದ ಪೂಜ್ಯ ಹಿರಿಯರು ಶ್ರೀ॥ ಮಾಸ್ತಿ ವೆಂಕಟೇಶಯ್ಯಂಗಾರ್ ಅವರು ಪ್ರೀತಿಯಿಂದ ಇದಕ್ಕೆ ಮುನ್ನುಡಿಯನ್ನು ಬರೆದುಕೊಟ್ಟುದಕ್ಕಾಗಿ ನನ್ನ ಕೃತಜ್ಞತಾ ಪೂರ್ವಕ ವಂದನೆಗಳು ಮೊದಲು ಅವರಿಗೆ ಸಲ್ಲಬೇಕು.

ಈ ಪುಸ್ತಕವನ್ನು ಪ್ರಕಟಿಸಲು ಮುಂದೆ ಬಂದ ಶ್ರೀ ಆನಂದ್ ಬ್ರದರ್ಸ್ ಅವರಿಗೂ ನನ್ನ ವಂದನೆಗಳು.

ಕನ್ನಡಿಗರ ಪ್ರೋತ್ಸಾಹವು ಇದಕ್ಕೆ ದೊರೆತರೆ ಬಂಕಿಮ ಬಾಬುಗಳ ವಿಷ್ವಕೋಶದಂತಿರುವ ಇತರ ಪ್ರಬಂಧಗಳನ್ನೂ ಪುಸ್ತಕ ರೂಪದಲ್ಲಿ ಪ್ರಕಟಿಸ ಲೆತ್ನಿಸುವೆನು. ಇತಿ-

ಖರ ಸಂ॥ ಮಾರ್ಗಶಿರ ಶುದ್ಧ ೨
೩೦-೧೧-೧೯೫೧
ಬಸವನಗುಡಿ
ಬೆಂಗಳೂರು-೪

ದ. ಕೃ. ಭಾರದ್ವಾಜ.

" The Sweetest Voice that ever Spoke in Prose "

— AUROBINDA GHOSH

" Bankim Chandra is in prose what Madhu Sudan is in Verse the founder of a new style, the exponent of a new idea. In creative imagination, in gorgeous description, in power to conceive and skill to describe Madhu Sudan and Bankim stand apart from the other writers of the century: they are the first, the second is nowhere."

— R. C. DUTT

# ಕಮಲಾಕಾಂತನ ಕಡತ

## ಪರಿಚಯ

ಅನೇಕರು ಕಮಲಾಕಾಂತನು ಹುಚ್ಚನೆಂದು ಹೇಳುತ್ತಿದ್ದರು. ಅವನ ನಡೆನುಡಿಯಲ್ಲಿ ಸ್ಥಿರತೆ ಇರಲಿಲ್ಲ. ಅವನಿಗೆ ಓದು, ಬರಹ ಬರುತ್ತಿರಲಿಲ್ಲವೆಂದಲ್ಲ; ಸ್ವಲ್ಪ ಇಂಗ್ಲೀಷೂ, ಕಿಂಚಿತ್ ಸಂಸ್ಕೃತವೂ ಗೊತ್ತಿತ್ತು ಅವನಿಗೆ. ಆದರೆ ಅರ್ಥೋಪಾರ್ಜನೆಯಾಗದ ವಿದ್ಯೆಯಿಂದ ಪ್ರಯೋಜನವೇನು? ಆ ವಿದ್ಯೆಯು ವಿದ್ಯೆಯೆ? ಕಚೇರಿ ಕಟ್ಟೆಗಳಿಗೆ ಹೋಗಿ ಬರುವುದಕ್ಕೆ, 'ಸಾಹೇಬರು–ಸುಬಾಗಳ ಬಳಿಗೆ ಹೋಗಿಬರಲು ಅದು ಸಹಾಯಕವಾಗಿರಬೇಕು. ಓದು, ಬರಹವೆಂದರೆ ಕೇವಲ ತಮ್ಮ ಹೆಸರಿನ ರುಜು (ದಸ್ಕತು) ಹಾಕಬಲ್ಲ ಅನೇಕ ಜನ ದೊಡ್ಡ ಮೂರ್ಖರೆನಿಸಿಕೊಂಡವರು, ಕಚೇರಿ ಕಟ್ಟೆಗಳಿಗೆ ಹೋಗಿ ಸುಳ್ಳುಪಳ್ಳು, ಹೇಳಿ ತಮ್ಮ ಕೆಲಸವನ್ನು ಮುಗಿಸಿಕೊಂಡು ಬರುವರು. ನಮ್ಮ ಅಭಿಪ್ರಾಯದಲ್ಲಿ ಅವರೇ ಪಂಡಿತರು. ಕಮಲಾಕಾಂತನಂತೆ ಎಷ್ಟೋ ಪುಸ್ತಕಗಳನ್ನು ಓದಿದವರು ಅತಿ ಮೂರ್ಖರೆಂದು ನಮ್ಮ ಅಭಿಪ್ರಾಯ.

ಕಮಲಾಕಾಂತನಿಗೆ ಒಂದು ಬಾರಿ ನೌಕರಿ ಸಿಕ್ಕಿತ್ತು. ಒಬ್ಬ ಅಂಗ್ರಿಜ ಸಾಹೇಬನು ಅವನ ಇಂಗ್ಲಿಷ ಭಾಷೆಗೆ ಮುಗ್ಧನಾಗಿ, ತನ್ನ ಕಚೇರಿಯಲ್ಲಿ ಅವನಿಗೊಂದು ಗುಮಾಸ್ತಗಿರಿಯನ್ನು ಕೊಟ್ಟಿದ್ದನು. ಆದರೆ ಕಮಲಾಕಾಂತನಿಗೆ ಆ ಚಾಕರಿಯನ್ನು ಉಳಿಸಿಕೊಳ್ಳಲಾಗಲಿಲ್ಲ. ಅವನು ಆಫೀಸಿಗೆ ಹೋಗುತ್ತಿದ್ದ, ಆದರೆ ಕೆಲಸ ಮಾಡುತ್ತಿರಲಿಲ್ಲ. ಸರಕಾರಿ ರಿಜಿಸ್ಟರುಗಳಲ್ಲಿ 'ಕವಿತೆ'ಗಳನ್ನು ಬರೆದಿಡುತ್ತಿದ್ದನು! ಆಫೀಸಿನ ಕಾಗದಪತ್ರಗಳಲ್ಲಿ 'ಷೇಕ್‌ಸ್ಪಿಅರ್' ಎಂಬ ಕವಿಯ ಕವಿತೆ ಕಾವ್ಯಗಳನ್ನು ಬರೆದಿಡುತ್ತಿದ್ದನು. 'ಬಿಲ್-ಬುಕ್'ಗಳ ಹಾಳೆಗಳಲ್ಲಿ ಚಿತ್ರಗಳನ್ನು ಬರೆದಿಡುತ್ತಿದ್ದನು! ತಿಂಗಳ ಕೊನೆಯಲ್ಲಿ ಒಂದು ದಿನ, ಸಾಹೇಬನು ಕಮಲಾಕಾಂತನಿಗೆ 'ಪೇ–ಬಿಲ್' ತಯಾರಿಸಲು ಹೇಳಿದನು. ಕಮಲಾಕಾಂತನು ಬಿಲ್ ಬುಕ್ಕನ್ನು ತೆಗೆದುಕೊಂಡು,

ಆದರಲ್ಲಿ ಕೆಲವು ಮಂದಿ ಭಿಕ್ಷುಕರು ಭಿಕ್ಷೆಮಾಡುತ್ತಿರುವಂತೆಯೂ ಸಾಹೇಬನು ನಾಲ್ಕಾರು ದುಡ್ಡುಗಳನ್ನು ಅವರ ಕಡೆ ಬಿಸಾಡುತ್ತಿರುವಂತೆಯೂ ಚಿತ್ರವನ್ನು ಬರೆದು, ಅದರ ಕೆಳಗೆ 'ಯಥಾರ್ಥ ಪೇ–ಬಿಲ್' ಎಂದು ಉಲ್ಲೇಖಿಸಿ ಸಾಹೇಬನ ಮುಂದಿಟ್ಟನು. ಈ ನೂತನ ತರಹವಾದ ಪೇ–ಬಿಲ್ಲನ್ನು ನೋಡಿ, ಸಾಹೇಬನು ಅದೇ ದಿನವೆ ಕಮಲಾಕಾಂತನಿಗೆ ಅಪ್ಪಣೆ ಕೊಟ್ಟುಬಿಟ್ಟನು!

ಕಮಲಾಕಾಂತನ ಚಾಕರಿಯು ಮುಗಿಯಿತು. ದುಡ್ಡಿನಿಂದ ಅವನಿಗೆ ಹೆಚ್ಚಿನ ಪ್ರಯೋಜನವೂ ಇರಲಿಲ್ಲ, ಮದುವೆಯ ಹವ್ಯಾಸಕ್ಕೇ ಅವನು ಹೋಗಿರಲಿಲ್ಲ. ಹೊಟ್ಟೆತುಂಬ ಊಟ, ಸ್ವಲ್ಪ ಅಫೀಮು ಎಲ್ಲಿ ಸಿಕ್ಕಿದರೆ ಅಲ್ಲಿ ಅವನು ಇದ್ದುಬಿಡುತ್ತಿದ್ದನು. ಅವನಿಗೆ ಮತ್ತೇನೂ ಬೇಕಾಗಿರಲಿಲ್ಲ. ಅಲ್ಲಿ-ಇಲ್ಲಿ ಬಿದ್ದಿರುತ್ತಿದ್ದನು. ಅನೇಕ ದಿನಗಳವರೆಗೆ ನಮ್ಮ ಮನೆಯಲ್ಲಿ ವಾಸವಾಗಿದ್ದನು. ಅವನು ಹುಚ್ಚನೆಂದು ಕರುಣೆಯಿಂದ ನಮ್ಮ ಮನೆಯಲ್ಲಿಟ್ಟುಕೊಂಡಿದ್ದೆವು. ಆದರೆ ನಾವೂ ಅವನನ್ನು ಬಹುದಿನವಿಟ್ಟುಕೊಳ್ಳಲಾಗಲಿಲ್ಲ. ಎಲ್ಲಿಯೂ ನೆಲೆಯಾಗಿರದಪ್ರಾಣಿ ಅದು. ಒಂದು ದಿನ ಬೆಳಿಗ್ಗೆ ಎದ್ದು, ಬ್ರಹ್ಮಚಾರಿಗಳಂತೆ ಕಾವಿ ವಸ್ತ್ರವನ್ನುಟ್ಟುಕೊಂಡು ಎಲ್ಲಿಗೊ ಹೊರಟುಹೋದ, ಅವನು ಎಲ್ಲಿಗೆ ಹೋದ ಎಂಬುದು ಈವರೆಗೆ ತಿಳಿಯಲಿಲ್ಲ, ಇಂದಿನವರೆಗೆ ಅವನು ಹಿಂತಿರುಗಿ ಬಂದಿಲ್ಲ.

ಅವನದಾಗಿ ಒಂದು ದಫ್ತರದ (ಕಡತದ) ಗಂಟು ಇತ್ತು. ಒಂದು ತುಂಡು ಕಾಗದ ಸಿಕ್ಕಿದರೆ ಕಮಲಾಕಾಂತನು ಅದರಲ್ಲಿ ಏನೇನೊ ಚಿತ್ರಗಳನ್ನು ಬರೆದಿಡುತ್ತಿದ್ದನು, ಅದೊಂದೂ ನಮಗೆ ಅರ್ಥವಾಗುತ್ತಿರಲಿಲ್ಲ. ಆಗಾಗ್ಗೆ, ನಮಗೆ ನಿದ್ದೆ ಬರುವಾಗ ಅವನು ಕೆಲವು ಲೇಖನಗಳನ್ನು ಓದಿ ಹೇಳುತ್ತಿದ್ದನು. ಆ ಕಾಗದಗಳನ್ನೆಲ್ಲ ಒಂದು ಮಸಿಯಿಂದ ಚಿತ್ರಿತವಾದ ಪುರಾತನ ಜೀರ್ಣ ವಸ್ತ್ರದ ತುಂಡಿನಲ್ಲಿ ಅವನು ಕಟ್ಟಿಟ್ಟಿದ್ದನು. ನಮ್ಮ ಮನೆ ಬಿಟ್ಟು ಹೋಗುವಾಗ ಕಮಲಾಕಾಂತನು ಆ ದಫ್ತರವನ್ನು (ಕಡತದ ಗಂಟನ್ನು) ನಮಗೆ ಕೊಟ್ಟು "ನಿಮಗೆ ಇದನ್ನು ಭಕ್ಷೀಸಾಗಿ ಕೊಟ್ಟಿದ್ದೇನೆ" ಎಂದು ಹೇಳಿಹೋದನು.

ಆ ಅಮೂಲ್ಯ ರತ್ನವನ್ನು ತೆಗೆದುಕೊಂಡು ನಾವೇನು ಮಾಡಬೇಕು ? ಅಗ್ನಿದೇವನಿಗೆ ಉಪಾಹಾರವಾಗಿ ಕೊಡೋಣವೆ ಎಂದು ಮೊದಲು ಯೋಚಿಸಿ

ದ್ದಾಯಿತು. ಬಳಿಕ ಲೋಕ ಹಿತೈಷಿತೆಯು ಹೃದಯದಲ್ಲಿ ಪ್ರಬಲವಾಯಿತು. ಲೋಕದಲ್ಲಿ ಉಪಕಾರಮಾಡದಿರುವವನ ಜನ್ಮವು ವ್ಯರ್ಥವೆಂದು ಮನಸ್ಸಿಗೆ ತೋರಿತು. ಈ ಕಡತದಲ್ಲಿ ಅನಿದ್ರಾರೋಗಕ್ಕೆ ಅತ್ಯುತ್ಕೃಷ್ಟವಾದ ಔಷಧ ಏದೆ. ಇದನ್ನು ಓದುವವನಿಗೆ ತತ್ಕಾಲದಲ್ಲಿಯೆ ನಿದ್ರಾದೇವಿಯು ಪ್ರಸನ್ನ ಳಾಗುವಳು. ಅನಿದ್ರಾರೋಗ ಪೀಡಿತರಾದವರ ಉಪಕಾರಾರ್ಥವಾಗಿ ನಾವು ಕಮಲಾಕಾಂತನ ಈ ರಚನೆಗಳ ಪ್ರಚಾರದಲ್ಲಿ ಪ್ರವೃತ್ತರಾಗಿರುವೆವು.

ಇತಿ,

—"ಶ್ರೀ ಭೀಷ್ಮದೇವ ಕೋಸನವೀಶ"

# ೧. ಏಕಾಂಗಿ

## ಅದಾರು ಹಾಡುವವರು?

ಬಹು ಕಾಲಕ್ಕೆ ಹಿಂದೆ ಮರೆತ ಸುಖಸ್ವಪ್ನದ ನೆನಪಿನಂತೆ ಈ ಮಧುರವಾದ ಗೀತೆಯು ಕರ್ಣರಂಧ್ರವನ್ನು ಪ್ರವೇಶಿಸಿತು. ಅದು ಅಷ್ಟು ಮಧುರವಾಗಿ ತೋರಲು ಕಾರಣವೇನು? ಸಂಗೀತವೇನೂ ಅಷ್ಟು ಸುಂದರವಾದುದಲ್ಲ. ಪಥಿಕನು ದಾರಿಯಲ್ಲಿ ಹೋಗುತ್ತ ತನ್ನ ಮನಸ್ಸಿನಲ್ಲಿಯೇ ಹಾಡುತ್ತ ಹಾಡುತ್ತ ಹೋಗುತ್ತಿರುವನು! ಬೆಳದಿಂಗಳ ರಾತ್ರಿಯನ್ನು ನೋಡಿ ಅವನ ಹೃದಯದಲ್ಲಿ ಆನಂದವು ಉಕ್ಕೇರಿರಬಹುದು. ಸ್ವಾಭಾವಿಕವಾಗಿ ಅವನ ಕಂಠವು ಮಧುರವಾಗಿರುವುದು. ಅವನಾ ಮಧುರವಾದ ಕಂಠದಿಂದ– ಈ ಮಧುರ (ಚೈತ್ರ) ಮಾಸದಲ್ಲಿ - ತನ್ನ ಮನಸ್ಸಿನ ಸುಖದ ಮಾಧುರ್ಯವನ್ನು ಅವನು ವರ್ಷಿಸುತ್ತ ಹೋಗುತ್ತಿರುವನು. ಹಾಗಾದರೆ, ಬಹಳ ತಂತಿಗಳುಳ್ಳ ವೀಣೆಯ ತಂತಿಗಳನ್ನು ಅಂಗುಲಿಗಳು ಸ್ಪರ್ಶಿಸಿದ ಕೂಡಲೆ ಝೇಂಕರಿಸುವಂತೆ ಈ ಸಂಗೀತ ಧ್ವನಿಯ ಸ್ಪರ್ಶದಿಂದ ನನ್ನ ಹೃದಯವು ಆಲೋಡಿತವಾಯಿತೇಕೆ?

ಏಕೆ, ಎಂಬುದನ್ನಾರು ಹೇಳಬಲ್ಲರು? ಬೆಳದಿಂಗಳ ರಾತ್ರಿ ನದಿಯ ತೀರದಲ್ಲಿ ಪೂರ್ಣಚಂದ್ರನ ಕಿರಣಗಳು ನಲಿದಾಡುತ್ತಿವೆ. ಅರೆಮುಸುಕನ್ನು ಹಾಕಿಕೊಂಡಿರುವ ನೀಲವಸನದ ಸುಂದರಿಯಂತೆ, ಶೀರ್ಣಶರೀರಿಯಾದ ನೀಲಜಲಮಯ ನದಿಯು ಆ ಸೈಕತವನ್ನಾವರಿಸಿಕೊಂಡು ಪ್ರವಹಿಸುತ್ತಲಿದೆ. ರಾಜಮಾರ್ಗದಲ್ಲಿ ಕೇವಲ ಆನಂದ. ಬಾಲಕ, ಬಾಲಿಕೆ, ಯುವಕ, ಯುವತಿ, ಪ್ರೌಢರು, ವೃದ್ಧರು– ಎಲ್ಲರೂ ಆ ವಿಮಲ ಚಂದ್ರಕಿರಣದಲ್ಲಿ ಸ್ನಾತರಾಗಿ ಆನಂದಪಡುತ್ತಲಿರುವರು. ನಾನೊಬ್ಬನೇ ಕೇವಲ ಆನಂದವಿಲ್ಲದವನಾಗಿರುವೆನು. ಆದ್ದರಿಂದಲೇ ಬಹುಶಃ ಈ ನನ್ನ ಸಂಗೀತ ಹೃದಯಯಂತ್ರವು ಬಾಜಿಸಲಾರಂಭಿಸಿರಬಹುದು.

ನಾನು ಏಕಾಂಗಿ– ಆದ್ದರಿಂದಲೇ ಈ ಸಂಗೀತದಿಂದ ನನ್ನ ಶರೀರವು ರೋಮಾಂಚಿತವಾಯಿತು. ಈ ಜನಪೂರ್ಣವಾದ ನಗರಿಯಲ್ಲಿ, ಈ ಆನಂದ

ಮಯವಾದ ಮನುಷ್ಯ ಪ್ರವಾಹದಲ್ಲಿ— ನಾನು ಏಕಾಂಗಿ! ಈ ಅನಂತವಾದ ಮನುಷ್ಯ— ಪ್ರವಾಹದಲ್ಲಿ ಸೇರಿ ಈ ವಿಶಾಲ ಆನಂದತರಂಗತಾಡಿತವಾದ ಜಲದ ಬುದ್ಬುಧಗಳಲ್ಲಿ ಮತ್ತೊಂದು ಬುದ್ಬುಧವೇಕೆ ಆಗಲಾರೆ? ಹನಿ ಹನಿ ನೀರಿನಿಂದಲೆ ಸಮುದ್ರವಾಗಿರುವುದು. ನಾನೂ ಒಂದು ವಾರಿಬಿಂದು ವಾಗಿರುವೆನು. ಹಾಗಾದರೆ ಈ ಸಮುದ್ರದೊಂದಿಗೆ ಸೇರಿಕೊಳ್ಳುವುದಿಲ್ಲವೇಕೆ?

ಅದು ನನಗೆ ತಿಳಿಯದು.— ನಾನು ಏಕಾಂಗಿ ಎಂಬುದನ್ನು ಮಾತ್ರ ನಾನು ಬಲ್ಲೆನು. ಯಾರೂ ಏಕಾಂಗಿಯಾಗಿರಕೂಡದೆಂಬುದೇ ನನ್ನ ಆಶಯ. ಅನ್ಯರಾರೂ ನಿಮ್ಮ ಪ್ರಣಯ ಭಾಗಿಗಳಾಗದಿದ್ದರೆ ನಿಮ್ಮ ಮನುಷ್ಯಜನ್ಮವು ವ್ಯರ್ಥವಾದುದು. ಪುಷ್ಪದಲ್ಲಿ ಸುಗಂಧವಿದೆ. ಅದನ್ನು ಮೂಸಿನೋಡು ವವರಾರೂ ಇಲ್ಲದಿದ್ದರೆ, ಪುಷ್ಪವು ಸುಗಂಧಿತವೆಂದು ಹೇಳಲಾಗುತ್ತಿರಲಿಲ್ಲ. ಏಕೆಂದರೆ ಮೂಸುವವರ ಹೊರತು ಸುಗಂಧದ ಅಸ್ತಿತ್ವಕ್ಕೆ ಬೇರೆ ಪ್ರಮಾಣ ವೆಲ್ಲಿರುತ್ತಿತ್ತು? ನೋಡಿ, ಪುಷ್ಪವು ತನಗಾಗಿ ಅರಳುವುದಿಲ್ಲ. ನೀವು ನಿಮ್ಮ ಹೃದಯ ಪುಷ್ಪವನ್ನು ಬೇರೆಯವರಿಗಾಗಿ ಅರಳಿಸಿರಿ.

ಆದರೆ ಒಂದುಬಾರಿ ಕೇಳಿದ ಮಾತ್ರಕ್ಕೆ ಈ ಸಂಗೀತವು ಇಷ್ಟು ಮಧುರ ವಾಗಿ ಕಂಡುದೇಕೆಂದು ನಾನು ಹೇಳಲಾರೆ. ಬಹು ದಿನಗಳಿಂದ ನಾನು ಆನಂದಲಹರಿಯಿಂದ ಹೊರಟ ಗಾನವನ್ನು ಕೇಳಿರಲಿಲ್ಲ.— ಅನೇಕ ದಿನಗ ಗಳಿಂದ ಆನಂದಾನುಭವವನ್ನು ಪಡೆದಿರಲಿಲ್ಲ. ಯೌವನದಲ್ಲಿ, ಪೃಥ್ವಿಯು ಸುಂದರಿಯಾಗಿದ್ದಾಗ, ಪ್ರತಿ ಪುಷ್ಪದಲ್ಲಿಯೂ ನನಗೆ ಸುಗಂಧವೇ ಕಂಡು ಬರುತ್ತಿದ್ದಾಗ, ಪ್ರತಿ ಪರ್ಣ ಮರ್ಮರದಲ್ಲಿಯೂ ಮಧುರ ಧ್ವನಿಯು ಕೇಳಿ ಬರುತ್ತಿದ್ದಾಗ, ಪ್ರತಿ ನಕ್ಷತ್ರದಲ್ಲಿಯೂ ನಾನು “ ಚಿತ್ರಾ” “ ರೋಹಿಣಿ ” ಯರ ಶೋಭೆಯನ್ನು ನೋಡುತ್ತಿದ್ದಾಗ, ಪ್ರತಿ ಮನುಷ್ಯರ ಮುಖ ದಲ್ಲಿಯ ಸರಳತೆಯೇ ನನಗೆ ಕಂಡುಬರುತ್ತಿದ್ದಾಗ - ನನಗೆ ಆನಂದವಿತ್ತು. ಪೃಥ್ವಿಯು ಈಗಲೂ ಹಾಗೆಯೇ ಇದೆ, ಮನುಷ್ಯ ಚರಿತ್ರವೂ ಈಗಲೂ ಹಾಗೆಯೇ ಇದೆ. ಆದರೆ ಈ ಹೃದಯವು ಈಗ ಹಾಗಿಲ್ಲ. ಆ ಸಮಯದಲ್ಲಿ ಸಂಗೀತವನ್ನು ಕೇಳಿ ಆನಂದಿತನಾಗುತ್ತಿದ್ದೆನು. ಇಂದು ಅದೇ ಸಂಗೀತವನ್ನು ಕೇಳಿ ಅದೇ ಆನಂದವು ಸ್ಮರಣೆಗೆ ಬರುತ್ತಿದೆ. ಅಂದು ಯಾವ ಅವಸ್ಥೆಯಲ್ಲಿ ಯಾವ ಸುಖದಿಂದ ಈ ಆನಂದವನ್ನು ಅನುಭವಿಸುತ್ತಿದ್ದೆನೋ ಆ ಅವ

ಸ್ಥೆಯೂ ಆ ಸುಖವೂ ಈಗ ಸ್ಮರಣೆಗೆ ಬರುತ್ತಲಿವೆ. ಒಂದು ಮುಹೂರ್ತ ಕಾಲ ಇಂದು ಆ ಯೌವ್ವನವನ್ನು ಹೊಂದಿದೆನು. ಅಂದಿನಂತೆಯೆ ಇಂದು - ಮನಸ್ಸಿನಲ್ಲಿಯೆ-ಮಿತ್ರಮಂಡಳಿಯ ಮಧ್ಯೆ ಕುಳಿತು ಅಕಾರಣವಾಗಿ ಉಚ್ಚ ಸ್ವರದಲ್ಲಿ ನಗಲಾರಂಭಿಸಿದೆನು. ಯಾವ ಮಾತನ್ನು ನಿಷ್ಪ್ರಯೋಜಕವೆಂದು ತಿಳಿದು ಈಗ ಹೇಳಲಾರೆನೋ ಆ ನಿಷ್ಪ್ರಯೋಜಕ ನುಡಿಗಳನ್ನು ಚಿತ್ತ ಚಾಂಚಲ್ಯದ ದೆಸೆಯಿಂದ ಆಗ ಮತ್ತೆ ಮತ್ತೆ ಹೇಳುತ್ತಿದ್ದೆನು; ಈಗಲೂ ಹೇಳಲಾರಂಭಿಸಿದೆನು. ಅಂದು ಸರಳ ಹೃದಯನಾಗಿ ಪರರ ಪ್ರಣಯವು ಅಕೃತಿಮವಾದುದೆಂದು ಭಾವಿಸುತ್ತಿದ್ದೆನು. ಇಂದೂ ಹಾಗೆ ಮಾಡಿದೆನು. ಹೀಗೆ ಕ್ಷಣಕಾಲ ಭ್ರಾಂತಿಯುಂಟಾಯಿತು – ಆದುದರಿಂದ ಈ ಸಂಗೀತವು ಮನೋಹರವಾಗಿ ಕಂಡಿತು. ಕಾರಣವು ಅದೇ ಅಲ್ಲ. ಅಂದು ಸಂಗೀತವು ನನಗೆ ರುಚಿಸುತಿತ್ತು, ಇಂದು ರುಚಿಸದು. ಚಿತ್ತ ಪ್ರಫುಲ್ಲತೆಯ ದೆಸೆಯಿಂದ ಅಂದು ಅದು ರುಚಿಸುತ್ತಿತ್ತು ; ಇಂದು ಆ ಪ್ರಫುಲ್ಲತೆಯಿಲ್ಲವಾದುದರಿಂದ ರುಚಿಸಲಿಲ್ಲ. ಇಂದು ನನ್ನ ಮನಸ್ಸಿನಲ್ಲಿಯೇ ಧ್ಯಾನಮಗ್ನನಾಗಿ ಆ ಗತ ಯೌವನ ಸುಖವನ್ನು ಕುರಿತು ಚಿಂತಿಸುತ್ತಿದ್ದೆನು. ಆ ಸಮಯದಲ್ಲಿ ಈ ಪೂರ್ವ ಸ್ಮೃತಿ ಸೂಚಕವಾದ ಸಂಗೀತವು ಕರ್ಣವನ್ನು ಪ್ರವೇಶಿಸಿತು. ಆದುದರಿಂದ ಅದು ಮಧುರವಾಗಿರುವಂತೆ ಬೋಧೆಯಾಯಿತು.

ಆ ಪ್ರಫುಲ್ಲತೆ, ಆ ಸುಖ ಇಂದು ಇಲ್ಲವೇಕೆ? ಇಂದು ಸುಖದ ಸಾಮಗ್ರಿಗಳು ಕಡಿಮೆಯಾಗಿವೆಯೆ? ಸಂಗ್ರಹ ಮತ್ತು ಕ್ಷಯ – ಇವು ಬ್ರಹ್ಮಾಂಡದ ನಿಯಮಗಳು. ಆದರೆ ಕ್ಷಯಕ್ಕಿಂತಲೂ ಸಂಗ್ರಹವೇ ಅಧಿಕ ವಾಗುವುದೂ ಬ್ರಹ್ಮಾಂಡದ ನಿಯಮವಾಗಿದೆ. ನೀವು ಜೀವನ ಪಥನದಲ್ಲಿ ಎಷ್ಟು ಮುಂದರಿಯುವಿರೊ ಅಷ್ಟು ಸುಖದ ಸಾಮಗ್ರಿಗಳನ್ನೂ ಸಂಗ್ರಹಿಸು ವಿರಿ. ಹಾಗಾದರೆ ವಯಸ್ಸು ಅಧಿಕವಾದಾಗ ಸ್ಫೂರ್ತಿ ಕಡಿಮೆಯಾಗುವುದೇಕೆ? ಆಗ ಪೃಥ್ವಿಯು ಅಷ್ಟು ಸುಂದರವಾಗೇಕೆ ಕಾಣುವುದಿಲ್ಲ? ಅಂತೆಯೇ ಆಕಾ ಶದಲ್ಲಿ ತಾರೆಗಳೇಕೆ ಶೋಭಿಸುವುದಿಲ್ಲ? ಆಕಾಶದ ನೀಲಿಮೆಯಲ್ಲಿ ಇಂದು ಆ ಉಜ್ವಲತೆಯಿಲ್ಲವೇಕೆ? ಅಂದಿನಾ ತೃಣಪಲ್ಲವಮಯವಾದ, ಕುಸುಮ ಸುವಾಸಿತ, ಸ್ವಚ್ಛ ಕಲ್ಲೋಲಿನೀ – ಶೀಕರ – ಸಿಕ್ತ - ವಸನ್ತಪವನವಿಧೌತ ವಾಗಿದ್ದ ಭೂಮಿಯು ಇಂದು ಮರಳಿನಿಂದ ತುಂಬಿದ ಮರುಭೂಮಿ

ಯಂತೇಕೆ ಕಾಣುವುದು ? ಕೇವಲ ಅಂದಿನಾ ಬಣ್ಣದ ಗಾಜು (ಸುಲೋಚನ) ಇಲ್ಲವೆಂದು ಇಂದು ಎಲ್ಲವೂ ವಿಪರೀತವಾಗಿ ಗೋಚರಿಸುತ್ತಿದೆ. ಆಸೆ ಎಂಬುದೇ ಆ ಬಣ್ಣದ ಗಾಜು. ಯೌವನದಲ್ಲಿ ಸಂಗ್ರಹಿಸಿದ ಸುಖವು ಅಲ್ಪವಾಗಿರುವುದು, ಆದರೆ ಸುಖದ ಆಸೆಯು ಅಪರಿಮಿತವಾಗಿರುವುದು. ಇಂದು ಸಂಚಿತ ಸುಖವಾದರೊ ಅಧಿಕವಾಗಿದೆ. ಆದರೆ ಆ ಬ್ರಹ್ಮಾಂಡದ ವ್ಯಾಪಕವಾದ ಆಸೆ ಎಲ್ಲಿದೆ ? ಆಗ ಯಾವುದು, ಹೇಗೆ ಆಗುವುದೆಂದು ತಿಳಿಯುತ್ತಿರಲಿಲ್ಲ. ಆದ್ದರಿಂದ ಅನೇಕ ಆಸೆಗಳನ್ನಿಟ್ಟುಕೊಂಡಿದ್ದೆವು. ಈ ಸಂಸಾರ ಚಕ್ರವನ್ನಡರುವವರು ಮತ್ತೆ ಹೊರಟ ಸ್ಥಳಕ್ಕೇ ಹಿಂತಿರುಗಬೇಕಾಗುವುದೆಂದು ಇಂದು ತಿಳಿಯುತ್ತಿದೆ. ಈಗ ನಾನು ಮುಂದರಿಯುವೆನು ಎಂದು ಹೇಳಿಕೊಂಡಾಗ ಅವನು ಕೇವಲ ಆವರ್ತನಮಾಡುತ್ತಿರುವನು - ಸುತ್ತು ಹಾಕುತ್ತಿರುವನು ಮಾತ್ರ. ಸಂಸಾರಸಾಗರದಲ್ಲಿ ನಾವು ಈಜಲಾರಂಭಿಸಿದಾಗ ಅದರ ಅಲೆಗಳು ನಮ್ಮನ್ನು ಬಡಿದು ದಡಕ್ಕೇ ತಂದುಬಿಡುವುವು ಎಂದು ಈಗ ತಿಳಿಯುತ್ತಿದೆ. - ಈ ಅರಣ್ಯದಲ್ಲಿ ಮಾರ್ಗವಿಲ್ಲ, ಈ ಪ್ರಾಂತರದಲ್ಲಿ ಜಲಾಶಯವಿಲ್ಲ, ಈ ನದಿಗೆ ತೀರವಿಲ್ಲ, ಈ ಸಾಗರ ಮಧ್ಯದಲ್ಲಿ ದ್ವೀಪಗಳಿಲ್ಲ, ಈ ಅಂಧಕಾರದಲ್ಲಿ ನಕ್ಷತ್ರಗಳ ಪ್ರಕಾಶವಿಲ್ಲ - ಎಂದು ಈಗ ತಿಳಿಯುತ್ತಿದೆ - ಕುಸುಮದಲ್ಲಿ ಕೀಟವಿದೆ, ಕೋಮಲ ಪಲ್ಲವದಲ್ಲಿ ಕಂಟಕವಿದೆ, ಆಕಾಶದಲ್ಲಿ ಮೇಘವಿದೆ, ನಿರ್ಮಲವಾದ ನದಿಯಲ್ಲಿ ಸುಳಿಗಳಿವೆ, ಫಲದಲ್ಲಿ ವಿಷವಿದೆ, ಉದ್ಯಾನದಲ್ಲಿ ಸರ್ಪವಿದೆ, ಮನುಷ್ಯ ಹೃದಯದಲ್ಲಿ ಕೇವಲ ಆತ್ಮ ಪ್ರೇಮವಿದೆ – ಎಂದು ಇಂದು ತಿಳಿಯಿತು. ಪ್ರತಿಯೊಂದು ವೃಕ್ಷವೂ ಫಲಿಸುವುದಿಲ್ಲ, ಪ್ರತಿಯೊಂದು ಪುಷ್ಪದಲ್ಲಿಯೂ ಸುಗಂಧವಿಲ್ಲ, ಎಲ್ಲ ಮೇಘಗಳೂ ವರ್ಷಿಸಲಾರವು, ಎಲ್ಲ ವನಗಳಲ್ಲಿಯೂ ಚಂದನವಿರುವುದಿಲ್ಲ, ಎಲ್ಲ ಆನೆಗಳ ಮಸ್ತಕದಲ್ಲಿ ಮುತ್ತು ಇರುವುದಿಲ್ಲ – ಎಂದು ಈಗ ತಿಳಿದುಬರುತ್ತಿದೆ. ಗಾಜೂ ಪಚ್ಚೆಯಂತೆ ಉಜ್ವಲವಾಗಿರುವುದು, ಹಿತ್ತಾಳೆಯೂ ಸುವರ್ಣದಂತೆ ಹೊಳೆಯುವುದು. ಕಂಚೂ ರಜತ (ಬೆಳ್ಳಿ) ದಂತೆ ಮಧುರ ನಾದವನ್ನೀಯುವುದು, – ಎಂದು ತಿಳಿಯುತ್ತಿದೆ. ಆದರೆ - ಇದೇನಿದು ! - ಏನೋ ಹೇಳುತ್ತಿದ್ದೆ. ಮರೆತುಬಿಟ್ಟೆನು. - ಹೌದು ಅದೇ ಗೀತಧ್ವನಿ ! ಅದು ಮನೋಹರವಾಗಿ ಕಂಡಿತು, ನಿಜ. ಆದರೆ ಅದನ್ನೇ ಎರಡನೆಯ ಬಾರಿ ಕೇಳಲಪೇಕ್ಷಿಸುವುದಿಲ್ಲ.

ಈ ಮನುಷ್ಯ ಕಂಠಜಾತ ಸಂಗೀತಕ್ಕೆ ಸಮಾನವಾದ ಸಂಸಾರದ ಸಂಗೀತ ವೊಂದಿರುವುದು. ಸಂಸಾರ ರಸದಲ್ಲಿ ರಸಿಕರಾದವರು ಅದನ್ನು ಕೇಳಬಲ್ಲರು. ಆ ಸಂಗೀತವನ್ನು ಕೇಳಲು ನನ್ನ ಮನಸ್ಸು ಆತುರಗೊಂಡಿದೆ. ಆ ಸಂಗೀತ ವನ್ನು ನಾನು ಕೇಳಲಾರೆನೇನು? ಕೇಳುವೆನು, ಆದರೆ ನಾನಾವಾದ್ಯ ಧ್ವನಿ ಸಂಮಿಲಿತ, ಬಹು ಕಂಠ ಪ್ರಸೂತವಾದಾ ಪೂರ್ವ ಶ್ರುತ ಸಂಸಾರ ಗೀತೆ ಯನ್ನು ಇನ್ನು ಕೇಳುವುದಿಲ್ಲ. ಇಂದು ಅಂದಿನಾ ಗಾಯಕರಿಲ್ಲ. - ಆ ವಯಸ್ಸು ಈಗಿಲ್ಲ. - ಆ ಆಸೆಯೂ ಇಲ್ಲ! ಆದರೆ ಅದಕ್ಕೆ ಬದಲಾಗಿ ಇಂದು ನಾನು ಕೇಳುತ್ತಿರುವ ಸಂಗೀತವು ಅಧಿಕ ಪ್ರಸನ್ನತೆಯನ್ನೀಯುವುದಾಗಿರುವುದು. ಅನನ್ಯ ಸಹಾಯಕವಾದ ಅದ್ವಿತೀಯವಾದ ಗೀತಾಧ್ವನಿಯಿಂದ ಇಂದು ನನ್ನ ಕರ್ಣವು ಪರಿಪೂರಿತವಾಗಿದೆ. "ಪ್ರೇಮ"ವೇ ಈ ಸಂಸಾರದಲ್ಲಿ ವಿಶ್ವ ವ್ಯಾಪಕವಾದುದು. ಈಶ್ವರನೇ "ಪ್ರೀತಿ". ಪ್ರೀತಿಯೇ ಇಂದು ನನ್ನ ಕರ್ಣ ಗಳಿಗೆ ಸಂಸಾರ ಸಂಗೀತವಾಗಿರುವುದು. ಈ ಮಹಾ ಸಂಗೀತದೊಂದಿಗೆ ಮಿಳಿತವಾಗಿ ಮನುಷ್ಯ ಹೃದಯ ವೀಣೆಯು ಅನಂತಕಾಲದವರೆಗೆ ಬಾಜಿ ಸುತ್ತಿರಲಿ! ಮನುಷ್ಯ ಜಾತಿಯಲ್ಲಿ ನನ್ನ ಪ್ರೀತಿಯು ನೆಲೆಯಾದರೆ ನಾನು ಅನ್ಯ ಸುಖವನ್ನು ಅಪೇಕ್ಷಿಸುವುದಿಲ್ಲ.

---

## ೨. ಮನುಷ್ಯ ಫಲ

ಅಫೀಮಿನ ಮಾತ್ರಾ ಪರಿಮಾಣವು ಹೆಚ್ಚಾದಕೂಡಲೆ ನನಗೆ ಬೋಧೆ ಯಾಗುವುದು - ಮನುಷ್ಯರೆಲ್ಲರು ಫಲವಿಶೇಷರಾಗಿರುವರು. ಆ ಫಲಗಳೆಲ್ಲ ಮಾಯಾವೃತವಾದ ಸಂಸಾರವೃಕ್ಷದಲ್ಲಿ ನೇತಾಡುತ್ತಿರುವವು! ಪಕ್ವವಾದ ಕೂಡಲೆ ಬಿದ್ದುಬಿಡುವವು. ಎಲ್ಲವೂ ಪಕ್ವವಾಗಿಯೆ ಬೀಳುವುದಿಲ್ಲ. ಕೆಲವು ಅಕಾಲದಲ್ಲಿ ಬಿರುಗಾಳಿಯಿಂದ ಬಿದ್ದುಬಿಡುವವು. ಕೆಲವನ್ನು ಹುಳುಗಳು ತಿಂದುಬಿಡುವವು. ಕೆಲವನ್ನು ಪಕ್ಷಿಗಳು ಕುಕ್ಕಿಬಿಡುವವು. ಕೆಲವು ಬಾಡಿ, ಜೀರ್ಣವಾಗಿ ಬೀಳುವವು. ಕೆಲವು ಸುಪಕ್ವವಾದಮೇಲೆ ಆಹೃತವಾಗುವವು. ಪಕ್ವವಾದ ಬಳಿಕ ಕಿತ್ತಿದವುಗಳು ಗಂಗಾಜಲದಲ್ಲಿ ಧೌತವಾಗಿ ದೇವರ ಸೇವೆಗೂ ಬ್ರಾಹ್ಮಣ ಭೋಜನಕ್ಕೂ ಅರ್ಪಿತವಾಗುವವು - ಅವುಗಳ ಫಲ ಜನ್ಮವು—ಮನುಷ್ಯ ಜನ್ಮವು—ಸಾರ್ಥಕವಾದ್ದು! ಕೆಲವು ಸುಪಕ್ವವಾಗಿ ವೃಕ್ಷ ದಿಂದ ತಾವಾಗಿಯೇ ಜಾರಿ ಮಣ್ಣಿನಲ್ಲಿ ಬಿದ್ದುಬಿಡುವವು. ಅವುಗಳನ್ನು ನರಿಗಳು ತಿನ್ನುವವು. ಅಂತಹವುಗಳ ಫಲಜನ್ಮವು – ಮನುಷ್ಯ ಜನ್ಮವು – ವ್ಯರ್ಥವಾದ್ದು. ಕೆಲವು ಫಲಗಳು ತಿಕ್ತವಾಗಿ (ಕಹಿಯಾಗಿ) ರುವವು. ಕೆಲವು ಕಟು (ಖಾರ) ವಾಗಿರುವವು. ಕೆಲವು ಕಷಾಯ (ಒಗರು) ರಸವುಳ್ಳ ವಾಗಿರುವವು; - ಆದರೆ ಅವುಗಳಿಂದ ಅಮೂಲ್ಯವಾದ ಔಷಧಗಳಾಗುವವು! ಕೆಲವು ವಿಷಮಯ - ಅವನ್ನು ತಿಂದವರು ಸಾಯುವರು! ಬೇರೆ ಕೆಲವು ಮಹಾಕಾಲಜಾತಿಗೆ ಸೇರಿದವು – ಕೇವಲ ನೋಡುವುದಕ್ಕೆ ಸುಂದರವಾಗಿ ರುವವು!

ಆಗಾಗ್ಗೆ ನಿಷಾದಿಂದ ತಲೆದೂಗುತ್ತ ತಲೆದೂಗುತ್ತಿರುವಾಗ ನೋಡಿ ದರೆ ನನಗೆ ಕಾಣುವುದೇನು?, ಬೇರೆ ಬೇರೆ ಸಂಪ್ರದಾಯದ ಮನುಷ್ಯರೆಲ್ಲರು ಬೇರೆ ಬೇರೆ ಜಾತಿಯ ಫಲಗಳು. ನಮ್ಮ ದೇಶದ ಈಗಿನ "ದೊಡ್ಡ ಮನು ಷ್ಯರು" ಮನುಷ್ಯಜಾತಿಯಲ್ಲಿ ಹಲಸಿನಕಾಯಿ ಗುಂಪಿಗೆ ಸೇರಿದವರು.– ಅವುಗಳಲ್ಲಿ ಕೆಲವದರಲ್ಲಿ ದೊಡ್ಡ ತೊಳೆಗಳಿರುವವು. ಕೆಲವದರಲ್ಲಿ ಬರೀ ನಾರು, ಮತ್ತೆ ಕೆಲವು ಕೇವಲ ದಪ್ಪ ಸಿಪ್ಪೆಯುಳ್ಳವು. ಅವು ಪಶುಗಳಿಗೆ

ತಿನ್ನುವುದಕ್ಕೆ ಯೋಗ್ಯವಾದವು. ಕೆಲವು ಅಕಾಲದಲ್ಲಿ ಪಕ್ವವಾಗುವವು. ಕೆಲವು ಕೇವಲ ಅಪಕ್ವವಾಗಿಯೆ ಇರುವವು. ಎಂದಿಗೂ ಪಕ್ವವಾಗುವುದೆ ಇಲ್ಲ. ಕೆಲವು ಪಕ್ವಾವಸ್ಥೆಗೆ ಬಂದರೆ ಪಕ್ವವಾಗಬಲ್ಲವು - ಆದರೆ ಪಕ್ವಾವಸ್ಥೆಗೆ ಬರಲಾರವು. ಪೃಥ್ವಿಯ ರಾಕ್ಷಸ ರಾಕ್ಷಸಿಯರು ಕಾಯನ್ನೆ ಕಿತ್ತು ಪಲ್ಯ ಮಾಡಿ ತಿಂದುಬಿಡುವರು. ಒಂದು ವೇಳೆ ಅವು ಪಕ್ವವಾದರೆ ದೊಡ್ಡ ಶೃಗಾಲ (ನರಿ) ಗಳ ಪೀಡೆ. ಆ ಮರಗಳ ಮುಂಡವು ದಪ್ಪವಾಗಿರಬೇಕು, ಇಲ್ಲವೆ ಹಣ್ಣು ಎತ್ತರವಾದ ಕೊಂಬೆಯಲ್ಲಿ ಬಿಡಬೇಕು. - ಇಲ್ಲವಾದರೆ ನರಿಗಳು ಅವುಗಳನ್ನು ಹೇಗಾದರೂ ತಿಂದುಬಿಡುವವು. ನರಿಗಳಲ್ಲಿ ಕೆಲವು ದಿವಾನ, ಕೆಲವು ಆಡಳಿತಗಾರ, ಕೆಲವು ಕಾರಕೂನ, ಕೆಲವು ನಾಯಬ, ಕೆಲವು ಗುಮಾಸ್ತ, ಕೆಲವು ಕೇವಲ ಆಶೀರ್ವಾದಕ - ರೂಪದಲ್ಲಿರುವವು. ಇವುಗಳ ಪೀಡೆಯಿಂದ ಪಾರಾಗಿ, ಪಕ್ವವಾಗಿ ಹೇಗೋ ಮನೆಗೆ ಹೋದರೆ, ಅಲ್ಲಿ ನೊಣಗಳು 'ಗೊಂಯ್' ಎಂದು ಮುತ್ತಲಾರಂಭಿಸುವವು. ನೊಣಗಳಿಗೆ ಹಲಸಿನಹಣ್ಣು ಬೇಡ, ಅದರ ರಸವು ಮಾತ್ರ ಬೇಕು. - ಈ ಮಕ್ಷಿಕವು ಕನ್ಯಾಭಾರಗ್ರಸ್ತವಾಗಿರುವದರಿಂದ ಅದಕ್ಕೆ ಸ್ವಲ್ಪ ರಸವನ್ನುಕೊಡು. ಓ, ಅದು ಮಾತೃದಾಯಿಯಾಗಿದೆ - ಒಂದು ತೊಟ್ಟು ರಸಕೊಡು - ಇದು ಒಂದು ಪುಸ್ತಕವನ್ನು ರಚಿಸಿದೆ - ಸ್ವಲ್ಪ ರಸಕೊಡು; ಆ ನೊಣವು ಹೊಟ್ಟೆ ಹೊರೆಯುವುದಕ್ಕಾಗಿ ಒಂದು ವರ್ತಮಾನ ಪತ್ರಿಕೆಯನ್ನು ಹೊರಡಿಸಿದೆ, ಅದಕ್ಕೂ ಸ್ವಲ್ಪ ರಸಕೊಡು - ಇದು ಹಲಸಿನ ಗಿಡದ ಚಿಕ್ಕಮ್ಮನ ಹಿರಿಯ ಮಗನ ಭಾವನ ಮೈದುನ-ತಿನ್ನುವುದಕ್ಕೇನೂ ಇಲ್ಲ-ಸ್ವಲ್ಪ ರಸಕೊಡು - ಈ ನೊಣದ ಪಾಠಶಾಲೆಯಲ್ಲಿ ಹದಿಮೂರು ಮುಕ್ಕಾಲು ಜನ ವಿದ್ಯಾರ್ಥಿಗಳು ಓದುತ್ತಾರೆ - ಸ್ವಲ್ಪ ರಸಕೊಡು - ಎಂಬ ಗುಲ್ಲು - ಮತ್ತೆ ಹಲಸಿನ ಹಣ್ಣನ್ನು ಮನೆಯಲ್ಲಿ ಇಡುವುದೂ ಒಳ್ಳೆಯದಲ್ಲ - ಅದರಿಂದ ಮನೆಯೆಲ್ಲ ವಾಸನೆ ! ನನ್ನ ವಿವೇಚನೆಯಂತೆ - ಹಣ್ಣನ್ನು ಕೊಯ್ದು, ಉತ್ತಮ ನಿರ್ಜಲ ದುಗ್ಧದಲ್ಲಿ ಹಾಕಿ ಖೀರುಮಾಡಿ, ಕಮಲಾಕಾಂತನಂತಹ ಶ್ರೇಷ್ಠ ಬ್ರಾಹ್ಮಣನಿಗೆ ಭೋಜನಮಾಡಿಸುವುದು ಒಳ್ಳೆಯದು.

ಈ ದೇಶದ ಸಿವಿಲ್ ಸರ್ವಿಸ್‌ನ ಸಾಹೇಬಾದಿಗಳು ಮನುಷ್ಯ ಜಾತಿಯಲ್ಲಿ ಆಮ್ರ (ಮಾವಿನ) ಫಲವೆಂದು ತಿಳಿದಿರುವೆನು. ಮಾವಿನಹಣ್ಣು

ಈ ದೇಶದಲ್ಲಿ ಆಗುತ್ತಿರಲಿಲ್ಲ. ಯಾವನೋ ಮಹಾತ್ಮನು ಈ ಉಪಾದೇಯ ವಾದ ಫಲವನ್ನು ಸಾಗರದಾಚೆಯಿಂದ ಈ ದೇಶಕ್ಕೆ ತಂದನು - ಎಂದು ಕೆಲ ವರು ಹೇಳುವರು. ಮಾವಿನ ಹಣ್ಣು ನೋಡುವುದಕ್ಕೆ ಬಣ್ಣ ಬಣ್ಣವಾಗಿ ರುವುದು, ಸುಂದರವಾಗಿರುವುದು. ಹಣ್ಣಾಗದ ಮಾವು ಬಲು ಹುಳಿ, ಆದರೆ ಹಣ್ಣಾದ ಮೇಲೆ ಸಿಹಿಯಾಗುವುದು. ಆದಾಗ್ಗೂ ಒಳಗೆ, ವಾಟೆಯ ಮೇಲೆ ಹುಳಿಯಾಗಿಯೆ ಇರುವುದು - ಹುಟ್ಟುಗುಣ ಹೋಗುವುದಿಲ್ಲ. ಕೆಲವು ಮಾವು ಗಳು ಹಣ್ಣಾದ ಮೇಲೂ ಹುಳಿಯಾಗಿಯೆ ಇರುವುವು. ಆದರೆ ನೋಡು ವುದಕ್ಕೆ ದೊಡ್ಡದಾಗಿಯೂ ಒಳ್ಳೆಯ ಬಣ್ಣವುಳ್ಳದಾಗಿಯೂ ಇರುವವು. ಮಾರುವವರು ಗಿರಾಕಿಗಳನ್ನು ಮೋಸಗೊಳಿಸಿ ಸೇಕಡಾ ಇಪ್ಪತ್ತೈದು ರೂಪಾಯಿನವರೆಗೆ ಮಾರಿಬಿಡುವರು. ಕೆಲವು ಮಾವುಗಳು ಕಾಯಿಯಾಗಿ ರುವಾಗ ಸಿಹಿಯಾಗಿರುವವು - ಹಣ್ಣಾದಾಗ ಸಪ್ಪೆಯಾಗುವವು. ಕೆಲವು ಅರ್ಧ ಪಕ್ವವಾಗಿಯೆ ಇರುವವು. ಅವುಗಳನ್ನು ಕುಟ್ಟಿ ಉಪ್ಪುಹಾಕಿ ಚಟ್ಣಿಮಾಡಿ ಬಿಡುವದು ಒಳ್ಳೆಯದು.

ಮಾವಿನಹಣ್ಣು ತಿನ್ನುವುದು ಎಲ್ಲರಿಗೂ ಗೊತ್ತಿರುವುದಿಲ್ಲ. ಗಿಡದಿಂದಿ ಳಿಸಿದ ಕೂಡಲೆ ತಿನ್ನುವುದು ಒಳ್ಳೆಯದಲ್ಲ. ಅದನ್ನು ಗೌರವವೆಂಬ ಜಲ ದಲ್ಲಿ ಸ್ವಲ್ಪಹೊತ್ತು ಇಟ್ಟು, ಬೇಕಾದರೆ ಅದಕ್ಕೆ ಮನಸ್ಸಂತೋಷವೆಂಬ ಮಂಜುಗಡ್ಡೆಯನ್ನು ಸೇರಿಸಬೇಕು. ಅನಂತರ ಚೂರಿಯನ್ನು ಚಲಾಯಿಸಿ ಅದನ್ನು ಸ್ವಚ್ಛಂದವಾಗಿ ತಿನ್ನಬಹುದು.

ಸ್ತ್ರೀಯರನ್ನು ಲೌಕಿಕ ದೃಷ್ಟಿಯಿಂದ ಕದಳೀ ಫಲದೊಂದಿಗೆ ಹೋಲಿಸ ಬಹುದು. ಆದರೆ ಅದು ಸರಿಯಲ್ಲ. ಕದಳೀಫಲಕ್ಕೂ ಭುವನಮೋಹಿನಿ ಜಾತಿಗೂ ಸ್ವಲ್ಪವೂ ಸಾದೃಶ್ಯವಿರುವಂತೆ ತೋರುವುದಿಲ್ಲ. ಸ್ತ್ರೀಯರು ಗೊಂಚಲು ಗೊಂಚಲಾಗಿ ಫಲಿಸುವರೆ? ಮತ್ತಾರ ಅದೃಷ್ಟದಲ್ಲಿ ಫಲಿಸಿ ದರೂ ಫಲಿಸಬಹುದು - ಕಮಲಾಕಾಂತನ ಭಾಗ್ಯದಲ್ಲಿ ಮಾತ್ರ ಫಲಿಸಿಲ್ಲ. ಕದಳಿಯೊಂದಿಗೆ ಕಾಮಿನಿಯರ ಹೋಲಿಕೆ ಸ್ವಲ್ಪ ಇದೆ - ಇಬ್ಬರೂ ವಾನರ ಗಳಿಗೆ ಪ್ರಿಯರು. ಕಾಮಿನಿಯರ ಇದೊಂದು ಗುಣವನ್ನು ಬಿಟ್ಟರೆ, ಕದಳಿ ಯೊಂದಿಗೆ ಅವರನ್ನು ತುಲನೆಮಾಡಲಾಗುವುದಿಲ್ಲ. ಪಕ್ಷಾಂತರದಲ್ಲಿ ಕೆಲವರು ಕಟುಭಾಷಿಗಳು - ಅವರು ಯುವತಿ ಗಣವನ್ನು ಮಹಾಕಾಲ ಫಲದೊಂದಿಗೆ

ಹೋಲಿಸುವರು-ಕೆಲವರು ಅವರಿಗೆ ದುರ್ಮುಖಿಗಳೆಂದು ನಾಮಕರಣಮಾಡು ವರು - ನಾನು ಸುಂದರಿಯರ ಭೃತ್ಯಸ್ವರೂಪನು - ನಾನು ಹಾಗೆ ಹೇಳಲಾರೆ.

ರಮಣೀ ಮಂಡಲಿಯು ಈ ಸಂಸಾರದಲ್ಲಿ ನಾರಿಕೇಳವಾಗಿರುವುದೆಂದು ನಾನು ಹೇಳುವೆನು. ನಾರಿಕೇಳವೂ (ತೆಂಗು) ಗೊಂಚಲು ಗೊಂಚಲಾಗಿ ಫಲಿಸುವುದು. ಆದರೆ (ವ್ಯಾಪಾರಿಗಳನ್ನು ಬಿಟ್ಟು) ಯಾರೂ ಅದನ್ನು ಗೊಂಚಲು ಗೊಂಚಲಾಗಿ ಕಿತ್ತುವುದಿಲ್ಲ. ಕೆಲವರು ಯಾವಾಗಲಾದರೂ ದ್ವಾದಶಿ ಪಾರಣೆಯ ಅನುರೋಧದಿಂದಲೋ ಅಥವಾ ವೈಶಾಖಮಾಸದಲ್ಲಿ ಬ್ರಾಹ್ಮಣ ಸೇವೆಗಾಗಿಯೊ ಒಂದನ್ನೊ ಅರ್ಧವನ್ನೊ ಕಿತ್ತುವರು. ಗೊಂಚಲು ಗೊಂಚಲಾಗಿ ಕಿತ್ತು ತಿನ್ನುವ ಅಪರಾಧವನ್ನು ಮಾಡುವರಿದ್ದರೆ ಆ ಅಪರಾಧಿ ಗಳು ಕುಲೀನ ಬ್ರಾಹ್ಮಣರು. ಕಮಲಾಕಾಂತನು ಎಂದಿಗೂ ಆ ಅಪರಾಧ ವನ್ನು ಮಾಡಿಲ್ಲ.

ವೃಕ್ಷದ ನಾರಿಕೇಳದಂತೆ ಸಂಸಾರದ ಈ ನಾರಿಕೇಳಗಳಿಗೂ ವಯೋ ಭೇದಾನುಸಾರವಾಗಿ ಅವಸ್ಥಾಭೇದಗಳೂ ಉಂಟಾಗುವವು. ಈ ಅಪಕ್ವಾ ವಸ್ಥೆಯಲ್ಲಿ ಎರಡರ ಹೃದಯವೂ ಸ್ನಿಗ್ಧವಾಗಿರುವುದು. ಕಿಶೋರಿಯರ ಅಕೃತ್ರಿಮ ವಿಲಾಸಲಕ್ಷಣ ಶೂನ್ಯಪ್ರಣಯದಲ್ಲಿ ಹೃದಯವು ಸ್ನಿಗ್ಧ. ನಾರಿ ಕೇಳದ ಹೃದಯವೂ ಸ್ನಿಗ್ಧ ಜಲಪೂರ್ಣ. ಆದರೆ ಎರಡು ಜಾತಿಗಳಲ್ಲಿಯೂ - ಫಲಜಾತಿ ಮತ್ತು ಮನುಷ್ಯಜಾತಿಗಳೆರಡರಲ್ಲಿಯೂ - ನಾರಿ ಕೇಳವು ಅಪಕ್ವ ವಾಗಿರುವುದೆ ಒಳ್ಳೆಯದು. ಆಗ ನೋಡುವುದಕ್ಕೆ ಎಷ್ಟು ಉಜ್ವಲ ಶ್ಯಾಮ ವರ್ಣ - ಎಷ್ಟು ಜ್ಯೋತಿರ್ಮಯ; ಆಗ ತಾಪವು (ದುಃಖ - ಬಿಸಿಲು) ಅದ ರೊಳಗೆ ಪ್ರವೇಶಿಸಲಾರದು. ಜಗತ್ತಿನ ತಾಪವು ಆ ನವೀನ ಶ್ಯಾಮ ಶೋಭೆ ಯಿಂದ ಶೀತಲವಾಗಿಬಿಡುವುದು. ಕಿಟಕಿಯ ಹಿಂದುಗಡೆಯಲ್ಲಿ ತಂಡ ತಂಡ ವಾಗಿರುವ ಯುವತಿಯರು—ಮರದ ಮೇಲೆ ಗೊಂಚಲು ಗೊಂಚಲಾಗಿರುವ ನಾರಿ ಕೇಳಗಳು— ಎರಡು ದೃಶ್ಯವೂ ನನಗೆ ಒಂದೇ ಬಗೆಯಾಗಿ ಕಾಣಿಸು ವುದು. ಉಭಯರೂ ಚತುರ್ದಿಶೆಗಳಲ್ಲಿ ತಮ್ಮ ಪ್ರಕಾಶವನ್ನು ಹರಡುವರು. ಆದರೆ ನೋಡಿರಿ, ನೋಡಿ ಮರೆಯಬೇಡಿ - ಈ ಚೈತ್ರದ ಬಿಸಿಲಲ್ಲಿ ಅಪಕ್ವ ವಾದ ನಾರಿಕೇಳವನ್ನು ಮರದಿಂದ ಕಿತ್ತಬಾರದು. ಈಗ ಅದರಲ್ಲಿ ಜಲವು ತಪ್ತವಾಗಿರುವುದು. ಸಂಸಾರದಲ್ಲಿ ಶಿಕ್ಷಾಶೂನ್ಯಳಾದ ಕಾಮಿನಿಯನ್ನು ಸಹಸ್ರಾ

ಹೃದಯದಲ್ಲಾರೂ ಗ್ರಹಣಮಾಡಬಾರದು. ಮಾಡಿದರೆ ನಿಮ್ಮ ಹೃದಯವು ಒಡೆದುಹೋಗುವುದು. ಆಮ್ರಫಲದಂತೆಯೆ ಅಪಕ್ವವಾದ ನಾರಿಕೇಳವನ್ನು ಸಂತೋಷಾದರ ರೂಪವಾದ ಹಿಮಜಲದಲ್ಲಿಟ್ಟು ತಣ್ಣಗೆ ಮಾಡಬೇಕು-ಹಿಮಜಲವಿಲ್ಲವಾದರೆ ಕೆರೆಯ ಕೆಸರಿನಲ್ಲಿಯಾದರೂ ಹೂಣಿಟ್ಟು ತಣುವು ಕೊಡಬೇಕು - ಎಂದರೆ ಮಧುರ ವಚನಗಳಿಂದ ಇಲ್ಲವಾದರೆ-ಕಮಲಾಕಾಂತ ಚಕ್ರವರ್ತಿಯ ಆಜ್ಞೆಯಂತೆ - ಕಟುವಚನಗಳಿಂದ ತಂಪುಮಾಡಬೇಕು.

ನಾರಿಕೇಳಗಳಿಂದ ನಾಲ್ಕುಬಗೆಯ ಸಾಮಗ್ರಿಗಳಾಗುವವು. ನೀರು, ಕೊಬ್ಬರಿ, ಚಿಪ್ಪು, ನಾರು - ನಾರಿಕೇಳದ ಜಲದೊಂದಿಗೆ ಸ್ತ್ರೀಯರ ಸ್ನೇಹದ ಸಾದೃಶ್ಯವನ್ನು ನಾವು ಕಂಡಿರುವೆವು. ಎರಡೂ ಸ್ನಿಗ್ಧಕರ. ನೀವು ಜಗತ್ತಿನ ತಾಪದಿಂದ ತಪ್ತರಾಗಿ, ಬಳಲಿ ಬೆಂಡಾಗಿ ಗೃಹದ ಛಾಯೆಯಲ್ಲಿ ಕುಳಿತು ವಿಶ್ರಾಂತಿಯನ್ನಪೇಕ್ಷಿಸಿದರೆ ಆಗ ಈ ಶೀತಲಜಲವನ್ನು ಪಾನಮಾಡಿರಿ - ಕೂಡಲೆ ಸಕಲ ವೇದನೆಗಳನ್ನೂ ಮರೆಯುವಿರಿ. ನಿಮ್ಮ ದಾರಿದ್ರ ಚೈತ್ರದಲ್ಲಿ ಅಥವಾ ಬಂಧುವಿಯೋಗದ ವೈಶಾಖದಲ್ಲಿ, ಅಥವಾ ನಿಮ್ಮ ಯೌವನದ ಮಧ್ಯಾಹ್ನದಲ್ಲಿ, ಅಥವಾ ರೋಗತಾಪ ಪೂರ್ಣವಾದ ಮೂರನೆಯ ಪ್ರಹರ ದಲ್ಲಿ ನಿಮ್ಮ ಹೃದಯವು ಮತ್ತೇತರಿಂದ ಶೀತವಾಗಬಲ್ಲದು ? ಮಾತೆಯ ಆದರ, ಸ್ತ್ರೀಯ ಪ್ರೇಮ, ಕನ್ಯೆಯ ಭಕ್ತಿ ಇವುಗಳಿಗಿಂತ - ಜೀವನ ಸಂತಾಪ ದಲ್ಲಿ - ಬೇರೆ ಯಾವ ಸುಖವಿರುವುದು. ಮತ್ತೆ ಗ್ರೀಷ್ಮದ ಬಿಸಿಲಿನಲ್ಲಿ ಅಪಕ್ವ ನಾರಿಕೇಳದ (ಎಳನೀರಿನ) ಹೊರತು ಮತ್ತಾವುದರಿಂದ ತಂಪಾಗುವುದು ?

ಆದರೆ ಅದು ಪಕ್ವವಾದಾಗ ಅದರ ಜಲವು ತೀಕ್ಷ್ಣವಾಗುವುದು. ರಾಮನ ತಾಯಿಯ ವಯಸ್ಸು ಪಕ್ವವಾದ ಮೇಲೆ ರಾಮನ ತಂದೆಯು ಆ ತೀಕ್ಷ್ಣತೆಯ ಕಾರಣದಿಂದಲೆ ಮನೆಬಿಟ್ಟು ಹೊರಟು ಹೋದನು. ಅದಕ್ಕೋಸುಗವೆ ನಾರಿಕೇಳದಲ್ಲಿ ಅಪಕ್ವವಾದುದಕ್ಕೆ ಆದರ.

ನಾರಿಕೇಳದ ತಿರುಳು (ಕೊಬ್ಬರಿ), ಸ್ತ್ರೀಯರ ಬುದ್ಧಿ ಒಂದೇ. ಕೇವಲ ಅಪಕ್ವಸ್ಥಿತಿಯಲ್ಲಿ ಅದು ನಾಮಮಾತ್ರಕ್ಕಿರುವುದು. ಬಳಿಕ ಕಿಶೋರಾವಸ್ಥೆ ಯಲ್ಲಿ ವಿಶೇಷ ಸಿಹಿ, ಕೋಮಲ. ಚೆನ್ನಾಗಿ ಬಲಿತಾಗ ಬಹು ಕಠಿಣವಾಗು ವುದು. ಆಗ ಅದನ್ನು ಹಲ್ಲಿನಿಂದ ಕಡಿಯುವುದು ಯಾರಿಗೆ ಸಾಧ್ಯ? ಆ ಸಮಯದಲ್ಲಿ ಅದಕ್ಕೆ "ಗೃಹಿಣೀತ್ವ"ವೆಂದು ಹೆಸರು. ಗೃಹಿಣೀತ್ವದಲ್ಲಿ

ರಸವೂ ಮಾಧುರ್ಯವೂ ಇರುವವು. ಆದರೆ ಹಲ್ಲು ಊರುವುದಿಲ್ಲ. ಒಂದು ಕಡೆ ಮಗಳು ಕೂತುಕೊಂಡಿದ್ದಾಳೆ-ತಾಯಿಯ ಅಲಂಕಾರದ ಪೆಟ್ಟಿಗೆಯಿಂದ ಒಡವೆಗಳನ್ನು ಅಪೇಕ್ಷಿಸುತ್ತಾಳೆ. ಆದರೆ ಪಕ್ವವಾಗಿ (ಗಿಟಕಾದ) ಕೊಬ್ಬರಿಯು ಗಟ್ಟಿಯಾಗಿದೆ. ಅದರಲ್ಲಿ ಮಗಳ ಹಲ್ಲು ಊರುವುದಿಲ್ಲ. ಆಗ ಪಕ್ವಳಾದ ಗೃಹಿಣಿಯು ದಯೆಯಿಟ್ಟು ಒಂದು ಆಭರಣವನ್ನು ತೆಗೆದುಕೊಡುವಳು. ಅತ್ತ ಪುತ್ರನು ಕುಳಿತಿದ್ದಾನೆ. ಮಾತೆಯ ನಗದು ಪೆಟ್ಟಿಗೆಯ ಮೇಲೆ ಹಲ್ಲೂರಿಸಲಪೇಕ್ಷಿಸುವನು - ಪಕ್ವಳಾದ ಮಾತೆಯು ವಿಶೇಷ ದಯಾ ಭಾವದಿಂದ ಏಳು ಪಾವಲಿ ತೆಗೆದುಕೊಡುವಳು. ಪತಿಯೂ ಅಪರವಯಸ್ಸಿನಲ್ಲಿ ಒಂದು ಕಸುಬನ್ನು ಮಾಡಲಪೇಕ್ಷಿಸುವನು. ಆದರೆ ಆಗ ಶೇಷ ವಯಸ್ಸಿನಲ್ಲಿ ಕೈಖಾಲಿ ! ದುಡ್ಡಿಲ್ಲದೆ ಕಸುಬು ಇಲ್ಲ - ಪಕ್ವಳಾದ ಗೃಹಿಣಿಯ ಪೆಟ್ಟಿಗೆಯ ಮೇಲೆ ಕಣ್ಣು - ಎರಡು ಮೂರು ಪ್ರವೃತ್ತಿಪರವಾದ ಹಲ್ಲುಗಳು ಮುರಿದವು - ಮುದಿತನದಲ್ಲಿ ಇದ್ದ ಹಲ್ಲೂ ಮುರಿದುವು. ಮತ್ತೆ ಹಲ್ಲಿದ್ದರೆ ನಾರಿಕೇಳವನ್ನು ಜೀರ್ಣಗೊಳಿಸುವುದು ಆದರಿಂದ ಸಾಧ್ಯವೆ? ಎಂದಿನವರೆಗೆ ರೂಪಾಯಿಯನ್ನು ಹಿಂತಿರುಗಿ ಕೊಡುವುದಿಲ್ಲವೊ ಅಂದಿನವರೆಗೆ ಅಜೀರ್ಣರೋಗದಿಂದ ನಿದ್ರೆಯಿಲ್ಲ !

ಇನ್ನು ಕೊಬ್ಬರಿಯ ಮೇಲಿನ ಚಿಪ್ಪು - ಇದು ಸ್ತ್ರೀಯರ ವಿದ್ಯೆಯೆಂದು ಹೇಳಬಹುದು. ಇದರ ಒಂದು ಪಕ್ಕವನ್ನು ಮಾತ್ರ ನಾನು ನೋಡಿರುವೆನೆ ಹೊರತು ಇನ್ನೊಂದು ಭಾಗವನ್ನು ನೋಡಿಲ್ಲ. ತೆಂಗಿನ ಚಿಪ್ಪು ದೊಡ್ಡ ಕೆಲಸಕ್ಕೆ ಬರುವುದಿಲ್ಲ. ಸ್ತ್ರೀಯರ ವಿದ್ಯೆಯು ಕೂಡ ವಿಶೇಷ ಕೆಲಸಕ್ಕೆ ಬಾರದು. ಮೋರಿಸಮರಬಲ್‌ಳು ವಿಜ್ಞಾನವೆಂಬ ಪುಸ್ತಕವನ್ನು ಬರೆದಳು ಜೇನ್ ಆಸ್ಟಿನ್‌ಳೂ ಜಾರ್ಜ್‌ಎಲಿಯಟಳೂ ಕಾದಂಬರಿಗಳನ್ನು ಬರೆದಿರುವರು. ಪುಸ್ತಕಗಳೇನೋ ಚೆನ್ನಾಗಿವೆ. ಆದರೆ ಅವುಗಳ ಉಪಯೋಗವು ಚಿಪ್ಪಿನಷ್ಟೆ.

ಆದರೆ ಈಗ ಸಮಯವು ಬದಲಾಗಿದೆ. ಚತುರ ಕೈಗಾರಿಕೆಯವರು ಚಿಪ್ಪುಗಳಿಂದಲೂ ಸುಂದರವಾದ ಬಟ್ಟಲು, ಬೆಲೆಯುಳ್ಳ ಗುಂಡಿಗಳು, ಮನೋಹರವಾದ ಆಟದ ಸಾಮಾನುಗಳು ಇವೆ ಮೊದಲಾದವನ್ನು ಮಾಡಲಾರಂಭಿಸಿದ್ದಾರೆ. ಯೂರೋಪು ಮತ್ತು ಅಮೆರಿಕಾಗಳಲ್ಲಿ ಈ ಸ್ತ್ರೀಯರ ವಿದ್ಯೆ

ಯಿಂದ ಈಗೀಗ ವಿಶೇಷ ಕೆಲಸವಾಗುತ್ತಿದೆಯಂತೆ! ಚಿಪ್ಪಿನ ಚೂಪಾದ ಮೊನೆಯು ಚುಚ್ಚಿದರೆ ಎಂಥಾ ಗಾಯವಾಗುವುದು! ಇಂಗ್ಲೆಂಡಿನ ಮತಾಭಿಲಾಷಿಣಿ ಸ್ತ್ರೀಯರ ವಿದ್ಯೆಯೂ ಮೊನೆಯುಳ್ಳದಾಗಿದೆ. ಅದರ ಮೊನೆಯೂ ಚೂಪಾಗಿದೆ. ಈಗ ಅದರಿಂದ ಅಲ್ಲಿ ಅನೇಕ ಕೆಲಸಗಳಾಗುತ್ತಿವೆ. ಅಲ್ಲಿ ಸ್ತ್ರೀಯರು ಪಾರ್ಲಿಮೆಂಟಿಗೆ ಹೋಗುತ್ತಿರುವರು - ಇಟ್ಟಿಗೆ ಕಲ್ಲುಗಳನ್ನೆಸೆಯುವರು - ಪ್ರಧಾನ ಮಂತ್ರಿಯನ್ನು ಗುದ್ದಿ ಹಣ್ಣುಮಾಡುವರು - ಅನೇಕ ಲಕ್ಷ ಬೆಲೆಬಾಳುವ ಕಟ್ಟಡಗಳನ್ನು ಕ್ಷಣಕಾಲದಲ್ಲಿ "ಡೈನಾಮೆಂಟ್"ನಿಂದ ಹಾರಿಸಿಬಿಡುವರು!

ತೆಂಗಿನನಾರು - ಸ್ತ್ರೀಯರ ರೂಪ. ನಾರು ನಾರಿಕೇಳದ ಹೊರಗಿನ ಅಂಶ. ರೂಪವೂ ಸ್ತ್ರೀಯರ ಹೊರಗಿನ ಅಂಶ. ಎರಡೂ ವಿಶೇಷ ಅಸಾರವಾದವು. ಅವುಗಳನ್ನು ತ್ಯಜಿಸುವುದೇ ಮೇಲು. ಆದರೆ ನಾರಿನಿಂದ ಒಂದು ಕೆಲಸವಾಗುವುದು. ಅದರಿಂದ ಉತ್ತಮವಾದ ಹಗ್ಗವಾಗುವುದು. ಅದರಿಂದ ದೊಡ್ಡ ಹಡಗುಗಳನ್ನು ಕಟ್ಟಬಹುದು. ಸ್ತ್ರೀಯರ ರೂಪ ರಜ್ಜುನಿಂದಲೂ ಅನೇಕ ಹಡಗುಗಳನ್ನು ಕಟ್ಟಬಹುದು. ನಾರಿಕೇಳ ರಜ್ಜುವಿನಿಂದ ನೀವು ಜಗನ್ನಾಥನ ರಥವನ್ನೆಳೆಯುವಂತೆ ಸ್ತ್ರೀಯರು ತಮ್ಮ ರೂಪರಜ್ಜುವಿನಿಂದ ದೊಡ್ಡ ದೊಡ್ಡ ಮನೋರಥಗಳನ್ನು ಈಡೇರಿಸಿಕೊಳ್ಳುವರು. ರಥವನ್ನೆಳೆಯುವುದಕ್ಕೂ ನಿಲ್ಲಿಸುವುದಕ್ಕೂ ಒಂದು ನಿಯಮವಿದ್ದರೆ, ಈ ಮನೋರಥಗಳನ್ನೆಳೆಯುವುದಕ್ಕೂ ಒಂದು ಕಾನೂನು ಆಗಲೇಬೇಕು. ಅದರಿಂದ ಅನೇಕ ನರಹತ್ಯೆಗಳು ನಿಲ್ಲುವವು. ನಾರಿಕೇಳ ರಜ್ಜುವನ್ನು ಕಂಠಕ್ಕೆ ಕಟ್ಟಿಕೊಂಡು ಯಾರಾದರೂ ಪ್ರಾಣತ್ಯಾಗ ಮಾಡಿರುವರೊ ಇಲ್ಲವೊ ನನಗೆ ತಿಳಿಯದು. ಆದರೆ ರಮಣಿಯರ ರೂಪರಜ್ಜುವನ್ನು ಕಂಠಕ್ಕೆ ಕಟ್ಟಿಕೊಂಡು ಅನೇಕರು ಪ್ರಾಣತ್ಯಾಗಮಾಡಿರುವರು. ಅವರ ಸಂಖ್ಯೆಯನ್ನಾರು ಗಣಿಸಬೇಕು!

ವೃಕ್ಷದ ಮೇಲಿರುವ ನಾರಿಕೇಳ ಮತ್ತು ಸಂಸಾರದ ನಾರಿಕೇಳ - ಇವುಗಳ ಸಂಬಂಧದಲ್ಲಿ ನನ್ನ ವಿವಾದವಿಷ್ಟೆ. ನಾನು ಹತಭಾಗ್ಯ. ಎರಡರಲ್ಲಿ ಒಂದನ್ನೂ ಹೊಂದಲಾರದೆ ಹೋದೆನು. ಬೇರೆ ಫಲಗಳನ್ನು ಕೆಳಗೆ ನಿಂತುಕೊಂಡು ದೋಟಿಯಿಂದ ಕಿತ್ತಬಹುದು. ಆದರೆ ನಾರಿಕೇಳ ವೃಕ್ಷವನ್ನು

ಹತ್ತಿದ ಹೊರತು, ಫಲವು ಕೈಗೆ ಸಿಕ್ಕದು. ಮರವನ್ನು ಹತ್ತಬೇಕಾದರೆ ಕಾಲಿಗೆ ಹಗ್ಗವನ್ನು ಕಟ್ಟಿಕೊಳ್ಳಬೇಕು - ಇಲ್ಲವೆ ಮೇದಾರನ* ಮನಸ್ಸಂತೋಷಪಡಿಸಬೇಕು.

ಮೇದಾರನ ಮನಸ್ಸಂತೋಷಪಡಿಸುವುದಕ್ಕೂ ನಾನು ಒಪ್ಪುತ್ತೇನೆ ಆದರೆ ಅದೃಷ್ಟದೋಷದಿಂದ ನಾರಿಕೇಳ ಸಂಬಂಧವನ್ನು ನನ್ನ ಹಣೆಯಲ್ಲಿ ಬರೆದಿಲ್ಲ. ನಾನು ಎಂತಹ ಮನುಷ್ಯನೊ, ಅಂತಹ ವೃಕ್ಷದಲ್ಲಿ, ಅಂತಹ ರೂಪಗುಣಗಳುಳ್ಳ ನಾರಿಕೇಳಗಳನ್ನು ಕೋಲಿನಿಂದ ಕೆಡಹಬಲ್ಲೆನು. ಬಲ್ಲೆ-ಆದರೆ ಭಯ - ಅದು ನನ್ನ ತಲೆಯ ಮೇಲೇ ಬಂದು ಬಿದ್ದರೆ! ಎಂದು - ಶ್ಯಾಮೆ, ವಾಮೆ, ರಾಮೆಯಂತಹ ಕಾಮಿನಿಯರೆಷ್ಟುಜನ ಕಮಲಾಕಾಂತನನ್ನು ಸ್ವಾಮಿಯೆಂದು ಗ್ರಹಣಮಾಡಬಲ್ಲವರು ಇರುವರು. ಆದರೆ ಪರರ ಹುಡುಗಿಯನ್ನು ಹೆಗಲ ಮೇಲೇರಿಸಿಕೊಂಡು ಸಂಸಾರಯಾತ್ರೆಯನು ನಿರ್ವಹಿಸಲು ಈ ದೀನನು ಅಸಮರ್ಥನು. ಆದ್ದರಿಂದ ಈ ಯಾತ್ರಿಕನಾದ ಕಮಲಾಕಾಂತನು ನಾರಿಕೇಳವನ್ನು ಭಕ್ತಿಭಾವದಿಂದ ವಿಶ್ವೇಶ್ವರನಿಗೆ ಅರ್ಪಿಸಿರುವನು. ಅವನೊ - ಸ್ಮಶಾನವಾಸಿ - ಅದರ ಮೇಲೆ ವಿಷಪಾನವಾಡಿ ಕೂತಿದ್ದಾನೆ - ಅಂತಹನನ್ನು ಈ ಅಪಕ್ವನಾರಿಕೇಳವೇನು ಮಾಡಬಲ್ಲದು ?

ಈ ದೇಶದಲ್ಲಿ ಇನ್ನೊಂದು ಬಗೆಯ ಜನರನ್ನು ನೋಡಬಹುದು. ಅವರು ದೇಶಹಿತೈಷಿಗಳೆಂದು ಹೆಸರುವಾಸಿಯಾಗಿರುವರು. ಅವರು ಶಾಲ್ಮಲಿ (ಬೂರುಗದ) ಹೂಗಳೆಂದು ನಾನು ತಿಳಿದಿರುವೆನು. ಅದು ಹೂಬಿಟ್ಟಾಗ ನೋಡುವುದಕ್ಕೆ ಶೋಭಾಯಮಾನವಾಗಿರುವುದೆಂದು ಕೇಳಿದ್ದೇನೆ. - ದೊಡ್ಡದೊಡ್ಡ ಕೆಂಪು ಹೂಗಳು ತುಂಬಿರುತ್ತವೆ - ಆದರೆ ಆ ಬೋಳುಮರದಲ್ಲಿ ಅಷ್ಟು ಕೆಂಪು ಬಣ್ಣ ನನ್ನ ದೃಷ್ಟಿಗೆ ಗೋಚರಿಸುವುದಿಲ್ಲ. ಅದು ಎಲೆಗಳಿಂದ ತುಂಬಿದ್ದರೆ ಚೆನ್ನಾಗಿ ಕಾಣುವುದು. ಎಲೆಗಳ ಮಧ್ಯದಲ್ಲಿ ಅಲ್ಲಲ್ಲಿ ಕೆಂಪು ಬಣ್ಣವು ಕಂಡರೆ ಎಷ್ಟು ಸುಂದರವಾಗಿರುವುದು; - ಆ ಹೂವಿನಲ್ಲಿ ಗಂಧವೇ ಇಲ್ಲ-ಕೋಮಲತೆಯ ಲೇಶಾಂಶವೂ ಇಲ್ಲ - ಆದರೂ ಅವು ಕೆಂಪು ಕೆಂಪಾಗಿ

---

*ಪುರೋಹಿತರು ಮೇದಾರರೆಂದು ಕಮಲಾಕಾಂತನು ತಿಳಿದಿರುವನು. ಏಕೆಂದರೆ ಪುರೋಹಿತರೆ ವಿವಾಹವನ್ನು ಮಾಡಿಸುವವರು. ಉ :— ಎಂಥ ಪಾಷಂಡರವರು :— ಭೀಷ್ಮದೇವ.

ದೊಡ್ಡದಾಗಿರುತ್ತವೆ. ಹೂವು ಉದುರಿ ಫಲವು ಬಿಟ್ಟಾಗ ಏನಾದರೂ ಲಾಭ ವಾಗುವುದೆಂದು ಭಾವಿಸಿದ್ದೆ. ಆದರೆ ಯಾವ ಲಾಭವೂ ಇಲ್ಲ. ಮುಂದೆ ಚೈತ್ರಮಾಸದ ಬಿಸಿಲಬೇಗೆಯಲ್ಲಿ ಆ ಬೂರಗದ ಹಣ್ಣುಗಳು "ಫಟ್" ಎಂದು ಸಿಡಿದು ಒಡೆಯಲಾರಂಭಿಸುವವು. ಆಗ ಅದರೊಳಗಿಂದ ಸ್ವಲ್ಪ ಹತ್ತಿಯು ಹೊರಬಿದ್ದು, ಹಾರುತ್ತ ಸಮಗ್ರದೇಶದಲ್ಲೆಲ್ಲ ಸುತ್ತುತ್ತಿರುವುದು.

ಅಧ್ಯಾಪಕ. ಬ್ರಾಹ್ಮಣ ಗಣವು ಎಂದರೆ ಸಂಸ್ಕೃತ ಪಂಡಿತರೂ ಆಚಾರ್ಯರೂ ಶಾಸ್ತ್ರಿಗಳೂ ದತ್ತೂರ ಫಲಜಾತಿಯವರೆಂದು ನನ್ನ ಭಾವನೆ. ದೊಡ್ಡ ದೊಡ್ಡ ಉದ್ಭುದ್ಧವಾದ ಸಮಾಸಗಳು ಮತ್ತು ದೊಡ್ಡ ದೊಡ್ಡ ವಾಕ್ಯಗಳ ರೂಪದಲ್ಲಿ ಅವರ ಪುಷ್ಪಗಳು ಅರಳಿ ದೊಡ್ಡವಾಗುವವು. ಆದರೆ ಫಲದ ಕಾಲದಲ್ಲಿ ಅವೂ ಕಂಟಕಮಯ ದತ್ತೂರ ಫಲಗಳೆ! ಕುಕ್ಕುಟ ಮಾಂಸವನ್ನು ತಿಂದು ನನ್ನ ಹಿಂದು ಜನ್ಮವನ್ನು ಪವಿತ್ರಗೊಳಿಸಬೇಕೆಂದು ಬಹು ದಿನಗಳಿಂದ ಆಲೋಚಿಸಿದ್ದೆ.- ಆದರೆ ಈ ಅಧಮ ದತ್ತೂರಿ ಮುಳ್ಳುಗಳ ಪೀಡೆಯಿಂದ ಏನೂ ಮಾಡಲಾಗಲಿಲ್ಲ. ದತ್ತೂರದಲ್ಲಿ ಗುಣವಿದೆ. ದತ್ತೂರದಿಂದ ಮಾದಕ ವಸ್ತುವಿನ ಮಾದಕತ್ವವು ವೃದ್ಧಿಗೊಳ್ಳುವುದು. ಗಾಂಜಾ ಸೇದುವವರಿಗೆ ಗಾಂಜಾದಿಂದ ನಿಷಾ ಏರದಿದ್ದರೆ, ಅದರಲ್ಲಿ ಎರಡು ದತ್ತೂರ ಬೀಜಗಳನ್ನು ಸೇರಿಸಿದರಾಯಿತು. ಸಿದ್ಧಿಖೋರರ ಸಿದ್ಧಿಗೆ ನಿಷಾ ಏರದಿದ್ದರೆ ಅವರ ಸಿದ್ಧಿ (ಭಂಗಿಸೊಪ್ಪು) ಯೊಂದಿಗೆ ಎರಡು ದತ್ತೂರ ಬೀಜವನ್ನು ಸೇರಿಸಿ ಸೇದುವರು. ಈ ಅಭ್ಯಾಸಬಲದಿಂದಲೊ ಏನೋ - ಕೆಲವು ಜನ ದೇಶೀಯ ಲೇಖಕರು ತಮ್ಮ ಪ್ರಬಂಧದಲ್ಲಿ ಅಧ್ಯಾಪಕ ಗಣದ ಎರಡು ಮೂರು ವಾಕ್ಯಗಳನ್ನು ಪ್ರಮಾಣಕ್ಕಾಗಿ ಸೇರಿಸಿಬಿಡುವರು. ಪ್ರಬಂಧಾದಿಗಳಲ್ಲಿ ಆ ವಚನರೂಪವಾದ ದತ್ತೂರ ಬೀಜದಿಂದ ಪಾಠಕರಿಗೆ ನಿಷಾ ಏರುವುದು. ಆ ನಿಷಾದಿಂದ ಈಗ ದೇಶವೆಲ್ಲ ಮತ್ತಾಗಿರುವುದು.

ನಮ್ಮ ದೇಶೀಯ ಲೇಖಕರು ಹುಣಸೆಯ ಜಾತಿಗೆ ಸೇರಿದವರೆಂದು ಹೇಳಬಹುದು. ಅದರ ನಿಜವಾದ ಸಂಪತ್ತೆಂದರೆ ಸಂಪೂರ್ಣ ಆಮ್ಲತೆ. ಆದರೆ ಅದು ಹಾಲಿಗೆ ಸೋಕಿದರೆ ಅದನ್ನು ಮಸರುಮಾಡಿಬಿಡುವುದು! ಗುಣದಲ್ಲಿ ಕೇವಲ ಆಮ್ಲಗುಣ - ಅದೂ ನಿಕೃಷ್ಟವಾದ ಆಮ್ಲ. ಇದಲ್ಲದೆ ಮತ್ತೊಂದು ಗುಣವೂ ಇದೆ. ಆದಾವುದೆಂದರೆ ಅವರು ಸಾಕ್ಷಾತ್ ಜಡ

ಕಾಷ್ಠಾವತಾರರಾಗಿರುವರು. ಆಮ್ಲಕಾಷ್ಟವು ನೀರಸವಾದುದು. ಆದರೆ ಸಮಾಲೋಚನೆಯ ಅಗ್ನಿಯಲ್ಲಿ ಅದು ಚೆನ್ನಾಗಿ ಜ್ವಲಿಸುವುದು. ಸತ್ಯವನ್ನಾಡಲು ಭಯವೇಕೆ?- ಹುಣಸೆ ಹಣ್ಣಿನಂಥಾ ಕೆಟ್ಟ ಪದಾರ್ಥವು ಜಗತ್ತಿನಲ್ಲಿ ಬೇರೆ ಇಲ್ಲ. ಅದನ್ನು ಅಲ್ಪವಾಗಿ ಸೇವಿಸಿದರೂ ಅಜೀರ್ಣವಾಗುವುದು- ಹುಳಿತೇಗು ಬರಲಾರಂಭಿಸುವುದು. ಅಧಿಕವಾಗಿ ಸೇವಿಸಿದರಂತೂ ಆಮ್ಲಪಿತ್ತರೋಗದಿಂದ ಯಾವಾಗಲೂ ನರಳುತ್ತಿರಬೇಕಾಗುವದು. ಯಾರು ಸಾಹೇಬರಾಗಿ ಮೇಜಿನ ಮುಂದೆ, ಗ್ಯಾಸು ಅಥವಾ ವಿದ್ಯುಚ್ಛಕ್ತಿಯ ದೀಪದೆದುರಿನಲ್ಲಿ ಕುಳಿತು ಫಯಜೂಖಾನ ಸಾಹೇಬನು ಮಾಡಿದ ಪಾಕವನ್ನು, ಮುಳ್ಳು ಚಮಚೆ ಹಿಡಿದು, ಸೇವಿಸುವುದನ್ನು ಕಲಿತಿರುವರೊ ಅವರು ಈ ಪೀಡೆಯಿಂದ ಮುಕ್ತರಾಗಿರುವರು- ಅವರು ಮೊದಲಿಂದ ಕೊನೆಯವರೆಗೆ ಹುಳಿ ಚಟ್ಣಿಯನ್ನವನ್ನು ತಿನ್ನಬೇಕಾಗಿಲ್ಲ. ಆದ್ದರಿಂದ ಅವರಿಗೆ ಹುಣಿಸೆ ಹುಳಿಯ ಲಕ್ಷ್ಯವಿಲ್ಲ- ಆದರೆ ಚಪ್ಪರದ ಕೆಳಗೆ ಕೂತುಕೊಂಡು ಪದ್ಮಾವತಮ್ಮ ಮಾಡಿದ ಅಡಿಗೆಯನ್ನು ಊಟಮಾಡುವವರಿಗೆ ಮಾತ್ರ ಅದರ ವೇದನೆ ಗೊತ್ತು. ಪದ್ಮಾವತಮ್ಮ (ಅಡಿಗೆಯಾಕೆಯಾದರೂ) ಕುಲೀನರ ಕನ್ಯೆ. ಪ್ರಾತಃ ಸ್ನಾನಮಾಡಿ ನಾಮಾವಳಿಯನ್ನು ಜಪಿಸುವಳು. ಕೈಯಲ್ಲಿ ತುಳಸೀ ಮಾಲೆ- ಆದರೆ ಅವಳಿಗೆ ಹೆಸರುಬೇಳೆ ತೊವ್ವೆ, ಅನ್ನ ಮತ್ತು ಸಾರಿನ ಹೊರತು ಮತ್ತೇನು ಮಾಡುವುದಕ್ಕೂ ತಿಳಿಯದು. ಫಯಜೂಖಾನನು ಜಾತಿಯಲ್ಲಿ ಕೀಳು. ಆದರೆ ಅವನ ಅಡುಗೆ ಅಮೃತ!

ಇನ್ನು ಒಂದು ಬಗೆಯ ಮನುಷ್ಯಫಲದ ಸಂಗತಿಯನ್ನು ಹೇಳಿ ವಿಶ್ರಾಂತಿ ತೆಗೆದುಕೊಳ್ಳುವೆನು. ದೇಶೀಯ ಹಕೀಮರು ಯಾವ ಫಲವೆಂದು ಹೇಳಬಹುದು? ಯಾರುಬೇಕಾದರೂ ಕೋಪಮಾಡಿಕೊಳ್ಳಲಿ!- ನಾನು ಸ್ಪಷ್ಟವಾಗಿ ಹೇಳುವೆನು. ಅವರು ಪೃಥ್ವಿಯಲ್ಲಿ ಕೂಷ್ಮಾಂಡಜಾತಿಗೆ ಸೇರಿದವರು. ಅದನ್ನು ಚಪ್ಪರದ ಮೇಲೆ ಏರಿಸಿದರೆ ಎತ್ತರದಲ್ಲಿ ಫಲಬಿಡುವುದು. ಇಲ್ಲವಾದರೆ ಕೆಳಗೆ ಮಣ್ಣಿನಲ್ಲಿಯೇ ಬಿದ್ದು ಹೊರಳಾಡುವವು. ಎಲ್ಲಿ ಬೇಕಾದರೂ ಇದನ್ನು ಹಾಕಿ, ಬೆಳೆಸಿ, ಹಬ್ಬಿಸಿರಿ. ಒಂದು ಬಿರುಗಾಳಿ ಬಂದರೆ ಬಳ್ಳಿಯೆಲ್ಲ ಕತ್ತು ಭೂಮಿಯ ಮೇಲೆ ಬಿದ್ದು ಹೊರಳಾಡುವವು. ರೂಪದಲ್ಲಿಯೂ ಗುಣದಲ್ಲಿಯೂ ಅವರು-ವೈದ್ಯರು-ಕೂಷ್ಮಾಂಡಜಾತಿಗೆ ಸೇರಿದವರು.

ಕೂಷ್ಮಾಂಡದಲ್ಲಿಯೂ ದೇಶೀ ಮತ್ತು ವಿಲಾಯತಿ ಎಂದು ಎರಡು ಬಗೆಗಳಿವೆ. ವಿಲಾಯತಿ ಕುಂಬಳ ಎಂದರೆ ವಿಲಾಯಿತಿಯಿಂದ ಬಂದದ್ದಲ್ಲ. ನಮ್ಮ ಮೋಚಿ ಹೊಲಿದಿದ್ದರೂ ಇಂಗ್ಲೀಷ್ ಜೋಡು (ಬೂಟ್ಸು) ಎಂದು ಹೇಳುವು ದಿಲ್ಲವೆ - ಹಾಗೆಯೆ ಈ ವಿಲಾಯಿತಿ ಕೂಷ್ಮಾಂಡವೂ. ಆದರೆ ಈಗಿನ ಕಾಲ ದಲ್ಲಿ ವಿಲಾಯತಿ ಕೂಷ್ಮಾಂಡಕ್ಕೆ ಹೆಚ್ಚು ಗೌರವಾದರಗಳು - ಅದಕ್ಕಾಗಿ ಅದರ ಸಂಖ್ಯೆ ಹೆಚ್ಚುತ್ತಿರುವುದು. ಈ ಸಂಸಾರೋದ್ಯಾನದಲ್ಲಿ ಇನ್ನೂ ಅನೇಕ ಜಾತಿಯ ಫಲಗಳು ಫಲಿಸುತ್ತಿವೆ. ಅವುಗಳೆಲ್ಲ ಕೇವಲ ನಿಕೃಷ್ಟವಾದ, ಕಹಿಯಾದ ಫಲವೆಂದರೆ—

—ಶ್ರೀ ಕಮಲಾಕಾಂತ ಚಕ್ರವರ್ತಿ.



## ೩. ಯು-ಟಿಲ್-ಇಟಿ* ಅಥವಾ ಉದರ ದರ್ಶನ

ಬೆಂಥಾಮ್‌ ಸಾಹೇಬನು ಹಿತವಾದದ ದರ್ಶನ ಸಾಹಿತ್ಯವನ್ನು ಸೃಷ್ಟಿಸಿ, ಯೂರೋಪಿನಲ್ಲಿ ಅಕ್ಷಯವಾದ ಕೀರ್ತಿಯನ್ನು ಗಳಿಸಿಟ್ಟು ಹೋದನು. ನಾನು ಆ ಹಿತವಾದದ ಆದರ್ಶವನ್ನು ವಿರೋಧಿಸುವುದಿಲ್ಲ..ಆದಕ್ಕೆ ಬದಲಾಗಿ ನಾನು ಅದರ ಅನುಮೋದಕನೆ ಆಗಿರುವೆನು. ಆ ದ ರೆ ನಾ ನೂ ಒ ಬ್ಬ ಸುಯೋಗ್ಯದಾರ್ಶನಿಕನೆಂಬುದು ತಮಗೆ ಗೊತ್ತಿದೆಯೊ ಇಲ್ಲವೊ ನಾನು ಹೇಳಲಾರೆ. ನಾನು ಆ ಹಿತವಾದದ ದರ್ಶನವನ್ನೆ ಆವಲಂಬಿಸಿ, ಅದನ್ನು ಮಥಿಸಿ, ಸಾರಹೀರಿ, ಒಂದು ನೂತನದರ್ಶನವನ್ನು ರಚಿಸಿದ್ದೇನೆ. ನಿಜವಾಗಿ ನೋಡಿದರೆ ನನ್ನ ಕೃತಿಯು ಪ್ರಕೃತ ಕರ್ನಾಟಕದಲ್ಲಿ - ಭಾರತದಲ್ಲಿ - ಪ್ರಚಲಿತವಾಗಿರುವ ಹಿತವಾದದರ್ಶನದ ನೂತನ ವ್ಯಾಖ್ಯಾನ ಮಾತ್ರವಾಗಿರುವುದು. ಇಲ್ಲಿ ಅದರ ಸ್ಥೂಲ ಮರ್ಮವನ್ನು ಸಂಕ್ಷೇಪವಾಗಿ ಬರೆಯುತ್ತಿದ್ದೇನೆ. ಪ್ರಾಚೀನ ಪ್ರಥಾನುಸಾರವಾಗಿ ಈ ದರ್ಶನವು ಸೂತ್ರರೂಪದಲ್ಲಿ ಲಿಖಿತವಾಗಿ

---

* 'ಯುಟಿಲಿಟಿ' ಶಬ್ದಕ್ಕೆ ಅರ್ಥವೇನು? ಸ್ವತಃ ನನಗೆ ಇಂಗ್ಲೀಷು ಬರುವುದಿಲ್ಲ. ಕಮಲಾಕಾಂತನೂ ಅದರ ವಿಚಾರವಾಗಿ ನನಗೆ ಏನನ್ನೂ ಹೇಳಲಿಲ್ಲ. ಆದ್ದರಿಂದ ನನ್ನ ಪುತ್ರನೊಂದಿಗೆ ನಾನು ಅದರ ಜಿಜ್ಞಾಸೆ ಮಾಡಬೇಕಾಗಿ ಬಂದಿತು. ಆ ಹುಡುಗ ಡಿಕ್ಶನರಿಯನ್ನು ನೋಡಿ, ಈ ರೀತಿಯಾಗಿ ವ್ಯಾಖ್ಯಾನ ಹೇಳಿದನು - "ಯು" ಎಂದರೆ 'ನೀನು' ಅಥವಾ 'ನೀವು'; 'ಟಿ' ಎಂದರೆ ಟೀ(ಚಾ)ಮಾಡು, 'ಈಟ್' ತಿನ್ನು. ಕೊನೆಯ 'ಈ' ಶಬ್ದಕ್ಕೆ ಅವನಿಗೆ ಅರ್ಥ ತಿಳಿಯಲಿಲ್ಲ. ಆದರೆ ಕಮಲಾಕಾಂತನು 'ಯೂ-ಟಿಲ್-ಈಟ್-ಈ' ಎಂದು ಹೇಳಿ 'ನೀವು - ಬೇಸಾಯಮಾಡಿ - ನೀವು ತಿನ್ನಿ' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಎಂಥಾ ಪಾಷಾಂಡನವನು! ಎಲ್ಲರೂ ರೈತರು ಎಂದನಲ್ಲ! ಇಂತಹ ದುಷ್ಟ ದಶಾನನ ಲಂಬೋದರ ಗಜಾನನನ ಕೃತಿಯನ್ನು ಓದುವುದು ಪಾಪಕರ. 'ಯೂ-ಟಿಲ್-ಈಟ್-ಐ' ಎಂದು 'ನೀನು ಬೇಸಾಯಮಾಡು-ನಾನು ತಿನ್ನುತ್ತೇನೆ' ಎಂದರೆ ಈಗಿನ ಹಿತವಾದಕ್ಕೆ ಸರಿಯಾಗಬಹುದೆಂದು ನನಗೆ ತೋರಿತು. ನಮ್ಮ ಹುಡುಗನು ಇಂಗ್ಲಿಷ ಭಾಷೆಯಲ್ಲಿ ಒಳ್ಳೆ ಜ್ಞಾನವನ್ನು ಸಂಪಾದಿಸಿರುವನೆಂದು ನನಗೆ ತಿಳಿಯಿತು. ಇಲ್ಲವಾದರೆ ಇಂಥಾ ಕಠಿಣವಾದ ಶಬ್ದಕ್ಕೆ ಇಂಥಾ ಅರ್ಥವನ್ನು ಹೇಳಲಾಗುತ್ತಿರಲಿಲ್ಲ.

—ಶ್ರೀ ಭೀಷ್ಮದೇವ ಖೋಸನವೀಶ.

ರುವುದು. ನಾನು ಸ್ವಂತವಾಗಿ ಆ ಸೂತ್ರಗಳಿಗೆ ಭಾಷ್ಯವನ್ನು ಬರೆದಿರುವೆನು. ಸೂತ್ರಗಳನ್ನು ಕನ್ನಡದಲ್ಲಿಯೆ ಬರೆಯಲಾಗಿದೆ. ಹಾಗೆಂದ ಮಾತ್ರಕ್ಕೆ ನಾನು ಅಸಂಸ್ಕೃತಜ್ಞನೆಂದು ಯಾರೂ ತಿಳಿಯಕೂಡದು. ಸಂಸ್ಕೃತದಲ್ಲಿ ಬರೆದರೆ ಅದನ್ನು ತಿಳಿದುಕೊಳ್ಳಬಲ್ಲವರೆಷ್ಟು ಮಂದಿ ಇದ್ದಾರೆ? ಆದ್ದರಿಂದ ಸಾಮಾನ್ಯ ಪಾಠಕರಿಗೂ ಅನುಕೂಲವಾಗಬೇಕೆಂದು ಕರ್ಣಾಟಕ ಭಾಷೆಯಲ್ಲಿಯೆ ಸಮಸ್ತ ಕಾರ್ಯವನ್ನೂ ನಿರ್ವಹಿಸಿದ್ದೇನೆ. ಆ ಸೂತ್ರಗ್ರಂಥದ ಸಾರಂಶ ವಿದು:—

## ೧. ಜೀವಶರೀರಸ್ಥ ಬೃಹತ್ ಗಹ್ವರ ವಿಶೇಷಕ್ಕೆ ಉದರ ಎಂದು ಹೆಸರು.

ಭಾಷ್ಯ:— ಬೃಹತ್ - ಬಹಳ ದೊಡ್ಡ -[ಎಂದರೆ ಮೂಗು, ಕಿವಿ ಮೊದಲಾದ ಕ್ಷುದ್ರಗಹ್ವರಗಳಿಗೆ ಉದರವೆಂದು ಹೇಳಲಾಗದು. ಹಾಗೆ ಹೇಳಿದರೆ ವಿಶೇಷ ದೋಷವಾಗುವುದು. ಜೀವಿಗಳ ಶರೀರದಲ್ಲಿರುವ 'ಬೃಹತ್ ಗಹ್ವರ' ಎಂಬುದರ ತಾತ್ಪರ್ಯವೇನೆಂದರೆ ಪರ್ವತಗಳ ಗುಹೆ ಮೊದಲಾದವುಗಳಿಗೆ ಉದರವೆಂದು ತಿಳಿದು, ಅದನ್ನು ತುಂಬಿಸಲೆತ್ನಿಸುವುದಕ್ಕೆ ಯಾರೂ ಪ್ರಯತ್ನಿಸಕೂಡದೆಂದು ಅರ್ಥ. 'ಗಹ್ವರ' 'ಘಟ' 'ಹೊಟ್ಟೆ' ಎಂದು ಜೀವಿಗಳ ಶರೀರದಲ್ಲಿರುವ ದೊಡ್ಡ ಗುಹೆಗೆ ಉದರ-'ಹೊಟ್ಟೆ' ಎಂದು ಹೇಳಬೇಕು. ಆದಾಗ್ಗೂ ಅವಸ್ಥಾ ವಿಶೇಷದಿಂದ ಅಂಜಲಿ ಮೊದಲಾದವುಗಳೂ ಉದರವೆಂಬ ಅರ್ಥದಲ್ಲಿ ಗಣ್ಯವಾಗುತ್ತವೆ. ಕೆಲವೆಡೆಗಳಲ್ಲಿ ಹೊಟ್ಟೆಯನ್ನು ತುಂಬಿಸಬೇಕಾಗುವುದು ಕೆಲವೆಡೆಗಳಲ್ಲಿ ಅಂಜಲಿಗಳನ್ನು ತುಂಬಿಸಬೇಕಾಗುವುದು.

## ೨. ಉದರದ ತ್ರಿವಿಧ ಪೂರ್ತಿಯೇ ಪರಮ ಪುರುಷಾರ್ಥ.

ಭಾಷ್ಯ:— ಸಾಂಖ್ಯ ಶಾಸ್ತ್ರದ ಅಭಿಪ್ರಾಯವೂ ಇದೇ. ಆಧಿಭೌತಿಕ, ಆಧ್ಯಾತ್ಮಿಕ, ಮತ್ತು ಆಧಿದೈವಿಕ- ಈ ತ್ರಿವಿಧಗಳು ಉದರ ಪೂರ್ತಿಗಾಗಿ.

**"ಆಧಿಭೌತಿಕ"**— ಪೂರ್ತಿ - ಅನ್ನ, ವ್ಯಂಜನ ಪದಾರ್ಥಗಳು, ಲಾಡು, ಕಡುಬು, ಹೋಳಿಗೆ, ಪಾಯಸ ಮೊದಲಾದ ಭೌತಿಕ ಸಾಮಗ್ರಿಗಳಿಂದ ಹೊಟ್ಟೆಯನ್ನು ತುಂಬಿಸುವುದು ಆಧಿಭೌತಿಕ ಪೂರ್ತಿ.

**"ಆಧ್ಯಾತ್ಮಿಕ"**— ದೊಡ್ಡ ಮನುಷ್ಯರೆನಿಸಿಕೊಂಡವರ ದೊಡ್ಡದೊಡ್ಡ ಮಾತುಗಳಲ್ಲಿ ನಂಬಿಕೆಯನ್ನಿಟ್ಟು ಕಾಲಯಾಪನೆ ಮಾಡುವುದೆ ಆಧ್ಯಾತ್ಮಿಕ ಪೂರ್ತಿ.

**"ಆಧಿದೈವಿಕ"**— ದೇವತೆಗಳ ದಯೆಯಿಂದ ಯಾರ ಹೊಟ್ಟೆಯು ಪ್ಲೀಹ, ಯಕೃತ, ಜಲೋದರಾದಿಗಳಿಂದ ಪೂರ್ಣವಾಗಿರುವುದೊ ಅವರಲ್ಲಿ ಆಧಿದೈವಿಕ ಪೂರ್ತಿಯಾಗಿರುವುದು.

### ೩. ಇವುಗಳಲ್ಲಿ 'ಆಧಿಭೌತಿಕ' ಪೂರ್ತಿಯೆ ವಿಹಿತವಾದುದು.

**"ವಿಹಿತ"**— ವಿಹಿತ ಶಬ್ದದಿಂದ ಬೇರೆ ಎರಡು ಪೂರ್ತಿಗಳು ನಿಷೇಧಿತವಾಗಿವೆಯೆ ಇಲ್ಲವೆ ಎಂಬುದನ್ನು ಭವಿಷ್ಯತ್ ಭಾಷ್ಯಕಾರರು ನಿರ್ಣಯಿಸುವರು.

ಈಗ ಸಿದ್ಧಾಂತವಾದುದೇನೆಂದರೆ - ಹೊಟ್ಟೆ ಎಂಬ ದೊಡ್ಡ ಬಿಲದಲ್ಲಿ ಲಾಡು, ಬರ್ಫಿ, ಹಲ್ವಾ ಮೊದಲಾದ ಭೌತಿಕ ಪದಾರ್ಥಗಳ ಪ್ರವೇಶವೇ ಪುರುಷಾರ್ಥ - ಎಂಬುದು. ಅತಏವ ಈ ಗರ್ತದಲ್ಲಿ ಯಾವ ಬಗೆಯ ಭೂತಗಳು ಪ್ರವೇಶಿಸಬಲ್ಲವೆಂಬುದನ್ನು ನಿಶ್ಚಯಿಸಬೇಕು.

### ೪. ವಿದ್ಯೆ, ಬುದ್ಧಿ, ಪರಿಶ್ರಮ, ಉಪವಾಸನೆ, ಬಲ, ಛಲ– ಎಂಬಿವು ಷಡ್ವಿಧ ಪುರುಷಾರ್ಥಗಳ ಸಾಧನೆಗಳೆಂದು ಮೊದಲೇ ಪಂಡಿತರು ನಿಶ್ಚಯಿಸಿದ್ದಾರೆ.

ಭಾಷ್ಯ - ೧. **ವಿದ್ಯೆ** - ವಿದ್ಯೆ ಎಂದರೇನು ಎಂಬುದನ್ನು ನಿಶ್ಚಯಿಸಲು ಬಹು ಕಠಿನ. ಓದು, ಬರೆಹ ಕಲಿಯುವುದೇ ವಿದ್ಯೆ ಎಂದು ಕೆಲವರು ಹೇಳುವರು. ವಿದ್ಯೆಗಾಗಿ ಓದು, ಬರೆಹ ಕಲಿಯುವ ಆವಶ್ಯಕತೆಯೆ ಇಲ್ಲ. ಪುಸ್ತಕಗಳನ್ನು ಬರೆಯುವುದಕ್ಕೆ ವರ್ತಮಾನ ಪತ್ರಿಕೆಗಳಿಗೆ ಲೇಖನ ಬರೆಯುವುದಕ್ಕೆ ಕಲಿಯುವದೇ ವಿದ್ವತ್ತಿನ ಪ್ರಮಾಣ ಪತ್ರವಾಗಿದೆ ಎಂದು ಕೆಲವರು ಹೇಳುವರು. ಮತ್ತೆ ಕೆಲವರು "ಬರೆಯುವುದಕ್ಕೆ ಬಾರದವರು ಪತ್ರಿಕೆಗಳಿಗೆ ಲೇಖನಗಳನ್ನು ಹೇಗೆ ಬರೆಯಬಲ್ಲರು ?" ಎಂದು ಆಕ್ಷೇಪಿಸುವರು. ಈ ಬಗೆಯ ತರ್ಕ ಸರಿಯಲ್ಲವೆಂದು ನನ್ನ ಅಭಿಪ್ರಾಯ. ಮೊಸಳೆಯು

ಮರಿ ಮೊಟ್ಟೆಯನ್ನೊಡೆದುಕೊಂಡು ಹೊರಬಿದ್ದಕೂಡಲೆ ನೀರಿನಲ್ಲಿ ಈಜು ವುದಕ್ಕೆ ಆರಂಭಿಸುವುದು, ಅದಕ್ಕೆ ಈಜು ಕಲಿಸಬೇಕಾಗಿಲ್ಲ. ಹಾಗೆಯೇ ಭಾರತೀಯರಿಗೆ ಅದರಲ್ಲಿಯೂ ಕನ್ನಡನಾಡಿನ ಈಗಿನ ಸಂಪಾದಕರು, ಗ್ರಂಥ ಕರ್ತರು, ಕವಿಗಳಿಗೆ ವಿದ್ಯೆಯು ಒಂದು ಸ್ವತಃಸಿದ್ಧ - ಸ್ವಾಭಾವಿಕ ಗುಣವಾ ಗಿದೆ. ಆದ್ದರಿಂದ ವಿದ್ಯೆಗಾಗಿ ಓದು ಬರಹಗಳಿಂದ ಪ್ರಯೋಜನವಿಲ್ಲ.

೨. **ಬುದ್ಧಿ**— ಯಾವ ಆಶ್ಚರ್ಯಕರ ಶಕ್ತಿಯ ಮೂಲಕ ಹತ್ತಿ ಯಿಂದ ಲೋಹವನ್ನೂ, ಲೋಹದಿಂದ ಹತ್ತಿಯನ್ನೂ ವಿವೇಚಿಸಲಾಗು ವುದೊ, ಆ ಶಕ್ತಿಗೆ ಬುದ್ಧಿ ಎನ್ನುವರು. ಕೃಪಣನು ಕೂಡಿಟ್ಟಿರುವ ಧನರಾಶಿ ಯನ್ನು ಅವನೊಬ್ಬನೆ ನಿತ್ಯವೂ ನೋಡುತ್ತಿರುವಂತೆ, ಈ ಬುದ್ಧಿಯೂ ನಮಗೆ ಸ್ವತಃ ಸರ್ವದಾ ಗೋಚರವಾಗಬಲ್ಲದು. ಇದನ್ನು ಬೇರೆಯವರು ತೋರಿಸಿಕೊಡಲಾಗದು. ಪೃಥ್ವಿಯ ಸಕಲ ಸಾಮಗ್ರಿಗಳಿಗಿಂತಲೂ ಜಗ ತ್ತಿನಲ್ಲಿ ಈ ಶಕ್ತಿಯೆ ಅಧಿಕವಾಗಿ ಗೋಚರವಾಗುತ್ತಿದೆ. 'ನನಗೆ ಬುದ್ಧಿ ಕಡಿಮೆ' ಎಂದು ಯಾರೂ ಹೇಳಿಕೊಳ್ಳುವುದಿಲ್ಲ.

೩. **ಪರಿಶ್ರಮ**— ಹೊತ್ತಿಗೆ ಸರಿಯಾಗಿ ಬಿಸಿಬಿಸಿಯಾಗಿ ಕಮ್ಮಗೆ ಊಟಮಾಡಿ, ಬೆಚ್ಚಗಿರುವ ಹಾಸಿಗೆ ಮೇಲೆ ಮಲಗಿ ನಿದ್ರಿಸುವುದು, ವಾಯು ವಿಹಾರ, ಸಿಗರೇಟು - ಬೀಡಿ - ಸೇದುವುದು, ಹೆಂಡತಿಯೊಂದಿಗೆ ಪ್ರೇಮ ಸಂಭಾಷಣೆ ಇವೇ ಮುಂತಾದ ಗುರುತರಕಾರ್ಯಗಳನ್ನೆಸಗುವುದೆ ಪರಿಶ್ರಮ ವೆನಿಸುವುದು.

೪. **ಉಪಾಸನೆ**— ಯಾವುದಾದರೊಂದು ವ್ಯಕ್ತಿಯ ವಿಚಾರದಲ್ಲಿ ನಾವು ಏನಾದರೂ ಮಾತನಾಡುವಾಗ ವ್ಯಕ್ತಿಯ ಗುಣಗಾನ ಮಾಡುತ್ತೇವೆ, ಅಥವಾ ಅವನ ದೋಷಗಳನ್ನು ಹೇಳುತ್ತೇವೆ! ಯಾವನಾದರೊಬ್ಬ ಕ್ಷಮತಾ ಶಾಲಿಯಾದ ಮುಖ್ಯ ವ್ಯಕ್ತಿಯೊಬ್ಬನ ವಿಚಾರದಲ್ಲಿ ಮಾತನಾಡುವಾಗ ಕೇವಲ ಅವನ ದೋಷಗಳನ್ನೇ ಹೇಳುತ್ತಿದ್ದರೆ, ಆ ದೋಷಕೀರ್ತನೆಗೆ 'ನಿಂದೆ' ಎನ್ನುವರು. ಅದರಲ್ಲಿ ಅವನ ದೂರುವ ವಿಚಾರವಿಲ್ಲದಿದ್ದರೆ, ಆದೋಷಕೀರ್ತನೆಗೆ "ಸ್ಪಷ್ಟವಕ್ತೃತ್ವ" ಅಥವಾ 'ರಸಿಕತೆ' ಎನ್ನುವರು. ಅವನಲ್ಲಿ ಯಾವ ಗುಣವೂ ಇಲ್ಲದೆ, ಅಂತಹನ ಗುಣಗಾನ ಮಾಡಿದರೆ

ಆದಕ್ಕೆ 'ನ್ಯಾಯನಿಷ್ಠತೆ' ಎಂದು ಹೇಳುವರು. ಆ ವ್ಯಕ್ತಿಯು ಯಥಾರ್ಥವಾಗಿ ಗುಣಶಾಲಿಯಾಗಿದ್ದರೆ, ಅಂತಹನ ಗುಣಗಾನಕ್ಕೆ 'ಉಪಾಸನೆ' ಎನ್ನುವರು.

**೫. ಬಲ**— ದೊಡ್ಡ ದೊಡ್ಡ ಪೌರುಷದ ವಾಕ್ಯಗಳನ್ನಾಡುತ್ತ,- ಮುಖ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, - ಬಾಯಲ್ಲಿ ಅಶುದ್ಧವಾದ ಕನ್ನಡ ಇಂಗ್ಲಿಷ ಶಬ್ದಗಳನ್ನಾಡುತ್ತ, ಉಗುಳ ಮಳೆ ಸುರಿಸುತ್ತ,- ಅಕ್ರೋಶದಿಂದ ಮೇಜನ್ನು ಗುದ್ದುತ್ತ, ಮುಷ್ಟಿ ಪ್ರದರ್ಶನಮಾಡುತ್ತ, ಹಲ್ಲು ಕಡಿಯುತ್ತ, ಔಡು ಕಚ್ಚುತ್ತ. ಐವತ್ತಮೂರರ ಅರ್ಥ ವಯಸ್ಸಾದವನಂತೆ ವಿವಿಧ, ಅಂಗ ಭಂಗಿಗಳನ್ನು ತೋರುತ್ತ, ತನಗೆ ವಿರುದ್ಧ ಪಕ್ಷದವರಾದರೂ ಬಂದಕೂಡಲೆ. ಅಕಾಲದಲ್ಲಿ ಪಲಾಯನಮಾಡುವುದು-ಮೊದಲಾದವುಗಳಿಗೆ 'ಬಲ' ಎನ್ನುವರು.- 'ಬಲ'ದಲ್ಲಿ ಆರು ಬಗೆಗಳಿವೆ. ಅವುಗಳಾವುವೆಂದರೆ :

**ಮೌಖಿಕ**— ಅಭಿಸಂಪಾತ, ಬೈಯುವುದು, ನಿಂದೆ, ಮೊದಲಾದವು. **ಕೈಬಲ.**–ಮುಷ್ಟಿಯನ್ನು ಹೊಡೆಯುವವನಂತೆ, ದೂರದಿಂದಲೆ ಪ್ರದರ್ಶಿಸುವುದು, ಇತ್ಯಾದಿ. **ಕಾಲಿನಬಲ**— ಪಲಾಯನಮಾಡುವುದು ಮೊದಲಾದ್ದು. **ಚಾಕ್ಷುಷ** (ಕಣ್ಣಿನಬಲ)–ರೋದನ (ಅಳುವುದು) ಮೊದಲಾದುದು–ಯಥಾ ಚಾಣಕ್ಯ ಪಂಡಿತ– "ಬಾಲಾನಾಂ ರೋದನಂ ಬಲಂ" ಇತ್ಯಾದಿ. **ತ್ವಕ್‌ಬಲ**— ಪ್ರಹರ ಸಹಿಷ್ಣುತೆ ಇತ್ಯಾದಿ. **ಮಾನಸಬಲ**— ದ್ವೇಷ, ಈರ್ಷೆ, ಹಿಂಸೆ ಇತ್ಯಾದಿ.

**೬. ಛಲ(ಮೋಸ)**— ಮುಂದೆ ಹೇಳುವ ವ್ಯಕ್ತಿಗಳನ್ನು ಈ ಪೃಥ್ವಿ ಲೋಕದಲ್ಲಿ ಛಲಗಾರ (ಮೋಸಗಾರ) ರೆಂದು ತಿಳಿಯಬೇಕು. **(೧) ಅಂಗಡಿಯವನು** (ಪಣ್ಯಜೀವಿ)-ಇವನು ಸಾಮಾನನ್ನುಮಾರಿ ಅದರ ಬೆಲೆಯನ್ನು ಕೇಳುವನು. 'ನಾವು ಅವನ ಸಾಮಾನು ಕೊಂಡುಕೊಳ್ಳುವುದರಲ್ಲಿ ಮೋಸ ಹೋಗಿಶ್ವೇವೆಂದು ಪ್ರತಿಯೊಬ್ಬ ಗಿರಾಕಿಯೂ ಭಾವಿಸುತ್ತಾನೆ. **(೨) ಚಿಕಿತ್ಸಕ** (ವೈದ್ಯ) – ರೋಗಿಯು ಆರೋಗ್ಯ ಹೊಂದಿದಬಳಿಕ, ವೈದ್ಯನು 'ಫೀಜನ್ನು' ಕೇಳಿದರೆ, ನನ್ನ ರೋಗವು ತಾನಾಗಿಯೆ ಗುಣವಾಗಿರುವಾಗ ಈ ವೈದ್ಯನು ನನಗೆ ಮೋಸಮಾಡಿ ದುಡ್ಡು ತೆಗೆದುಕೊಳ್ಳುವನಲ್ಲಾ ಎಂದು ರೋಗಿ ಭಾವಿಸುವನು. **(೩) ಧರ್ಮೋಪದೇಶಕ** (ಧಾರ್ಮಿಕವ್ಯಕ್ತಿ)-ಇವನು

ಸದಾ ಮೋಸಗಾರನೆಂಬುದು ರೂಢಿ. ಇವನಿಗೆ 'ಭಂಡ' ಎಂಬ ಬೇರೆ ಹೆಸರೂ ಇದೆ. ಈ ಮೋಸಗಾರರು ತಮಗೆ ಧನದಾಶೆಯೆ ಇಲ್ಲವೆಂದು ಜನ ರನ್ನು ವಂಚಿಸುವರು.

## ೫. ಈ ಷಡ್ವಿಧ ಉಪಾಯಗಳಿಂದ ಉದರಂಭರಣೆ ಅಥವಾ ಪುರುಷಾರ್ಥ ಸಾಧನೆ ಅಸಾಧ್ಯ.

**ಭಾಷ್ಯ**— ಈ ಸೂತ್ರದಿಂದ ಪ್ರಾಚೀನ ಪಂಡಿತರ ಮತವನ್ನು ಖಂಡಿಸ ಲಾಗಿದೆ. ವಿದ್ಯಾದಿ ಷಡ್ವಿಧ ಉಪಾಯಗಳಿಂದ ಉದರಂಭರಣೆ ಆಗುವುದಿಲ್ಲ. ಅವಕ್ಕೆ ಕ್ರಮವಾಗಿ ಉದಾಹರಣೆಗಳನ್ನು ಕೊಡಲಾಗುವುದು.

**'ವಿದ್ಯೆ'**— ವಿದ್ಯೆಯಿಂದ ಉದರಪೂರ್ತಿಯಾಗುತ್ತಿದ್ದರೆ ಕನ್ನಡ ಪತ್ರಿ ಕೆಗಳಿಗೆ ಅನ್ನಾಭಾವವಿರುತಿತ್ತೇಕೆ ?

**'ಬುದ್ಧಿ'**— ಇದರಿಂದ ಉದರ ಪೂರ್ತಿಯಾಗುತ್ತಿದ್ದರೆ, ಕತ್ತೆಗಳು ಮೂಟೆಗಳನ್ನು ಹೊರುತ್ತಿದ್ದವೇಕೆ ?

**ಪರಿಶ್ರಮ**— ಇದರಿಂದ ಪುರುಷಾರ್ಥವಿದ್ದರೆ, ನಮ್ಮ ಸುಶಿಕ್ಷಿತರು ಗುಮಾಸ್ತಗಿರಿಯಲ್ಲೇಕೆ ಇರುತ್ತಿದ್ದರು ?

**ಉಪಾಸನಾ**— ಇದರಿಂದ ಉದರಂಭರಣೆಯಾಗುತ್ತಿದ್ದರೆ, ಆಫೀಸಿನ ಸಾಹೇಬರು ಕಮಲಾಕಾಂತನಿಗೆ ಅನುಗ್ರಹಮಾಡದೆ ಇರುತ್ತಿದ್ದರೇಕೆ? ನಾನು ಅವರಿಗೆ ಕೊಟ್ಟ ' ಪೇ – ಬಿಲ್ 'ನ್ನು ತಪ್ಪಾಗಿ ಬರೆದಿರಲಿಲ್ಲ.

**ಬಲ**— ಇದರಿಂದ ಪ್ರಯೋಜನವಿದ್ದಿದರೆ-ನಾನು ಎಡಹಿಬಿದ್ದು, ಏಟು ತಿನ್ನುತ್ತಿದ್ದೆನೇಕೆ ?

**ಛಲ** (ಮೋಸ)— ಇದರಿಂದ ಉದರ ಪೂರ್ತಿಯಾಗುತ್ತಿದ್ದರೆ, ಮದ್ಯದ ಅಂಗಡಿ ವ್ಯಾಪಾರವೇಕೆ ಆಗಾಗ್ಗ ನಿಂತುಹೋಗುತ್ತಿತ್ತು?

## ೬. ಉದರಪೂರ್ತಿ ಅಥವಾ ಪುರುಷಾರ್ಥವು ಕೇವಲ ಅನ್ಯ ಹಿತಸಾಧನೆಯ ಮೂಲಕವೇ ಸಾಧ್ಯ.

**ಭಾಷ್ಯ**— ಉದಾಹರಣೆ - ಬ್ರಾಹ್ಮಣ ಪಂಡಿತರು ಬೇರೆಯವರ ಕಿವಿ ಗಳಲ್ಲಿ ಮಂತ್ರಗಳನ್ನುಸುರಿ, ಅನ್ಯರ ಹಿತಸಾಧನೆ ಮಾಡುತ್ತಿರುವರು.

ಯೂರೋಪಿನ ಜನರು ಬೇರೆ ಅನೇಕ ಕಾಡುಜನರ ಹಿತಸಾಧನೆ ಮಾಡುತ್ತಿದ್ದಾರೆ. ಅದೇ ರೀತಿಯಾಗಿ ರಷ್ಯಾದವರು ಈಗ ಮಧ್ಯ ಏಷ್ಯಾದವರ ಹಿತಸಾಧನೆಯಲ್ಲಿ ನಿಯುಕ್ತರಾಗಿರುವರು. ವಿಚಾರಶೀಲರಾದವರು ವಿಚಾರ ಪೂರ್ವಕವಾಗಿ ದೇಶ ಹಿತಸಾಧನೆ ಮಾಡಲಾರಂಭಿಸಿರುವರು. ಅನೇಕರು ಮಾರಾಟವಾಗುವ ಅಥವಾ ಮಾರಾಟವಾಗದಿರುವ ಪುಸ್ತಕ ಮತ್ತು ಪತ್ರಿಕೆಗಳನ್ನು ಬರೆಯುವುದರ ಮೂಲಕ ದೇಶದ ಹಿತಸಾಧನೆ ಮಾಡುತ್ತಿರುವರು. ಇವೆಲ್ಲವುಗಳ ಪ್ರಚಾರ ಪರಿಮಾಣದಿಂದ ಉದರ ಪೂರ್ತಿ ಅರ್ಥಾತ್ ಪುರುಷಾರ್ಥ ಲಾಭವಾಗುವುದು.

**೭. ಅತಏವ ಎಲ್ಲರೂ ದೇಶದ ಹಿತಸಾಧನೆ ಮಾಡಬೇಕು.**

**ಭಾಷ್ಯ**— ಈ ಕೊನೆಯ ಸೂತ್ರದ ಮೂಲಕ ಹಿತವಾದದ ದರ್ಶನ ಏವಂ ಉದರದರ್ಶನಗಳ ಏಕತೆಯು– ಸಾಮ್ಯತೆಯು ಪ್ರತಿಪಾದಿತವಾಗಿದೆ. ಕೇವಲ ಇಲ್ಲಿಗೆ ಕಮಲಾಕಾಂತನ ಸೂತ್ರಗ್ರಂಥವು ಸಮಾಪ್ತವಾಯಿತು. ಇದು ಭಾರತವರ್ಷದ ಸಪ್ತಮದರ್ಶನ ಶಾಸ್ತ್ರವೆಂದು ಆದರಿಸಲ್ಪಡುವುದೆಂದು ನನಗೆ ಭರವಸೆ ಇದೆ.

**— ಶ್ರೀ ಕಮಲಾಕಾಂತ ಚಕ್ರವರ್ತಿ.**

---

## ೪. ಪತಂಗ

ನಸೀರಾಮ ಬಾಬುವಿನ ಬೈಠಖಾನೆಯಲ್ಲಿ ಒಂದು ದೊಡ್ಡ "ಗ್ಲೋಬು" ಇರುವ ಲ್ಯಾಂಪು ಉರಿಯುತ್ತಿದೆ. ಅದರ ಹತ್ತಿರದಲ್ಲಿಯೇ ನಾನು ರಕ್ಷಕ ಸೋಪಾದಿಯಲ್ಲಿ ಕೂತಿದ್ದೇನೆ. ಬಾಬುವು ಜಾತಿಗಳ ಜಗಳವನ್ನು ಕುರಿತು ಮಾತನಾಡುತ್ತಿದ್ದಾನೆ. ನಾನು ಭಂಗಿಯ ದಮ್ಮನ್ನು ಎಳೆಯುತ್ತಿದ್ದೇನೆ. ಜಾತಿ ಜಗಳ ವಿಚಾರವನ್ನು ಕೇಳಿ ದಮ್ಮನ್ನು ಜೋರಾಗಿ ಎಳೆದೆನು. ಇದು ನನ್ನ ಹಣೆಯ ಬರಹ. ಏನು ಮಾಡುವುದು ? ಈ ಅಖಿಲ ಬ್ರಹ್ಮಾಂಡದ ಅನಾದಿ ಕ್ರಿಯಾಪರಂಪರೆಗಳ ನಿಯಮಗಳಲ್ಲಿ ಒಂದಾಗಿ, ಈ ಇಪ್ಪತ್ತನೆಯ ಶತಮಾನದಲ್ಲಿ ಶ್ರೀ ಕಮಲಾಕಾಂತ ಚಕ್ರವರ್ತಿಯು ಅವತರಿಸಿ, ಇವತ್ತು ರಾತ್ರಿ ನಸೀರಾಮ ಬಾಬುವಿನ ಬೈಠಕ ಖಾನೆಯಲ್ಲಿ ಕುಳಿತುಕೊಂಡು ಅವಶ್ಯಕವಾಗಿಯೆ ಭಂಗಿಯ ದಮ್ಮನ್ನು ಅಧಿಕವಾಗಿ ಎಳೆಯಬೇಕೆಂದು ವಿಧಾತನು ವಿಧಿಸಿರುವಾಗ, ಅದನ್ನು ಮೀರುವುದು ನನ್ನಿಂದ ಖಂಡಿತವಾಗಿ ಸಾಧ್ಯವೆ ?

ದಮ್ಮು ಎಳೆಯುತ್ತ ಎಳೆಯುತ್ತ ಆ ನಿಷಾದಲ್ಲಿಯೆ ನೋಡಿದೆ-ಒಂದು ಪತಂಗವು ಬಂದು ದೀಪದ ಸುತ್ತಲು ಸುತ್ತುತ್ತ,-"ಚಿಂಯ್-ಂ-ಂ" "ಬೋಯ್ಂ-ಂ-ಂ" ಎಂದು ಶಬ್ದ ಮಾಡುತ್ತಿತ್ತು. ಭಂಗಿಯ ಮತ್ತಿನಲ್ಲಿ "ನನಗೆ ಪತಂಗದ ಭಾಷೆಯು ತಿಳಿಯಲಾರದೆ" ಎಂದು ಯೋಚಿಸಿದೆ. ಕೆಲವು ಕ್ಷಣಕಾಲ ಕಿವಿಗೊಟ್ಟು ಕೇಳಿದೆ. ಏನೂ ತಿಳಿಯಲಿಲ್ಲ. ನಾನು ಮನಸ್ಸಿನಲ್ಲಿ ಆ ಪತಂಗವನ್ನು ಕುರಿತು-"ನೀನು ಏತಕ್ಕೆ ಚಿಂಯ್, ಬೊಂಯ್ ಎಂದು ಅರಚುತ್ತಿರುವೆ. ನಿನ್ನ ಉದ್ದೇಶವೆ ನನಗೆ ತಿಳಿಯದು" ಎಂದು ಹೇಳಿಕೊಂಡೆ. ಆಗ ಹಠಾತ್ತಾಗಿ ಭಂಗದೇವಿಯ (ಭಂಗಿಸೊಪ್ಪಿನ) ಪ್ರಸಾದದಿಂದ ನನಗೆ ದಿವ್ಯಕರ್ಣವು ಪ್ರಾಪ್ತವಾಯಿತು. ನಾನು ಕೇಳಿದೆ-ಪತಂಗವು ಹೇಳಿತು-"ನಾನು ಈ ದೀಪದ ಜತೆಗೆ ಮಾತನಾಡುತ್ತಿದ್ದೇನೆ. ನೀನು ಸುಮ್ಮನಿರು". ಆಗ ನಾನು ಮೌನವನ್ನು ಧರಿಸಿ ಪತಂಗದ ಸಂಭಾಷಣೆಯನ್ನು ಕೇಳಲಾರಂಭಿಸಿದೆ. ಪತಂಗವು ಹೇಳುತ್ತಿದೆ—

"ನೋಡು, ಪ್ರಕಾಶ ಮಹಾಶಯ, ನೀನು ಮುಂಚೆ ಒಳ್ಳೆಯವನಾಗಿದ್ದೆ. ಆಗ ನೀನು ಹಿತ್ತಾಳೆಯ ದೀಪಸ್ತಂಭದ ಮೇಲೆ ಚೆನ್ನಾಗಿ ಪ್ರಜ್ವಲಿಸುತ್ತ ವಿಶೇಷ ಶೋಭೆಯನ್ನು ಹೊಂದಿದ್ದೆ. ನಾವು ಯಾವ ಆತಂಕವೂ ಇಲ್ಲದೆ ಸುಟ್ಟು ಸಾಯುತ್ತಿದ್ದೆವು. ಈಗ ಇಂಗ್ಲೀಷ ಫ್ಯಾಷನಿನ ಭಕ್ತನಾಗಿ ಗಾಜಿನೊಳಗೆ ಅವಿತುಕೊಂಡಿರುವೆ. ನಾವು ನಿನ್ನ ಸುತ್ತಲೂ ಸುತ್ತುವೆವು. ಆದರೆ ನಿನ್ನನ್ನು ಸಮೀಪಿಸಲು ದಾರಿ ಇಲ್ಲವಾಗಿದೆ. ಸುಟ್ಟು ಸಾಯುವುದಕ್ಕೂ ಅವಕಾಶವಿಲ್ಲವಾಗಿದೆ."

"ನೋಡು ಈ ಬಗೆಯಾಗಿ ಸುಟ್ಟು ಸಾಯುವುದಕ್ಕೆ ನಮಗೆ ಅಧಿಕಾರವಿದೆ, ರೈಟು ಇದೆ, ಹಕ್ಕು ಇದೆ. ನಮ್ಮ ಪತಂಗ ಜಾತಿಯು ಯಾವಾಗಲೂ ಪ್ರಕಾಶದಲ್ಲಿ ಸುಟ್ಟು ಸಾಯುವುದು ಪದ್ಧತಿಯಾಗಿದೆ. ಯಾವ ಜ್ಯೋತಿಯೂ ನಮ್ಮನ್ನು ಎಂದಿಗೂ ತಡೆದಿಲ್ಲ. ಎಣ್ಣೆಯ ದೀಪವಾಗಲಿ, ಮೇಣಬತ್ತಿಯ ಪ್ರಕಾಶವಾಗಲಿ, ಕಟ್ಟಿಗೆಯ ಜ್ವಾಲೆಯಾಗಲಿ ನಮ್ಮನ್ನು ತಡೆದಿಲ್ಲ. ಪ್ರಭೋ, ಮತ್ತೆ ನೀನೇಕೆ ಗಾಜಿನೊಳಗೆ ಅವಿತುಕೊಂಡು ನಾವು ಸುಟ್ಟು ಸಾಯುವುಕ್ಕೆ ಅವಕಾಶವನ್ನೀಯದಿರುವೆ? ನಾವು ಬಡ ಪತಂಗ ಜಾತಿಯವರು. ನಮ್ಮ ಮೇಲೆ ಸಹ ಮರಣ ನಿಷೇಧದ ಕಾನೂನನ್ನು ಏತಕ್ಕೆ ಆಚರಿಸುತ್ತಿ. ಸುಟ್ಟು ಸಾವನ್ನು ಸಹಿಸಿಕೊಳ್ಳದಿರುವುದಕ್ಕೆ ನಾವು ಹಿಂದೂ ಸ್ತ್ರೀಯರೇ?"

"ನೋಡು, ಹಿಂದೂ ಸ್ತ್ರೀಯರಿಗೂ, ನಮಗೂ ಬಹಳ ಭೇದವಿದೆ. ಹಿಂದೂ ಸ್ತ್ರೀಯರು ಆಸೆ ಭರವಸೆಗಳನ್ನಿಟ್ಟುಕೊಂಡಿರುವುದರಿಂದ ಅವರು ಸುಟ್ಟು ಸಾಯುವುದನ್ನೆಂದಿಗೂ ಅಪೇಕ್ಷಿಸುವುದಿಲ್ಲ. ಅವರು ಮೊದಲು ವಿಧವೆಯಾಗುವರು, ಅನಂತರ ಸುಟ್ಟು ಸತ್ತು ಸತಿಯಾಗುವರು. ನಮ್ಮ ಜಾತಿಯಾದರೋ ಯಾವಾಗಲೂ ಆತ್ಮತ್ಯಾಗಮಾಡಲು ಸಿದ್ಧವಾಗಿರುವುದು. ನಮ್ಮೊಂದಿಗೆ ಸ್ತ್ರೀ ಜಾತಿಯ ತುಲನೆಯೇ?"

"ಸ್ತ್ರೀಯರೂ ನಮ್ಮಂತೆಯೇ ರೂಪಜ್ಯೋತಿಯು ಜ್ವಲಿಸುವುದನ್ನು ನೋಡಿ ಅದರಲ್ಲಿ ಬೀಳುವರೆಂಬುದು ನಿಜ. ಫಲವೇನೋ ಒಂದೇ. ನಾವೂ ಸುಟ್ಟು ಸಾಯುವೆವು. ಅವರೂ ಸುಟ್ಟು ಸಾಯುವರು. ಆದರೆ ನೋಡು,

ಅವರು ಸುಟ್ಟು ಸಾಯುವುದರಲ್ಲಿ ಸುಖವಿದೆ, ನಮಗಾವ ಸುಖವಿದೆ? ನಾವು ಕೇವಲ ಸುಡುವುದಕ್ಕೋಸ್ಕರ ಸುಟ್ಟುಕೊಳ್ಳುತ್ತೇವೆ, ಸಾವಿಗಾಗಿ ಸಾಯುತ್ತೇವೆ. ಇದು ಸ್ತ್ರೀಯರಿಗೆ ಸಾಧ್ಯವೆ? ಮತ್ತೆ ನಮ್ಮೊಂದಿಗೆ ಅವರ ತುಲನೆಯೋ ?"

"ಕೇಳು! ಜ್ವಲಿಸುತ್ತಿರುವ ರೂಪಾಗ್ನಿಯಲ್ಲಿ ಈ ಶರೀರವನ್ನು ಆಹುತಿ ಕೊಡದಿದ್ದರೆ ಶರೀರದಿಂದೇನು ಪ್ರಯೋಜನ? ಅನ್ಯ ಜೀವಿಗಳು ಏನು ಭಾವಿಸುವವು? ಅದನ್ನು ನಾವು ಹೇಳಲಾರೆವು. ಆದರೆ ನಾವು ಪತಂಗ ಜಾತಿಯರು. ಈ ಶರೀರವೇತಕ್ಕೆ ಎಂಬುದನ್ನು ನಾವು ತಿಳಿಯಲಾರೆವು. ಅದನ್ನು ಕಟ್ಟಿಕೊಂಡು ನಮಗಾಗಬೇಕಾದ್ದೇನು? ನಿತ್ಯವೂ ನಾವು ಕುಸುಮದಿಂದ ಮಧುಪಾನಮಾಡುವೆವು. ಜಗತ್ತನ್ನು ಪ್ರಕಾಶಗೊಳಿಸುವ ಸೂರ್ಯ ಕಿರಣದಲ್ಲಿ ವಿಹರಿಸುವೆವು. ಆದರೆ ಅದರಲ್ಲೇನು ಸುಖವಿದೆ? ಪುಷ್ಪಗಳಲ್ಲಿ ಅದೇ ಒಂದೇ ಬಗೆಯ ಗಂಧ. ಮಧುವಿನಲ್ಲಿ ಅದೇ ಬಗೆಯ ಮಧುರತೆ, ಸೂರ್ಯನಲ್ಲಿ ಒಂದೇ ಬಗೆಯ ತೇಜಸ್ಸು. ಇಂಥಾ ಅಪಾರವಾದ, ಪುರಾತನವಾದ, ವೈಚಿತ್ರ್ಯ ಶೂನ್ಯವಾದ ಜಗತ್ತಿನಲ್ಲಿರುವುದು ಒಳ್ಳೆಯದೆ? ಆ ಗಾಜಿನಿಂದ ಹೊರಕ್ಕೆ ಬಾ. ಜ್ವಲಿಸುತ್ತಿರುವ ರೂಪಾಗ್ನಿಯಲ್ಲಿ ನಮ್ಮ ಶರೀರವನ್ನು ಆಹುತಿಕೊಡುವೆವು."

"ನೋಡು, ನಿನ್ನಲ್ಲಿ ನನ್ನ ಸಣ್ಣ ಭಿಕ್ಷೆಯೊಂದಿದೆ. ನನ್ನ ಪ್ರಾಣವನ್ನು ನಿನಗರ್ಪಿಸಿ ಹೋಗುವೆನು? ಈ ದಾನವನ್ನು ಕೊಡುವವರೆಗೆ ನಿನ್ನಿಂದ ಏನನ್ನೂ ಸ್ವೀಕರಿಸೆನು. ಇದರಲ್ಲಿ ನಿನಗಾಗುವ ನಷ್ಟವೇನು? ನಮ್ಮನ್ನು ನಿನ್ನ ರೂಪಾಗ್ನಿಯಲ್ಲಿ ಸುಡುವುದಕ್ಕಾಗಿಯೇ ನೀನು ಹುಟ್ಟಿರುವೆ. ಸುಟ್ಟು ಸಾಯವುದಕ್ಕಾಗಿ ನಾನು ಹುಟ್ಟಿರುವೆನು. ಬಾ, ನಮ್ಮ ನಮ್ಮ ಕರ್ತವ್ಯವನ್ನು ಮಾಡೋಣ, ನೀನು ನಗುತ್ತಿರು. ನಾನು ಸುಟ್ಟುಕೊಂಡು ಸಾಯುತ್ತೇನೆ."

"ವಿಶ್ವವನ್ನೇ ಧ್ವಂಸಮಾಡುವ ಶಕ್ತಿಯು ನಿನ್ನಲ್ಲಿದೆ. ಜಗತ್ತಿನಲ್ಲಿ ನಿನ್ನನ್ನು ತಡೆಗಟ್ಟುವವರೂ ಇಲ್ಲ. ಮತ್ತೆ ನೀನು ಗಾಜಿನಲ್ಲೇಕೆ ಅವಿತಿರುವೆ? ನೀನು ಜಗತ್ತಿನಗತಿಗೆ ಕಾರಣವಾಗಿರುವೆ. ಯಾರ ಭಯಕ್ಕಾಗಿ ನೀನು ಗಾಜಿನ ಬರುಡೆಯಲ್ಲಿ ಸೇರಿರುವೆ? ಯಾವ ಮೂರ್ಖನು ಈ ಬುರುಡೆ

ಯನ್ನು ಸೃಷ್ಟಿಸಿದನು. ನೀನು ವಿಶ್ವವ್ಯಾಪಿ. ನೀನು ಗಾಜನ್ನೊಡೆದು ಕೊಂಡುಬಂದು ನನಗೆ ಪ್ರತ್ಯಕ್ಷವಾಗುವುದಿಲ್ಲವೆ?"

"ನೀನು ಏನಾಗಿರುವೆ? ಅದು ನನಗೆ ತಿಳಿಯದು. ಅದು ತಿಳಿಯ ದಿದ್ದರೂ ನೀನು ನನ್ನ ವಾಸನೆಯ ವಸ್ತುವೆಂದು ಮಾತ್ರ ಬಲ್ಲೆನು. ಜಾಗ್ರತ ವಾಗಿರುವಾಗ ನನ್ನ ಧ್ಯಾನದ ಸಾಮಗ್ರಿ, ನಿದ್ರಿಸುವಾಗ ಸುಖದ ಸ್ವಪ್ನ, ಜೀವದ ಆಸೆ, ನನ್ನ ಮರಣದ ಆಶ್ರಯ ನೀನು. ನಿನ್ನನ್ನು ನಾನೆಂದಿಗೂ ತಿಳಿಯಲಾರೆನು. ತಿಳಿಯಲು ಆಶಿಸುವುದೂ ಇಲ್ಲ. ಎಂದು ತಿಳಿಯವೆನೊ ಅಂದೇ ನನ್ನ ಸುಖವೂ ಹೋಗಿಬಿಡುವುದು. ಕಾವ್ಯವಸ್ತುವಿನ ಸ್ವರೂಪ ವನ್ನು ತಿಳಿದನಂತರ ಸುಖವೆಲ್ಲಿಯದು?"

"ನಿನ್ನನ್ನು ಹೊಂದಲಾರನೇನು? ಎಷ್ಟು ದಿನ ನೀನು ಈ ಗಾಜಿನ ಕೋಟೆಯಲ್ಲಿರುವೆ? ನಾನು ಈ ಗಾಜನ್ನು ಒಡೆಯಲಾರೆನೇನು? ಒಳ್ಳೆ ಯದು ಇರು, ನಾನು ಈಗ ಪ್ರಾಣಬಿಡುವುದಿಲ್ಲ. ಮತ್ತೆ ಬರುತ್ತೇನೆ."- ಬೊಯ್-೦-೦-೦-ಪತಂಗವು ಹಾರಿಹೋಯಿತು."

ನಸೀರಾಮ ಬಾಬುವು "ಕಮಲಾಕಾಂತ" ಎಂದು ಕೂಗಿದನು. ನಾನು ಬೆಚ್ಚಿಬಿದ್ದೆನು. ಕಣ್ಣುತೆಗೆದು ನೋಡಿದೆನು. ವಿಶೇಷ ಮತ್ತಿನಿಂದ, ತಲೆ ತಿರುಗಿ ಬಿದ್ದಿದ್ದೆನು. ನಸೀರಾಮನ ಕಡೆ ಎಷ್ಟೋ ಸಲ ಕಣ್ಣಗಲಿಸಿ ನೋಡಿ ದೆನು. ಅವನ ಗುರುತು ಸಿಕ್ಕಲಿಲ್ಲ. ನೋಡಿದೆ - ಆಗ ಮನಸ್ಸಿಗೆ ತೋರಿತು - ಒಂದು ಬೃಹತ್ ಪತಂಗವು ದಿಂಬಿಗೆ ಒರಗಿಕೊಂಡು, (ಹುಕ್ಕಾ) ಕೊಳವೆಯ ಮೂಲಕ ತಮಾಖು (ತಂಬಾಕು) ಸೇವನೆಯನ್ನು ಮಾಡುತ್ತಿದೆ. ಅದು ನನ್ನ ಜತೆಗೆ ಮಾತನಾಡಲಾರಂಭಿಸಿದಂತೆ ಭಾಸವಾಯಿತು. ಅದು-"ಚೌಯ್- ಬೊಯ್-೦-೦-೦" ಎಂದು ಹೇಳುತ್ತದೆ. - ಆಗ - ನನಗೆ ತಿಳಿಯಿತು. ಮನು ಷ್ಯರೆಲ್ಲರೂ ಪತಂಗಗಳು. ಈ ಪತಂಗಗಳೂ ಸುಟ್ಟು ಸಾಯುವುದಕ್ಕೆ ಒಂದಿಲ್ಲವಾದರೊಂದು ಅಗ್ನಿಯು ಇದ್ದೇ ಇರುವುದು. ಎಲ್ಲರೂ ಆ ಬೆಂಕಿ ಯಲ್ಲಿ ಬಿದ್ದು ಸಾಯುವರು. ಆ ಅಗ್ನಿಯಯಲ್ಲಿ ಬಿದ್ದು ಸಾಯುವುದಕೆ ಅವರಿಗೆ ಅಧಿಕಾರವಿದೆಯೆಂದು ತಿಳಿದಿರುವರು. ಅವರಲ್ಲಿ ಕೆಲವರು ಸುಟು ಸಾಯುವರು. ಕೆಲವವು ಗಾಜಿನ ಗೋಡೆಗೆ ತಲೆಹೊಡೆದುಕೊಂಡು ತಿರುಗಿ

ಬರುವರು. ಜ್ಞಾನದ ಅಗ್ನಿ, ಧನದ ಅಗ್ನಿ, ಮಾನದ ಅಗ್ನಿ, ರೂಪದ ಅಗ್ನಿ ಧರ್ಮದ ಅಗ್ನಿ, ಇಂದ್ರಿಯಗಳ ಅಗ್ನಿ, ಇತ್ಯಾದಿಯಾಗಿ ಸಂಸಾರವೆಲ್ಲ ಅಗ್ನಿ ಮಯವಾಗಿದೆ. ಈ ಅಗ್ನಿಮಯ ಸಂಸಾರದಲ್ಲಿಯೂ ಗಾಜಿನ ಗೋಡೆ ಇದೆ. ಅನೇಕರು ಅದರ ಪ್ರಕಾಶಕ್ಕೆ ಮೋಹಿತರಾಗುವರು - ಮೋಹಿತರಾಗಿ ಅದರಲ್ಲಿ ಬೀಳಲು ಹೋಗುವರು - ಆದರೆ - ಅದೆಲ್ಲಿ ಅವರಿಗೆ ಸಿಕ್ಕುವುದು!-ಅವರು ಬೊಯ್-ಂ-ಂ-ಂ ಎಂದು ಹಿಂತಿರುಗಿ ಹೋಗುವರು ಮತ್ತೆ ಬಂದು ಅದರ ಸುತ್ತಲೂ ಸುತ್ತುತ್ತಿರುವರು. ಆ ಗಾಜಿನ ಗೋಡೆಯಿಲ್ಲದಿದ್ದರೆ ಸಂಸಾರವೆಲ್ಲ ಎಂದೊ ಸುಟ್ಟು ಬೂದಿಯಾಗಿರುತ್ತಿತ್ತು. ಸಕಲ ಧರ್ಮವಿದ್ದರೂ ಚೈತನ್ಯ ದೇವನಂತೆ ಧರ್ಮವನ್ನು ಮನಸ್ಸಿನಲ್ಲಿ ಪ್ರತ್ಯಕ್ಷ ಮಾಡಿಕೊಂಡಿದ್ದರೆ ಎಷ್ಟು ಜನ ಈಗ ಬದುಕಿರುತ್ತಿದ್ದರು ? ಅನೇಕರು ಜ್ಞಾನಾಗ್ನಿಯ ಮೇಲೆ ಮುಚ್ಚಿರುವ ಗಾಜಿನ ಆವರಣದೊಳಗೆ ಪ್ರವೇಶಿಸಲಾಗದೆ ರಕ್ಷಿತರಾಗಿರುವರು. ಆದರೆ ಸಾಕ್ರೆಟಿಸನೂ, ಗ್ಯಾಲಿಲಿಯೋ ಎಂಬಾತನೂ ಅದರಲ್ಲಿಯೇ ಬಿದ್ದು ಸತ್ತರು. ರೂಪಾಗ್ನಿ, ಧನದ ಅಗ್ನಿ ಮತ್ತು ಮಾನದ ಅಗ್ನಿಯಲ್ಲಿ ನಿತ್ಯವೂ ಸಾವಿರಾರು ಪತಂಗಗಳು ಸಾಯುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಈ ಅಗ್ನಿ ದಾಹವು ಯಾವುದರಲ್ಲಿ ವರ್ಣಿತವಾಗಿದೆಯೊ ಅದು ಕಾವ್ಯವೆನಿಸುವುದು. ಮಹಾಭಾರತದ ಲೇಖಕನು ಮಾನದ ಅಗ್ನಿಯನ್ನು ಹೊತ್ತಿಸಿ ಅದರಲ್ಲಿ ದುರ್ಯೋಧನನೆಂಬ ಪತಂಗವನ್ನು ಸುಟ್ಟನು. ಅದರಿಂದ ಜಗತ್ತಿನಲ್ಲಿ ಅದ್ವಿತೀಯವೆನಿಸಿದ ಕಾವ್ಯಗ್ರಂಥವು ರಚಿತವಾಯಿತು. ಜ್ಞಾನಾಗ್ನಿಜಾತ ದಾಹದ ಗೀತೆಯು "ಪೆರಡೈಜ್ ಲಾಸ್ಟ್ Paradise Lost*". ಧರ್ಮಾಗ್ನಿಯ ಅದ್ವೀತಿಯ ಕವಿಯು ಸೇಂಟ್‌ಪಾಲನಾಗಿರುವನು. "ಆಂಟನಿ ಮತ್ತು ಕ್ಲಿಯೊಪ್ಯಾಟ್ರಾ"ಗಳು ಭೋಗಾಗ್ನಿ ಪತಂಗಗಳಾಗಿದ್ದರು. "ರೋಮಿಯೋ - ಜೂಲಿಯಟ್"ರು ರೂಪಾಗ್ನಿಗಳಾಗಿದ್ದರು. ಈರ್ಷಾಗ್ನಿಯು "ಒಥೆಲೊ" ದಲ್ಲಿಯೂ ಇಂದ್ರಿಯ ಸುಖಾಗ್ನಿಯು "ಗೀತಗೋವಿಂದ" ಮತ್ತು "ವಿದ್ಯಾಸುಂದರ" ಕಾವ್ಯಗಳಲ್ಲಿಯೂ ಜ್ವಲಿಸುತ್ತಿರುವುದು. ಸ್ನೇಹ ವಹ್ನಿಯಲ್ಲಿ ಸೀತಾ ಎಂಬ ಪತಂಗವನ್ನು ದಹಿಸಲು ರಾಮಾಯಣ ಸೃಷ್ಟಿಯಾಯಿತು.

* ಮಿಲ್ಟನ್ ಕವಿಯ ಒಂದು ಕಾವ್ಯ.

ಅಗ್ನಿ ಎಂದರೇನೆಂಬುದು ನನಗೆ ಗೊತ್ತಿಲ್ಲ. ರೂಪ, ತೇಜ, ತಾಪ, ಕ್ರಿಯೆ, ಗತಿ ಮೊದಲಾದ ಪದಗಳಿಗೆ ಅರ್ಥವೇ ಇಲ್ಲ. ಇಲ್ಲಿ ದರ್ಶನ ಶಾಸ್ತ್ರವು ಮೌನದಿಂದ ಸೋಲಿಗೊಪ್ಪಿದೆ. ವಿಜ್ಞಾನವೂ ಸೋತಿದೆ. ಧರ್ಮ ಗ್ರಂಥಗಳು ಸೋತಿವೆ. ದೇವರೆಂದರೇನು? ಧರ್ಮವೆಂದರೇನು? ಜ್ಞಾನವೆಂದರೇನು? ಸ್ನೇಹವೆಂದರೇನು? -ಅವೇನೋ-ಯಾರಿಗೂ ಗೊತ್ತಿಲ್ಲ, ಆದರೂ ಆ ಅಲೌಕಿಕ ಅಜ್ಞಾತ ಪದಾರ್ಥಗಳ ಸುತ್ತಲೂ ನಾವು ಸುತ್ತುತ್ತಿರುವೆವು. ನಾವೂ ಪತಂಗಗಳಲ್ಲದೆ ಮತ್ತೇನಾಗಿದ್ದೇವೆ?

ನೋಡಿರಿ, ಪತಂಗದಳಗಳೆ, ಈ ಬಗೆಯಾಗಿ ಸುತ್ತುವುದರಲ್ಲಿ ಫಲವಿಲ್ಲ! ಸಾಧ್ಯವಾದರೆ ಅಗ್ನಿಯಲ್ಲಿ ಬಿದ್ದು ಸಾಯಬೇಕು. ಇಲ್ಲವಾದರೆ "ಬೊಂಯ್-ಂ-ಂ-ಂ" ಎಂದು ಹಾರಿಹೋಗಿರಿ.

—ಶ್ರೀ ಕಮಲಾಕಾಂತ ಚಕ್ರವರ್ತಿ.

---

# ೫. ನನ್ನ ಮನಸ್ಸು

ನನ್ನ ಮನಸ್ಸು ಎಲ್ಲಿಗೆ ಹೋಯಿತು ? ಅದನ್ನಾರು ಅಪಹರಿಸಿದರು? ಅದು ಯಾವ ಸ್ಥಳದಲ್ಲಿರಬೇಕಾಗಿತ್ತೋ ಆ ಸ್ಥಳದಲ್ಲಿಲ್ಲ! ಅದನ್ನಾರು ಕದ್ದರು? ಸಪ್ತ ಲೋಕಗಳಲ್ಲಿ ಹುಡುಕಿದರೂ ನನ್ನ "ಮನಸ್ಸಿನ ಚೋರನು" ಎಲ್ಲಿಯೂ ಕಾಣಿಸಲಿಲ್ಲ? ಹಾಗಾದರೆ ಅದನ್ನು ಕದ್ದವರಾರು ?

ಒಬ್ಬ ಮಿತ್ರನು ಹೇಳಿದನು—"ನೋಡು, ಪಾಕಶಾಲೆಯಲ್ಲಿ ಹುಡುಕಿ ನೋಡು! ಅಲ್ಲಿ ನಿನ್ನ ಮನಸ್ಸು ಬಿದ್ದುಕೊಂಡಿರಬಹುದು!" ಎಂದು. ಪಾಕಶಾಲೆಯಲ್ಲಿ ನನ್ನ ಮನಸ್ಸು ಬಿದ್ದುಕೊಂಡಿರುತ್ತೆಂದು ನಾನು ಒಪ್ಪಿಕೊಳ್ಳುತ್ತೇನೆ. ಎಲ್ಲಿ ಪಲಾವ್ ಕಾಬಾಬ್ ಕೊಫ್ತಾ (ಭಕ್ಷ್ಯ ವಿಶೇಷ) ಗಳ ಸುಗಂಧವಿರುತ್ತಿತ್ತೊ, ಎಲ್ಲಿ ದೊಡ್ಡ ಪಾತ್ರೆಯಲ್ಲಿ ಸಮಾರೂಢವಾದ "ಅನ್ನಪೂರ್ಣೆ"ಯ ಕತ-ಕತ, ಫುಡ್-ಫುಡ್, ಬುಡ್-ಬುಡ್ ಧ್ವನಿಯು ಕೇಳಿಸುತ್ತಿತ್ತೊ, ಅಲ್ಲಿ ನನ್ನ ಮನಸ್ಸು ಬಿದ್ದುಕೊಂಡಿರುತ್ತಿತ್ತು. ಎಲ್ಲಿ ಈಲಿಶ–ಮತ್ಸ್ಯವು ಸತ್ತೈಲ ಅಭಿಷೇಕವಾದ ಬಳಿಕ, ಹುಳಿ ಎಂಬ ಗಂಗೆಯಲ್ಲಿ ಮಿಂದು, ಮೃಣ್ಮಯ, ಕಾಂಸ್ಯ(ಗಾಜು)ಮಯ ಅಥವಾ ರಜತಮಯ ಸಿಂಹಾಸನದಲ್ಲಿ ವಿರಾಜಿಸುತ್ತಿತ್ತೊ, ಅಲ್ಲಿ ನನ್ನ ಮನಸ್ಸು ಪ್ರಣತವಾಗಿ ಬಿದ್ದುಕೊಂಡಿರುತ್ತಿತ್ತು. ಅದು ಭಕ್ತಿರಸದಲ್ಲಿ ಅಭಿಭೂತವಾಗಿ ಆ ತೀರ್ಥಸ್ನಾನವನ್ನು ಬಿಡಲಪೇಕ್ಷಿಸುತ್ತಿರಲಿಲ್ಲ. ಎಲ್ಲಿ ಕುರಿಯ ಮರಿಯು ಎರಡನೆಯ "ದಧೀಚಿ" ಯಂತೆ ಪರೋಪಕಾರಕ್ಕಾಗಿ ತನ್ನ ಅಸ್ಥಿಯನ್ನು ಅರ್ಪಣ ಮಾಡುವುದೋ, ಎಲ್ಲಿ ಮಾಂಸಯುಕ್ತವಾದ ಆ ಅಸ್ಥಿಯಿಂದ "ಕೂರ್ಮಾ" (ವ್ಯಂಜನ ವಿಶೇಷ) ರೂಪವಾದ ವಜ್ರವು ನಿರ್ಮಿತವಾಗಿ ಕ್ಷುಧಾರೂಪವಾದ ವೃತ್ರಾಸುರನ ವಧೆಗಾಗಿ ಪ್ರಸ್ತುತವಾಗುವುದೊ ಅಲ್ಲಿ ನನ್ನ ಮನಸ್ಸು ಇಂದ್ರ ಪದವಿಯನ್ನು ಹೊಂದುವುದಕ್ಕಾಗಿ ಕಾದಿರುವುದು. ಎಲ್ಲಿ ಪಾಚಕರೂಪವಾದ ವಿಷ್ಣುವು ಪೂರಿ - ಕಚೋರರೂಪವಾದ ಸುದರ್ಶನ ಚಕ್ರವನ್ನು ಬಿಡುವನೊ ಅಲ್ಲಿ ನನ್ನ ಮನಸ್ಸು ವಿಷ್ಣುಭಕ್ತರೂಪವನ್ನು ತಳೆದು ನಿಂತಿರುವುದು.

ಅಥವಾ ಯಾವ ಆಕಾಶದಲ್ಲಿ ಪೂರೀ ರೂಪವಾದ ಚಂದ್ರನುದಯಿಸುವನೊ ಅಲ್ಲಿ ನನ್ನ ಮನಸ್ಸು ರಾಹುವಾಗಿ ಆ ಚಂದ್ರನನ್ನು ಗ್ರಾಸಮಾಡಿಕೊಳ್ಳಲು ಆತುರಗೊಂಡಿರುವುದು. ಜನರು (ರೂ ಪಾ ಯಿ ಮೊದಲಾದುವುಗಳಿಗೆ) ಏನೇ ಹೇಳಲಿ, ನಾನು ಪೂರೀಗೆ ಮಾತ್ರ "ಅಖಂಡ ಮಂಡಲಾಕಾರ" ವೆಂದು ಹೇಳುವೆನು. ಎಲ್ಲಿ ರಸಗುಳ್ಳ ರೂಪವಾದ ಸಾಲಿಗ್ರಾಮವು ವಿರಾಜಿಸುವುದೊ ನನ್ನ ಮನಸ್ಸು ಅಲ್ಲಿ ಪೂಜಕನಾಗಿ ಕುಳಿತಿರುವುದು. ಬಾಬುವಿನ ಮನೆಯ (ಅಡುಗೆಯವಳು) ರಾಮಮಣಿಯು ನೋಡುವುದಕ್ಕೆ ಅತಿ ಕುರೂಪಿ. ಅವಳಿಗೆ ವಯಸ್ಸೊ ಸುಮಾರು ಅರವತ್ತು ವರುಷಗಳಾಗಿದ್ದುವು. ಆದರೆ ಅವಳ ಅಡಿಗೆ ಬಲುರುಚಿ. ಬಡಿಸುವುದರಲ್ಲಿಯೂ ಅವಳ ಕೈ ಬಲು ದೊಡ್ಡದು. ನನ್ನ ಮನಸ್ಸು ಅವಳೊಂದಿಗೆ ಪ್ರಸಕ್ತಿಮಾಡಲು ಇಚ್ಛಿಸಿತ್ತು. ರಾಮ ಮಣಿಯು ಮೊದಲೆ ಗಂಗೆಯ ಮಡಿಲನ್ನು ಸೇರಿದ್ದರಿಂದ ಈ ಘಟನೆ ಯಾಗಲಿಲ್ಲ.

ಮಿತ್ರನ ಹೇಳಿಕೆಯಂತೆ ನಾನು ಪಾಕಶಾಲೆಯಲ್ಲಿ ನನ್ನ ಮನಸ್ಸನ್ನು ಹುಡುಕಿ ನೋಡಿದೆನು. ಅಲ್ಲಿ ಕಾಣಲಿಲ್ಲ. ಪಲಾವ್ - ಕೊಫ್ತಾ (ಭಕ್ಷ್ಯ ವಿಶೇಷ) ಪ್ರಭೃತಿ ಅಧಿಷ್ಠಾತ್ರಿ ದೇವತೆಗಳಲ್ಲಿ ಜಿಜ್ಞಾಸೆಮಾಡಿದೆನು. ಅವರ ಲ್ಲಾರೂ ನನ್ನ ಮನಸ್ಸನ್ನು ಕದ್ದಿರಲಿಲ್ಲ.

ಮಿತ್ರನು ಮತ್ತೆ ಹೇಳಿದನು - "ಒಳ್ಳೆಯದು ಈಗ ಒಂದು ಬಾರಿ ಪ್ರಸನ್ನಗೌಳಗಿತ್ತಿಯ ಬಳಿ ಸಂಧಾನಮಾಡಿ ನೋಡು" ಎಂದು. ಪ್ರಸನ್ನ ಳೊಂದಿಗೆ ನನ್ನ ಪ್ರಣಯ ಸಂಬಂಧವೇನೊ ಇದೆ. ಆದರೆ ಅದು ಕೇವಲ ಗದ್ಯರಸಾತ್ಮಕ (ಶೃಂಗಾರ ರಸದ್ದಲ್ಲ). ಪ್ರಸನ್ನಳು ನೋಡುವುದಕ್ಕೆ ಮುದ್ದೆ ಮುದ್ದೆಯಾಗಿ, ಗುಂಡುಗುಂಡಾಗಿರುವಳು. ವಯಸ್ಸು ನಲವತ್ತರ ಒಳಗೆ. ಸಾಲಾಗಿ ಕೂಡಿಕೊಂಡಿರುವ ಹಲ್ಲುಗಳು. ನಗು ಮೊಗ. ಅವಳು ರಸಮಯ ವಾದ ಹಾಸ್ಯವನ್ನು ದಾರಿಯಲ್ಲಿ ಸುರಿಸುತ್ತ ಹೋಗುತ್ತಿದ್ದಳು. ನಾನು ಅವಳ ಹಿಂದೆ ಅದನ್ನು ಸಂಗ್ರಹಿಸುತ್ತ ಹೋಗುತ್ತಿದ್ದೆನು. ಇದಕ್ಕಾಗಿ ಜನರು ನನ್ನನ್ನು ನಿಂದಿಸುತ್ತಿದ್ದರು. ಪೂಜಾರಿ ವಾಮನಾಚಾರಿಯ ಕಾಟದಿಂದ ತೋಟದಲ್ಲಿ ಹೂಗಳೇ ಅರಳುತ್ತಿರಲಿಲ್ಲ. ನಿಂದಕರ ಕಾಟದಿಂದ ಪ್ರಸನ್ನ ಳೆದುರಿಗೆ ನನ್ನ ಮುಖ ಕಮಲವೂ ಅರಳುತ್ತಿರಲಿಲ್ಲ. – ಇಲ್ಲವಾದರೆ ಗದ್ಯ ರಸ

ಮತ್ತು ಕಾವ್ಯರಸಗಳ ವಿನಿಮಯವು ವಿಲಕ್ಷಣರೀತಿಯಲ್ಲಿ ಆಗುತ್ತಿತ್ತು. ಇದ ರಿಂದ ನನ್ನ ಸ್ವಂತ ವಿಚಾರವಾಗಿ ದುಃಖ ಆಗಲಿ, ಆಗದಿರಲಿ; ಆದರೆ ಪ್ರಸನ್ನ ಳಿಗಾಗಿ ನಾನು ವಿಶೇಷ ದುಃಖಿತನಾಗಿದ್ದೆನು. ಏಕೆಂದರೆ ಪ್ರಸನ್ನಳು ಸತಿ, ಸಾಧ್ವಿ, ಪತಿವ್ರತೆ; ಈ ವಿಷಯವನ್ನು ನಾನು ಬಾಯಿಬಿಟ್ಟು ಹೇಳಲಾಗು ತ್ತಿರಲಿಲ್ಲ. ಹೇಳೋಣವೆಂದು ಒಂದು ದಿನ ಹೇಳಿದರೆ, ಆಚೆ ಬೀದಿಯ ಮೂರ್ಖ ಬಾಲಕನೊಬ್ಬನು ಇದಕ್ಕೆ ವಿಪರೀತಾರ್ಥವನ್ನು ಹೇಳಿಬಿಟ್ಟನು. ಅವನು ಹೀಗೆ ಹೇಳಿದ.–“ಪ್ರಸನ್ನಳು ಇದ್ದಾಳೆ. ಆದ್ದರಿಂದ ಅವಳು “ಸತ್” ಅಥವಾ ಸತಿಯಾದಳು. ಅವಳು ಸಾಧು ಗೌಳಿಗನ ಹೆಂಡತಿ, ಆದ್ದರಿಂದ ಸಾಧ್ವಿ; ಮತ್ತೆ ವಿಧವಾವಸ್ಥೆಯಲ್ಲಿಯೂ ಪತಿಯನ್ನು ಬಿಟ್ಟಿರ ಲಿಲ್ಲವಾದ್ದರಿಂದ ಘೋರತರಳಾದ ಪತಿವ್ರತೆ”!– ಆ ದುಷ್ಟ ಬಾಲಕನಿಗೆ ಈ ಘೃಣಿತ ಅರ್ಥವನ್ನು ಹೇಳಿದುದಕ್ಕಾಗಿ, ಶಿಕ್ಷಿಸಲು ಅವನ ತಲೆಯ ಮೇಲೆ ನಾಲ್ಕು ಮಟಗಿದೆನೆಂದು ಪ್ರತ್ಯೇಕ್ಷವಾಗಿ ಹೇಳಬೇಕಾಗಿಲ್ಲ; ಆದರೆ ಅದ ರಿಂದ ನನ್ನ ಮೇಲಿನ ಕಳಂಕವು ದೂರವಾಗಲಿಲ್ಲ.

ಬರೆಯುವುದಕ್ಕೆ ಕುಳಿತಾಗ ಸ್ಪಷ್ಟವಾಗಿ ಎಲ್ಲವನ್ನೂ ಹೇಳುವುದು ಒಳ್ಳೆಯದು. ನಾನು ಪ್ರಸನ್ನಳಲ್ಲಿ ಅನುರಾಗವಿಟ್ಟಿದ್ದೆನು. ಅದಕ್ಕೆ ಅನೇಕ ಕಾರಣಗಳಿದ್ದವು. ಮೊದಲನೆಯದಾಗಿ ಪ್ರಸನ್ನಳು ನನಗೆ ಹಾಲು ಕೊಡು ತ್ತಿದ್ದಳು. ಅದರಲ್ಲಿ ಒಂದು ಹನಿಯೂ ನೀರಿರುತ್ತಿರಲಿಲ್ಲ; ಬೆಲೆಯೂ ಸುಲಭ. ಎರಡನೆಯದಾಗಿ ಅವಳು ಆಗಾಗ್ಗೆ, ಹಾಲು, ಮಜ್ಜಿಗೆ, ಬೆಣ್ಣೆ ಗಳನ್ನು ನನಗೆ ಬೆಲೆಯಿಲ್ಲದೆ ಕೊಟ್ಟುಬಿಡುವಳು. ಮೂರನೆಯದಾಗಿ ಅವಳು ನನ್ನನ್ನು ಕುರಿತು ಕೇಳಿದಳು - “ಠಾಕೂರ ದಾದಾ ನಿನ್ನಾ ದಫ್ತರ ದಲ್ಲಿರುವ ಕಾಗದವೆಂತಹದು ?” ನಾನು ಕೇಳಿದೆ - “ನೀನು ಅದನ್ನು ಕೇಳು ತ್ತೀಯೊ ? ಓದುತ್ತೇನೆ.” - ಅವಳು “ಕೇಳುವೆನು” ಎಂದಳು. ನಾನು ಬರೆದ ಕೆಲವು ಪ್ರಬಂಧಗಳನ್ನು ಓದಿ ಹೇಳಿದೆನು. ಅವಳೂ ಕೂತು ಕೇಳಿದಳು! ಈ ಗುಣಕ್ಕೆ ಯಾವ ಲೇಖಕನು ವಶೀಭೂತನಾಗುವುದಿಲ್ಲ? ಪ್ರಸನ್ನಳ ಗುಣವನ್ನು ಎಷ್ಟು ಹೊಗಳಲಿ. ಅವಳು ನನ್ನ ಅನುರೋಧದಿಂದ ಅಫೀಮು ಸೇವಿಸುವುದನ್ನೂ ಕಲಿತಳು.

ಈ ಸಕಲಗುಣಗಳಿಗಾಗಿ ನನ್ನ ಮನಸ್ಸು ಆಗಾಗ್ಗೆ ಪ್ರಸನ್ನಳ ಮನೆಯ ಗವಾಕ್ಷದ ಕೆಳಗೇ ಸುತ್ತುತ್ತಿರುವುದೆಂದು ಒಪ್ಪಿಕೊಳ್ಳುತ್ತೇನೆ. ಆದರೆ ಕೇವಲ ಮನೆಯ ಗವಾಕ್ಷದ ಕೆಳಗಲ್ಲ, ಅವಳ ದನಕಟ್ಟುವ ಕೊಟ್ಟಿಗೆಯ ಬಾಗಿಲಬಳಿ ಇಣಿಕಿ ಇಣಿಕಿ ನೋಡುತ್ತಿರುವುದು. ಪ್ರಸನ್ನಳೊಂದಿಗೆ ನನ್ನದು ಈ ಬಗೆಯ ಅನುರಾಗ. ಅವಳಾ ಮಂಗಳಾ ಎಂಬ ಹಸುವಿನಲ್ಲಿಯೂ ನನ್ನ ಅನುರಾಗವು ಅದೇ ಬಗೆಯಾಗಿರುವುದು. ಒಂದು (ಹಸು) ಹಾಲು, ಮಜ್ಜಿಗೆ, ಬೆಣ್ಣೆಯ ನಿಧಿಯಾಗಿರುವುದು. ಎರಡನೆಯವಳು ಅವನ್ನು ದಾನಮಾಡುವವಳು. ಗಂಗೆಯು ವಿಷ್ಣುಪಾದದಲ್ಲಿ ಜನ್ಮಗ್ರಹಣಮಾಡಿದಳು ನಿಜ. ಆದರೆ ಭಗೀರಥನು ಅವಳನ್ನು ಇಲ್ಲಿಗೆ ಕರೆತಂದನು. ಮಂಗಳಾ ನನಗೆ ವಿಷ್ಣುಪಾದದಂತೆ, ಪ್ರಸನ್ನಳು ಭಗೀರಥನಂತೆ. ನಾನು ಇಬ್ಬರನ್ನೂ ಸಮಾನವಾಗಿ ಪ್ರೀತಿಸುವೆನು. ಪ್ರಸನ್ನೆ, ಅವಳ ಹಸು - ಇಬ್ಬರೂ ಸುಂದರಿಯರು ! ಇಬ್ಬರೂ ಸ್ಥೂಲಾಂಗಿಯರು, ಲಾವಣ್ಯಮಯಿಯರು, ಘಟಸ್ತನ್ಯೆಯರು. ಒಬ್ಬಳು ಹಾಸ್ಯರಸವನ್ನುಂಟುಮಾಡುವಳು, ಮತ್ತೊಂದು ಗದ್ಯರಸವನ್ನುಂಟುಮಾಡುವುದು. ನಾನು ಇಬ್ಬರಿಗೂ ವಿನಾಮೂಲ್ಯವಾಗಿ ವಿಕ್ರೀತನಾದವನು.

ಆದರೆ ಈಚೆಗೆ ಸಂಧಾನಮಾಡಿ ನೋಡಿದ್ದರಲ್ಲಿ ನನ್ನ ಮನಸ್ಸು ಪ್ರಸನ್ನಳ ಗವಾಕ್ಷ ತಲದಲ್ಲಾಗಲಿ ಅವಳ ಗೋಶಾಲೆಯಲ್ಲಾಗಲಿ ಇಲ್ಲವೆಂದು ತಿಳಿಯಿತು. ಮತ್ತೆ ನನ್ನ ಮನಸ್ಸು ಎಲ್ಲಿಗೆ ಹೋಯಿತು ?

ಅಳುತ್ತಳುತ್ತ ನಾನು ಹೊರಗೆ ಬೀದಿಗೆ ಬಂದುಬಿಟ್ಟೆನು. ಅಲ್ಲಿ ನೋಡಿದೆನು. ಒಬ್ಬ ಯುವತಿ ಜಲಕಲಶವನ್ನು ಸೊಂಟದಮೇಲಿಟ್ಟುಕೊಂಡು ಹೋಗುತ್ತಿದ್ದಾಳೆ. ಅವಳಾ ಮುಖಮಂಡಲದಲ್ಲಿ ಗಾಳಿಯಿಂದ ಅಲುಗಾಡುತ್ತಿರುವ ಗಭೀರ ಕೃಷ್ಣವರ್ಣದ ಅಲಕರಾಜಿ, ಘೋರಕೃಷ್ಣವರ್ಣದ ಭ್ರೂಯುಗ್ಮ, ಮತ್ತೆ ಗಭೀರ ಕೃಷ್ಣವರ್ಣದ ನಯನ ತಾರೆ ಇವುಗಳನ್ನು ನೋಡಿದರೆ ಪದ್ಮವನದಲ್ಲಿ ಹಲಕೆಲವು ಭ್ರಮರಗಳು ಹಾರುತ್ತ ಸುತ್ತರಿಯುತ್ತಿರುವವು-ಕೂತುಕೊಳ್ಳುತ್ತಿಲ್ಲ - ಹಾರಿ ಹಾರಿ ಸುತ್ತುಹಾಕುವವು - ಎಂದು ಭಾಸವಾಗುತ್ತಿತ್ತು. ಅವಳು ನಡೆಯುವಾಗ ಅವಳ ಅಂಗವು ಅಲುಗಾಡುವ ಬಗೆಯನ್ನು ನೋಡಿದರೆ ಲಾವಣ್ಯ ನದಿಯಲ್ಲಿ ಸಣ್ಣ ಸಣ್ಣ ತರಂಗಗಳು ಏಳುತ್ತಿರುವಂತೆ ಭಾಸವಾಗುತ್ತಿತ್ತು. ಅವಳು ಪ್ರತಿ ಹೆಜ್ಜೆ ಹೆಜ್ಜೆಗೂ ಹೃದಯವನ್ನು ಮೆಟ್ಟಿ

ಕೊಂಡು ಹೋಗುತ್ತಿದ್ದಂತೆ ಕಂಡುಬರುತ್ತಿತ್ತು. ಅವಳನ್ನು ನೋಡಿದ ಬಳಿಕ ನನ್ನ ಮನಸ್ಸನ್ನು ನಿಸ್ಸಂದೇಹವಾಗಿ ಈವಳೇ ಕದ್ದಿರಬೇಕೆಂದು ಬೋಧೆಯಾಯಿತು. ನಾನು ಅವಳನ್ನು ಹಿಂಬಾಲಿಸಿದೆನು. ಅವಳು ಹಿಂತಿರುಗಿ ನೋಡಿ, ಸ್ವಲ್ಪ ಕ್ರುದ್ಧಭಾವದಿಂದ ಕೇಳಿದಳು - "ಏನಯ್ಯಾ ನನ್ನ ಹಿಂದೇಕೆ ಬರುತ್ತೀಯೆ ?"

ನಾನು - "ನೀನು ನನ್ನ ಮನಸ್ಸನ್ನು ಕದ್ದಿರುವೆ !"

ಯುವತಿಯು ಕಟೋಕ್ತಿಗಳನ್ನಾಡಿ, ಬೈದು ಹೇಳಿದಳು – "ನಾನು ಕದಿಯಲಿಲ್ಲ. ನಿನ್ನ ಭಗಿನಿಯು ಬೆಲೆ ಕಟ್ಟುವುದಕ್ಕಾಗಿ ಅದನ್ನು ಕೊಟ್ಟಿದ್ದಳು. ದರ ಕಟ್ಟಿ ನಾನು ಅದನ್ನು ಅವಳಿಗೆ ಹಿಂತಿರುಗಿ ಕೊಟ್ಟೆನು".

ಆ ಕ್ಷಣದಲ್ಲಿಯೆ ನನಗೆ ಶಿಕ್ಷಣಪ್ರಾಪ್ತವಾಗಿ, ಮನಸ್ಸಿನ ಸಂಧಾನದಲ್ಲಿ ಅಧಿಕ ರಸಿಕತೆಯನ್ನು ತೋರುವ ಪ್ರಯತ್ನವನ್ನು ಮಾಡಲಾರದವನಾದೆನು. ಆದರೆ ಈ ಸಂಸಾರದಲ್ಲಿ ನನ್ನ ಮನಸ್ಸು ಎಲ್ಲಿಯೂ ಇಲ್ಲವೆಂದು ತಿಳಿದುಕೊಂಡೆನು. ರಹಸ್ಯವಿಡದೆ ಸತ್ಯನಾಗಿ ಹೇಳುವೆನು. ಇನ್ನು ಯಾವ ವಸ್ತುವಿನಲ್ಲಿಯೂ ನನ್ನ ಮನಸ್ಸಿಲ್ಲ. ಶಾರೀರಿಕ ಸುಖ ಸ್ವಚ್ಛಂದತೆಯಲ್ಲಿ ಮನಸ್ಸಿಲ್ಲ. ನನಗೆ ಪ್ರಿಯವಾಗಿದ್ದ ರಹಸ್ಯಾಲಾಪದಲ್ಲಿಯೂ ಈಗ ನನ್ನ ಮನಸ್ಸಿಲ್ಲ. ನನ್ನಲ್ಲಿ ಕೆಲವು ಹಡುಕಲುಪರುಕಲು ಪುಸ್ತಕಗಳಿದ್ದವು. ಮುಂಚೆ ಅವುಗಳಲ್ಲಿ ನನ್ನ ಮನಸ್ಸಿತ್ತು. ಈಗ ಅವುಗಳಲ್ಲಿಯೂ ಮನಸ್ಸಿಲ್ಲ. ಅರ್ಥ (ಧನ) ಸಂಗ್ರಹದಲ್ಲಿ ನನ್ನ ಮನಸ್ಸು ಎಂದಿಗೂ ಇರಲಿಲ್ಲ - ಈಗಲೂ ಇಲ್ಲ. ಈಗ ಏತರಲ್ಲಿಯೂ ನನ್ನ ಮನಸ್ಸಿಲ್ಲ - ನನ್ನ ಮನಸ್ಸು ಎಲ್ಲಿಗೆ ಹೋಯಿತು ?

ತಿಳಿಯಿತು. ಲಘುಚೇತಸ್ಕರ ಮನಸ್ಸಿಗೆ ಬಂಧನವು ಬೇಕು. ಇಲ್ಲವಾದರೆ ಅವರ ಮನಸ್ಸು ಹಾರಿಹೋಗುವುದು. ನಾನು ನನ್ನ ಮನಸ್ಸನ್ನು ಏತರಲ್ಲಿಯೂ ಎಂದಿಗೂ ಬಂಧಿಸಿರಲಿಲ್ಲ - ಆದ್ದರಿಂದ ಮನಸ್ಸು ಏತರಲ್ಲಿಯೂ ಇಲ್ಲ. ಈ ಜಗತ್ತಿನಲ್ಲಿ ನಾವು ಏನು ಮಾಡುವುದಕ್ಕಾಗಿ ಬಂದಿದ್ದೇವೆ? - ಅದನ್ನು ಸರಿಯಾಗಿ ಹೇಳಲು ನಾನು ಅರಿಯೆ. - ಆದರೆ ಕೇವಲ ಮನಸ್ಸನ್ನು ಬಂಧಿಸಿಡುವುದಕ್ಕಾಗಿ ಬಂದಿದ್ದೇವೆಂದು ಬೋಧೆಯಾಗುವುದು. ನಾನು

ಚಿರಕಾಲ ನನ್ನವನೇ ಆಗಿದ್ದನು - ಪರರಿಗೆ ಸೇರಿದವನಾಗಲಿಲ್ಲ. ಆದ್ದರಿಂದ ಪೃಥ್ವಿಯಲ್ಲಿ ನನಗೆ ಸುಖವಿಲ್ಲ. ಯಾರು ಸ್ವಭಾವತಃ ವಿಶೇಷ ಆತ್ಮ ಪ್ರಿಯ ರಾಗಿರುವರೊ, ಅವರು ಮದುವೆಮಾಡಿಕೊಂಡು, ಸಂಸಾರಿಗಳಾಗಿ, ಸ್ತ್ರೀ ಪುತ್ರರಿಗೆ ಅತ್ಮ ಸಮರ್ಪಣೆ ಮಾಡುವರು. ಆದ್ದರಿಂದ ಅವರು ಸುಖಿಗಳು· ಇಲ್ಲವಾದರೆ ಅವರು ಬೇರೆ ಯಾವ ಬಗೆಯಿಂದಲೂ ಸುಖಿಗಳಾಗುತ್ತಿರಲಿಲ್ಲ. ನಾನು ಹಲವು ಬಗೆಯಿಂದ ಶೋಧನೆಮಾಡಿ ನೋಡಿದೆನು. ಪೃಥ್ವಿಯಲ್ಲಿ ಪರರಿಗಾಗಿ ಆತ್ಮ ವಿಸರ್ಜನೆಮಾಡುವುದರ ವಿನಾ ಸ್ಥಾಯಿಾ ಸುಖಕ್ಕೆ ಬೇರೆ ಮೂಲವೇ ಇಲ್ಲವೆಂದು ತಿಳಿಯಿತು. ಧನ, ಯಶಸ್ಸು, ಇಂದ್ರಿಯಾದಿಗಳಿಂದ ದೊರೆವ ಸುಖವು ದೊಡ್ಡದು, ಆದರೆ ಅವುಗಳು ಚಿರಸ್ಥಾಯಿಗಳಲ್ಲ. ಅವು ಗಳೆಲ್ಲ ಪ್ರಥಮ ಬಾರಿಗೆ ಯಾವ ಪರಿಮಾಣದಲ್ಲಿ ಸುಖದಾಯಕವಾಗಿರು ವವೊ ಎರಡನೆಯ ಬಾರಿಗೆ ಆ ಪರಿಮಾಣದಲ್ಲಿ ಸುಖದಾಯಕವಾಗಿರುವುದಿಲ್ಲ. ಮೂರನೆಯ ಸಲಕ್ಕೆ ಅವು ಇನ್ನೂ ಅಲ್ಪ ಸುಖದಾಯಕವಾಗುವುವು. ಕ್ರಮವಾಗಿ ಅಭ್ಯಾಸಬಲದಿಂದ ಅವುಗಳಲ್ಲಾವ ಸುಖವೂ ಕಂಡುಬರು ವುದಿಲ್ಲ. ಆದರೆ ಅವುಗಳಿಂದ ಎರಡು ಬಗೆಯ ಅಸುಖದ ಕಾರಣಗಳುಂಟಾ ಗುವುವು. ಮೊದಲನೆಯದು ಅಭ್ಯಸ್ತ ವಸ್ತುವಿನ ಇರುವಿಕೆಯಿಂದ ಸುಖ ವಿಲ್ಲದಿರುವುದು; ಅದರ ಅಭಾವದಿಂದಲೂ ಗುರುತರವಾದ ಅಸುಖವಾಗು ವುದು. ಅದೇ ಬಗೆಯಾಗಿ ಸಂತುಷ್ಟಿಗೊಳಿಸಲಾಗದ ಆಕಾಂಕ್ಷೆಯು ಅಭಿ ವೃದ್ಧಿಗೊಳ್ಳುವುದರಿಂದ ವೇದನೆಯಾಗುವುದು. ಆದ್ದರಿಂದ ಪೃಥ್ವಿಯಲ್ಲಿ ಕಾಮ್ಯವಸ್ತುವೆಂದು ಚಿರಪರಿಚಿತವಾಗಿರುವ ವಸ್ತುಗಳೆಲ್ಲ ಅತೃಪ್ತಿಕರವಾ ದವು. ಮತ್ತೆ ದುಃಖಕ್ಕೆ ಮೂಲವಾದವು. ಎಲ್ಲೆಲ್ಲಿಯೂ ಯಶಸ್ಸಿನ ಹಿಂದೆ ನಿಂದೆ, ಇಂದ್ರಿಯ ಸುಖದ ಹಿಂದೆ ರೋಗ, ಧನದ ಹಿಂದೆ ಚಿಂತೆ ಮತ್ತು ಮನಸ್ತಾಪ ಇವುಗಳು ಕಂಡುಬರುವವು. ಸುಂದರವಾದ ಶರೀರವು ಮುದಿಯಾಗಿ, ರೋಗಿಯಾಗುವುದು. ಖ್ಯಾತಿಯೊಂದಿಗೆ ಮಿಥ್ಯಾಕಲಂಕವೂ ಸೇರಿಕೊಂಡಿರುವುದು. ಒಬ್ಬನ ಧನವನ್ನು ಅವನ ಪತ್ನಿಯ ಉಪಪತಿಯು ಭೋಗಿಸುವನು. ಮಾನ ಪ್ರತಿಷ್ಠೆಗಳು ಮೇಘಮಾಲೆಯಂತೆ (ಜೀವನದ) ಶರತ್ಕಾಲದಲ್ಲಿ (ಮುಪ್ಪಿನಲ್ಲಿ) ಮಾಯವಾಗುವವು. ವಿದ್ಯೆಯು ತೃಪ್ತಿದಾ ಯಿನಿಯಲ್ಲ, ಕೇವಲ ಅಂಧಕಾರದಿಂದ ಘೋರತರವಾದ ಅಂಧಕಾರಕೆ

ಕೊಂಡೊಯ್ಯುವುದು. ಆದರಿಂದ ಈ ಸಂಸಾರದ ತತ್ವಜಿಜ್ಞಾಸೆಯು ಎಂದಿಗೂ ನಿವಾರಣೆಯಾಗಲಿಲ್ಲ. (ಸ್ವಂತ ಧನ, ಮಾನ, ಯಶಸ್ಸುಗಳ) ಉದ್ದೇಶ ಸಾಧನೆಯಲ್ಲಿ ವಿದ್ಯೆಯಿಂದ ಎಂದಿಗೂ ಪ್ರಯೋಜನವಾಗಲೇ ಇಲ್ಲ. ಅಂದರೆ "ನಾನು ಧನ ಸಂಪಾದಿಸಿ ಸುಖಿಯಾಗಿದ್ದೇನೆ ಅಥವಾ ಯಶಸ್ಸನ್ನು ಹೊಂದಿ ಸುಖಿಯಾಗಿದ್ದೇನೆ" ಎಂದು ಯಾರಾದರೂ ಹೇಳಿದ್ದನ್ನು ನೀವು ಯಾವಾಗಲಾದರೂ ಕೇಳಿದ್ದೀರಾ? ನಾಲ್ಕು ಸಾಲು ಓದುಬರಹವನ್ನರಿತವರಾದರೂ ಇಂತಹ ವಾಕ್ಯವನ್ನು ಎಲ್ಲಿಯಾದರೂ ನೋಡಿರುವರೆ ಎಂದು ಜ್ಞಾಪಿಸಿಕೊಳ್ಳಲಿ! ಇಂಥಾ ವಾಕ್ಯವನ್ನು ಯಾರೂ ಎಂದಿಗೂ ಕೇಳಿಲ್ಲವೆಂದು ನಾನು ಪ್ರಮಾಣಮಾಡಿ ಹೇಳಬಲ್ಲೆನು. ಧನ ಮಾನಗಳು ಅಲ್ಪವಾದವೆಂಬುದಕ್ಕೆ ಇದಕ್ಕಿಂತಲೂ ಗುರುತರ ಪ್ರಮಾಣಬೇಕೆ? ಆದರೆ ಇಂತಹ ಅಖಂಡನೀಯ ಪ್ರಮಾಣವಿದ್ದರೂ ಮನುಷ್ಯ ಮಾತ್ರರು ಆ ಧನ ಮಾನಗಳ ಸಂಪಾದನೆಗಾಗಿ ಪ್ರಾಣದ ಮೇಲೆ ಆಸೆಯಿಲ್ಲದೆ ಪ್ರಯತ್ನಿಸುವರೆಂಬುದು ಆಶ್ಚರ್ಯಕರವಾದ ವಿಷಯ. ಇದಕ್ಕೆ ಈಗಿನ ವಿದ್ಯೆಯೆ ಕಾರಣ. ಈಗಿನ ವಿದ್ಯಾವಂತರ ಗುಣವೆ ಇದು. ಮಾತೃಸ್ತನ್ಯದುಗ್ಧದೊಂದಿಗೆ ಧನಮಾನಾದಿಗಳ ಸರ್ವ ಸಾರವತ್ತಾದ ವಿಶ್ವಾಸವು ಶಿಶುವಿನ ಹೃದಯವನ್ನು ಪ್ರವೇಶಿಸುವುದು.- ಶಿಶುವು ನೋಡುವುದು–ತಂದೆ, ತಾಯಿ, ಅಣ್ಣ, ಅಕ್ಕ, ಶತ್ರುಮಿತ್ರರು, ಆಳುಕಾಳುಗಳು, ನೆರೆಹೊರೆಯುವರು – ಎಲ್ಲರೂ ಪ್ರಾಣದಾಶೆಯನ್ನು ಬಿಟ್ಟು "ಅಯ್ಯೋ ಧನವೆ! ಅಯ್ಯೋ ಯಶಸ್ಸೆ! ಅಯ್ಯೋ ಮಾನವೆ! ಅಯ್ಯೋ ಸಂಭ್ರಮವೆ!" ಎಂದು ಅಲೆಯುತ್ತಿರುವರು. ಮಾತು ಬರುವುದಕ್ಕೆ ಮುಂಚೆ ಮಗುವು ಕೂಡ ಅದೇ ಮಾರ್ಗವನ್ನು ಅನುಸರಿಸಲು ಕಲಿಯುವದು. ಮಾನವ ಸಮಾಜವು ನಿತ್ಯ ಸುಖಕ್ಕೆ ಪರಸುಖವರ್ಧನಕ್ಕಿಂತಲೂ ಬೇರೆ ಉಪಾಯವಿದೆಯೆ?–ಎಂದು ನೋಡಲಿ. ಇಲ್ಲ, ಖಂಡಿತವಾಗಿ ಇಲ್ಲ. ನಾನೂ ಸತ್ತು ಸುಟ್ಟು ಬೂದಿಯಾಗುವೆನು. ನನ್ನ ಹೆಸರೂ ನಿರ್ನಾಮವಾಗುವುದು. ಆದರೆ- ಒಂದು ದಿನ ಮಾನವನ ಸ್ಥಾಯಿಯಾ ಸುಖಕ್ಕೆ ಬೇರೆ ಉಪಾಯವೆ ಇಲ್ಲವೆಂಬ ನನ್ನ ಮಾತನ್ನು ಮನುಷ್ಯ ಮಾತ್ರರು ಮನಗಾಣುವರು ಎಂದು ನಾನು ಮುಕ್ತಕಂಠನಾಗಿ ಹೇಳುವೆನು. ಇಂದು ಜನರು ಉನ್ಮತ್ತರಾಗಿ ಧನಮಾನ ಭೋಗಾದಿಗಳ ಹಿಂದೆ ಧಾವಿಸುತ್ತಿರುವರು. ಮುಂದೆ ಒಂದು

ದಿನ ಮಾನವ ಜಾತಿಯು ಈಗಿನಂತೆ ಉನ್ಮತ್ತವಾಗಿ ಪರಸುಖಾಭಿವೃದ್ಧಿಗಾಗಿ ಧಾವಿಸುವುದು. ನಾನು ಸತ್ತು ಬೂದಿಯಾಗುವೆನು. ಆದರೆ ನನ್ನೀ ಆಸೆಯು ಒಂದು ದಿನ ಫಲಿಸುವುದು, ಫಲಿಸಲೇಬೇಕು. ಆದರೆ ಎಷ್ಟು ದಿನಗಳಲ್ಲಿ? ಅಯ್ಯೊ, ಇಷ್ಟು ದಿನಗಳಲ್ಲಿ ಎಂದು ಯಾರು ಹೇಳಬಲ್ಲರು!

ಬಹು ಹಿಂದಿನಕಾಲದ ಮಾತು. ಎರಡೂವರೆ ಸಾವಿರ ವರುಷಗಳ ಹಿಂದೆ ಶಾಕ್ಯಸಿಂಹನು ಇದೇ ಮಾತನ್ನು ಎಷ್ಟೋ ಬಗೆಯಿಂದ ಹೇಳಿ ಹೋಗಿರುವನು. ಅವನ ಬಳಿಕ ಸಾವಿರಾರು ಜನ ಲೋಕ ಶಿಕ್ಷಕರು ಸಾವಿರಾರು ಬಗೆಯಿಂದ ಇದನ್ನೆ ಬೋಧಿಸಿರುವರು. ಆದರೆ ಯಾರೂ ಅದನ್ನು ಕಲಿಯಲಿಲ್ಲ - ಯಾರೂ ಆತ್ಮೋದರಗಳ ಇಂದ್ರಜಾಲದಿಂದ ತಪ್ಪಿಸಿಕೊಳ್ಳಲಾಗಿಲ್ಲ. ಈ ದೇಶದಲ್ಲಿ ಇಂಗ್ಲಿಷರ ಶಾಸನಕ್ಕಾರಂಭವಾದಂದಿನಿಂದ ಈ ವಿಷಯದಲ್ಲಿ ವಿಶೇಷ ಗಲಭೆ ಎದ್ದಿರುವುದು. ಇಂಗ್ಲಿಷರ ಶಾಸನ, ಇಂಗ್ಲಿಷರ ಸಭ್ಯತೆ, ಇಂಗ್ಲಿಷರ ಶಿಕ್ಷಣದೊಂದಿಗೆ "ಮೆಟೇರಿಯಲ್ ಪ್ರಾಸ್ಪೆರಿಟಿ"(ಬಾಹ್ಯಸಂಪತ್ತಿನ) ಮೇಲಣ ಅನುರಾಗವು ದೇಶದಲ್ಲಿ ದಿನ ದಿನಕ್ಕೂ ಹೆಚ್ಚುತ್ತಿರುವುದು. ಇಂಗ್ಲಿಷ ಜಾತಿಯು ಬಾಹ್ಯ ಸಂಪದವನ್ನು ವಿಶೇಷವಾಗಿ ಪ್ರೀತಿಸುವುದು - ಇಂಗ್ಲಿಷ ಸಭ್ಯತೆಗೆ ಇದೇ ಪ್ರಧಾನವಾದ ಚಿಹ್ನೆ. ಅವರು ಬಂದು ಈ ದೇಶದ ಬಾಹ್ಯ ಸಂಪದ ಸಾಧನೆಯಲ್ಲಿಯೆ ನಿಯುಕ್ತರಾಗಿರುವರು. (ರಾಜನಂತೆ ಪ್ರಜೆಗಳು ಎಂಬಂತೆ) ನಾವು ಕೂಡ ಬಾಹ್ಯಸಂಪತ್ತಿನೆದುರಿಗೆ ಬೇರೆ ಎಲ್ಲವನ್ನೂ ಮರೆತು ಬಿಟ್ಟಿರುವೆವು. ಭಾರತವರ್ಷದ ಅನ್ಯಾನ್ಯ ದೇವಮೂರ್ತಿಗಳೆಲ್ಲವೂ ಮಂದಿರಚ್ಯುತವಾಗಿರುವವು. ಸಿಂಧುವಿನಿಂದ ಬ್ರಹ್ಮಪುತ್ರದವರೆಗೆ ಕೇವಲ ಬಾಹ್ಯ ಸಂಪದ ಪೂಜೆಯು ಆರಂಭವಾಗಿರುವುದು. ನೋಡಿ! ವ್ಯಾಪಾರವು ಹೇಗೆ ಬೆಳೆಯುತ್ತಿದೆ ನೋಡಿ! ಹಿಂದೂ ಭೂಮಿಯು ಹೇಗೆ ರೈಲುಗಳಿಂದ ಜಾಲ ಬದ್ಧವಾಗಿದೆಯೆಂದು ನೋಡಿ! - ನೋಡಿದಿರಾ! ಟೆಲಿಗ್ರಾಫು ಎಂಥಾ ವಸ್ತು ಎಂಬುದನ್ನು! ಆದರೆ ಕಮಲಾಕಾಂತನ ಪ್ರಶ್ನೆ ಇದೊಂದೇ - ನಿಮ್ಮಾ ರೈಲು ಟೆಲಿಗ್ರಾಫುಗಳಿಂದ ನನ್ನ ಮನಸ್ಸಿನ ಸುಖವು ಎಷ್ಟರಮಟ್ಟಿಗೆ ಹೆಚ್ಚುವುದು? ನಾನು ಕಳೆದುಕೊಂಡಿರುವ ಮನಸ್ಸನ್ನು ಈ ವಸ್ತುಗಳು ಹುಡುಕಿ ಕೊಡಬಲ್ಲವೇನು? ಇವುಗಳಿಂದ ಯಾರ ಹೃದಯ ಜ್ವಾಲೆಯು ನಿವಾರಣೆಯಾಗಬಲ್ಲುದು? ಧನ ತೃಷೆಯಿಂದ ಸಾಯುವ ಕೃಪಣನ ದಾಹವನ್ನು ಅವು

ನಿವಾರಿಸಬಲ್ಲವೇನು? ಅಪಮಾನಿತರ ಅವಮಾನವನ್ನು ಅವು ಹಿಂತಿರುಗಿಸ ಬಲ್ಲವೇನು? ರೂಪೋನ್ಮತ್ತರ ತೊಡೆಯ ಮೇಲೆ ರೂಪಸಿಯನ್ನು ಅವು ತಂದು ಕುಳ್ಳಿರಿಸಬಲ್ಲವೇನು? - ಇಲ್ಲವಾದರೆ ನಿಮ್ಮಾ ರೈಲು ಟೆಲಿಗ್ರ್ರಾಫುಗಳ ಜಾಲಗಳನ್ನು ಕಿತ್ತಿ ಸಮುದ್ರ ಜಲದಲ್ಲಿ ಹಾಕಿಬಿಡಿ - ಕಮಲಾಕಾಂತ ಶರ್ಮನು ಅವುಗಳನ್ನು ಕುರಿತು ಚಿಂತಿಸುವುದೇ ಇಲ್ಲ.

ಎಂಥಾ ಇಂಗ್ಲೀಷು ಭಾಷೆ, ಎಂಥಾ ಕನ್ನಡ ಭಾಷೆ! ಮಾಸಪತ್ರಿಕೆ, ವರ್ತಮಾನಪತ್ರಿಕೆ, ಸ್ಪೀಚ್, ಡಿಬೇಟ್, ಲೆಕ್ಚರ್ - ಇವುಗಳಲ್ಲಿ ಯಾವು ದನ್ನು ಓದಿದರೂ ಅಥವಾ ಕೇಳಿದರೂ ಈ ಬಾಹ್ಯಸಂಪದ ವಿಚಾರವನ್ನು ಬಿಟ್ಟು ಬೇರೆ ಯಾವ ವಿಷಯವೂ ಗೋಚರವಾಗುವುದಿಲ್ಲ - ಹರ, ಹರ, ಭಂ ಭಮ್! ಭಾಹ್ಯಸಂಪತ್ತಿನ ಪೂಜೆಯನ್ನು ಮಾಡಿರಿ! ಹರ ಹರ, ಭಂ ಭಮ್! ರೂಪಾಯಿಗಳ ರಾಶಿಯ ಮೇಲೆ ರಾಶಿಯನ್ನೇರಿಸಿರಿ! ರೂಪಾಯಿಯೆ ಭಕ್ತಿ! ರೂಪಾಯಿಯೆ ಮುಕ್ತಿ, ರೂಪಾಯಿಯೆ ಉನ್ನತಿ, ರೂಪಾಯಿಯೆ ಗತಿ! ರೂಪಾಯಿಯೆ ಧರ್ಮ, ಅದೇ ಅರ್ಥ, ಅದೇ ಕಾಮ, ಅದೇ ಮೋಕ್ಷ! ಆ ದಾರಿಯಲ್ಲಿ ಹೋಗಬೇಡಿ, ದೇಶದ ಧನವು ಕಡಿಮೆಯಾಗುವುದು. ಈ ದಾರಿಯಲ್ಲಿ ನಡೆಯಿರಿ, ದೇಶದಲ್ಲಿ ಧನವು ಅಭಿವೃದ್ಧಿಯಾಗುವುದು! ಭಂ ಭಮ್, ಹರ ಹರ! ರೂಪಾಯಿಗಳನ್ನು ಹೆಚ್ಚಿಸಿ! ರೈಲು ಟೆಲಿಗ್ರ್ರಾಫು ಗಳಿಂದ ರೂಪಾಯಿ ಹೆಚ್ಚುವುದು. ಅವುಗಳ ಮಂದಿರದಲ್ಲಿ ಶಿರಸ್ಸನ್ನು ಬಾಗಿ ನಮಿಸಿರಿ. ರೂಪಾಯಿಗಳನ್ನು ಅಭಿವೃದ್ಧಿಗೊಳಿಸಲು, ಶೂನ್ಯಾಕಾಶದಿಂದ ರೂಪಾಯಿಗಳ ಮಳೆ ಸುರಿವಂತೆ ಪ್ರಯತ್ನಿಸಿರಿ. ರೂಪಾಯಿಗಳ ಝುಣ ಝುಣ ಶಬ್ದವು ಭಾರತವರ್ಷವನ್ನೆಲ್ಲ ಆವರಿಸಲಿ! - ಮನಸ್ಸು! - ಅದೆಂತಹ ವಸ್ತು? ರೂಪಾಯಿಯನ್ನು ಬಿಟ್ಟು ಮನಸ್ಸೆಲ್ಲಿದೆ? ರೂಪಾಯಿಯನ್ನು ಬಿಟ್ಟು ನಮ್ಮ ಮನಸ್ಸಿಲ್ಲ. ಟಂಕಸಾಲೆಯಲ್ಲಿ ನಮ್ಮ ಮನಸ್ಸು ಸಿಡಿದು ಬಿಡುವುದು. ರೂಪಾಯಿಯೆ ಬಾಹ್ಯಸಂಪತ್ತು! ಹರ ಹರ, ಭಂ ಭಮ್! ಬಾಹ್ಯಸಂಪತ್ತಿನ ಪೂಜೆಮಾಡಿರಿ. ಈ ಪೂಜೆಗೆ ತಾಮ್ರಶ್ಮಶ್ರುಧಾರಿಗಳಾದ ಇಂಗ್ಲಿಷರೆಂಬ ಋಷಿಗಳೆ ಪುರೋಹಿತರು. "ಆಡಮ್ ಸ್ಮಿತ್" *ಪುರಾಣ ಮತ್ತು *"ಮಿಲ್"ತಂತ್ರಗಳಲ್ಲಿ ಈ ಪೂಜೆಯ ಮಂತ್ರಗಳನ್ನು ಪಠಿಸಬಹುದು,

* ಇವರಿಬ್ಬರೂ ವಿಲಾಯತಿಯ ವಿಖ್ಯಾತ ಅರ್ಥಶಾಸ್ತ್ರಜ್ಞ ಮತ್ತು ರಾಜನೀತಿಜ್ಞರು.

ಈ ಪೂಜೆಯ ಉತ್ಸವದಲ್ಲಿ ಇಂಗ್ಲಿಷ ಸಂವಾದ ಪತ್ರಗಳು ಡೋಲು - ನಗಾರಿಗಳನ್ನು ಬಾರಿಸುವುವು. ಶಿಕ್ಷಣ ಮತ್ತು ಉತ್ಸಾಹಗಳನ್ನು ಈ ಪೂಜೆಗೆ ನಿವೇದಿಸಿದ ಬಳಿಕ ಹೃದಯುವನ್ನು ಬಲಿಯಾಗರ್ಪಿಸಬೇಕು. ಈ ಪೂಜೆಯ ಫಲ ಇಹಲೋಕ - ಪರಲೋಕಗಳಲ್ಲಿ ಅನಂತ ನರಕ. ಆದ್ದರಿಂದ ಬನ್ನಿರಿ, ಎಲ್ಲರೂ ಸೇರಿ ಬಾಹ್ಯಸಂಪತ್ತಿನ ಪೂಜೆಯುನ್ನು ಮಾಡಿರಿ. ಬನ್ನಿರಿ, ಯಶೋಗಂಗೆಯಲ್ಲಿ ತೊಳೆದು, ವಂಚನೆಯೆಂಬ ಬಿಲ್ವಪತ್ರಕ್ಕೆ ಮೃದುನುಡಿಗಳೆಂಬ ಚಂದನವನ್ನು ಪೂಸಿ ಈ ಮಹಾ ದೇವನನ್ನು ಪೂಜಿಸಿರಿ. ಹೇಳಿರಿ "ಹರ ಹರ, ಭಂ ಭಮ್ ! ನಾವು ಬಾಹ್ಯಸಂಪತ್ತನ್ನು ಪೂಜಿಸುತ್ತಿದ್ದೇವೆ. ಬಾರಿಸಿರಿ, ನಗಾರಿ ನೌಬತ್ತುಗಳನ್ನು - ಢಂ ಢಂ ಢಂಢಂಢಂ ! ತಾಳದ ತಟ್ಟೆಗಳನ್ನು ಬಾರಿಸಿ - ಝುನ್‌ಝುನ್ ಝುನಾಝುನ್ ! ಬನ್ನಿರಿ, ಪುರೋಹಿತ ಮಹಾಶಯರೆ ! ಮಂತ್ರಗಳನ್ನು ಹೇಳಿರಿ ! ನಮ್ಮ ಈ ಬಹುಕಾಲದ ಪುರಾತನ ಘೃತವನ್ನು ತೆಗೆದುಕೊಂಡು ಸ್ವಧಾ, ಸ್ವಾಹಾಗಳನ್ನು ಉಚ್ಚರಿಸಿ ಅಗ್ನಿಯಲ್ಲಿ ಆಹುತಿಯನ್ನೀಯಿರಿ ! ನಮ್ಮ "ಯುಟಿಲಿಟೇರಿಯನ್" ಕಮ್ಮಾರನೆಲ್ಲಿ ? ಆಡಿನ ಕತ್ತನ್ನು ಗೂಟಕ್ಕೆ ನೇತುಹಾಕಿದೆ. ಒಂದುಬಾರಿ ಪಂಚಾನಂದಗಳ* ಹೆಸರನ್ನು ಹೇಳಿ, ಒಂದೇ ಏಟಿಗೆ ತಳ್ಳಿಬಿಡಿರಿ. ಹರ ಹರ, ಭಂಭಮ್ ! ಕಮಲಾಕಾಂತನು ನಿಂತಿರುವನು, ಅವನಿಗೆ ಬಲಿಯಾದ ತಲೆಯುನ್ನು ಕೊಟ್ಟುಬಿಡಿ ! ನೀವು ಸ್ವಚ್ಛಂದವಾಗಿ ಪೂಜೆಮಾಡಿರಿ.

ಪೂಜೆಮಾಡಿರಿ, ಹಾನಿ ಏನೂ ಇಲ್ಲ. ಆದರೆ ನನಗೆ ಒಂದೆರಡು ಸಂಗತಿಗಳನ್ನು ತಿಳಿಯ ಹೇಳಿರಿ. ನಿಮ್ಮ ಬಾಹ್ಯಸಂಪತ್ತಿನಿಂದ ಎಷ್ಟು ಜನರಿಗೆ ಶುಭಾಶುಭಗಳಾಗಿವೆ ? ಇದರಿಂದ ಎಷ್ಟು ಜನ ಅಶಿಷ್ಟರು ಶಿಷ್ಟರಾಗಿರುವರು ! ಎಷ್ಟುಜನ ಅಧಾರ್ಮಿಕರು ಧಾರ್ಮಿಕರಾಗಿರುವರು ? ಎಷ್ಟು ಜನ ಅಪವಿತ್ರರು ಪವಿತ್ರರಾಗಿರುವರು ? ಒಬ್ಬರೂ ಇಲ್ಲವೆ ? ಇಲ್ಲವಾದರೆ ನಿಮ್ಮೀ ಬಾಹ್ಯಸಂಪತ್ತಿನ ತಿಲಾಂಶವೂ ನನಗೆ ಬೇಡ. ಇದನ್ನು ಭಾರತ ವರ್ಷದಿಂದ ಓಡಿಸಿಬಿಡಿ ಎಂದು ನಾನು ಆಜ್ಞೆಯನ್ನೀಯುವೆನು.

---

* ಪಂಚಾನನನ ಹೆಸರು ಪ್ರಸಿದ್ಧಿಯಾಗಿಲ್ಲ - ಪಂಚಾನಂದವೇ ಪ್ರಸಿದ್ಧಿ. ಮದ್ಯ, ಮಾಂಸ, ಸ್ನೇಹಿತರು, ವಸ್ತ್ರ, ವೇಶ್ಯೆ - ಈ ಐದು ಆನಂದಗಳಿಂದ ಪಂಚಾನಂದಗಳ ಸಂಘಟನೆಯಾಗಿರುವುದು.

ನೀವು ಹೇಳುವುದನ್ನು ನಾನು ಬಲ್ಲೆನು. ಉದರವೆಂಬುದು ದೊಡ್ಡ ಬಿಲ. ಇದನ್ನು ನಿತ್ಯವೂ ತುಂಬಬೇಕು. ಇಲ್ಲವಾದರೆ ಯಾವ ಕೆಲಸವೂ ಸಾಗದು. ಈ ಗುಂಡಿಯು ಯಾವುದರಿಂದ ಚೆನ್ನಾಗಿ ತುಂಬುವುದೊ ಆ ಕೆಲಸವನ್ನು ನಾವು ಮಾಡುತ್ತಿರುವೆವೆಂದು ನೀವು ಹೇಳುವಿರಿ. ಅದಕ್ಕೆ ನಾನು ಹೇಳುವುದೇನೆಂದರೆ - ಅದು ಬಹು ಒಳ್ಳೆಯ ಕೆಲಸ. ಆದರೆ ಅದಕ್ಕಾಗಿ ಇಷ್ಟು ಗಡಿಬಿಡಿ ಅವಶ್ಯವಿಲ್ಲ. ಕೇವಲ ಈ ಗುಡಾಣವನ್ನು ತುಂಬುವುದರಲ್ಲಿಯೆ ನೀವು ಮಗ್ನರಾಗಿ ಬೇರೆ ವಿಷಯಗಳನ್ನೆಲ್ಲ ಮರೆತಿರುವಿರಿ. ಈ ಗುಡಾಣದಲ್ಲಿ ಒಂದು ಮೂಲೆ ಬರಿದಾಗಿದ್ದರೂ ಚಿಂತೆಯಿಲ್ಲ, ಅದು ಒಳ್ಳೆಯದು. ನೀವು ಬೇರೆ ಬೇರೆ ವಿಷಯಗಳ ಕಡೆಗೂ ಗಮನವಿಡುವುದು ಉಚಿತ. ಗುಡಾಣ ತುಂಬುವುದು ಮತ್ತು ಮನಸ್ಸಿನ ಸುಖ - ಇವುಗಳೆರಡೂ ಬೇರೆ ಬೇರೆ ಸ್ವತಂತ್ರ ವಿಷಯಗಳು. ಮನಸ್ಸಿನ ಸುಖವನ್ನು ಹೆಚ್ಚಿಸುವುದಕ್ಕೆ ಬೇರೆ ಉಪಾಯವೇ ಇಲ್ಲವೆ? ನೀವು ಇಷ್ಟು ಕಲೆಗಳನ್ನು ರಚಿಸಿರುವಿರಿ. ಮನುಷ್ಯರಲ್ಲಿ ಪರಸ್ಪರ ಪ್ರೇಮವೃದ್ಧಿಗೊಳಿಸಲು ಒಂದೂ ಕಲೆಯಿಲ್ಲವೆ? ಸ್ವಲ್ಪ ಬುದ್ಧಿಯನ್ನುಪಯೋಗಿಸಿ ನೋಡಿರಿ. ಇಲ್ಲವಾದರೆ ಎಲ್ಲವೂ ವಿಕಲೆ ಆಗುವುದು.

ನಾನೂ ಚಿರಕಾಲದಿಂದ ಗುಡಾಣವನ್ನು ತುಂಬುತ್ತಿರುವೆನು - ಪರರ ಚಿಂತೆಯನ್ನೇ ಮಾಡಿದವನಲ್ಲ ನಾನು. ಆದುದರಿಂದ ಈಗ ಎಲ್ಲವನ್ನೂ ಕಳೆದುಕೊಂಡು ಕುಳಿತಿರುವೆನು. - ಸಂಸಾರದಲ್ಲಿ ನನಗೆ ಸುಖವಿಲ್ಲ. ಇನ್ನು ಪೃಥ್ವಿಯಲ್ಲಿ ನಾನಿದ್ದೂ ಪ್ರಯೋಜನವಿಲ್ಲ. ಪರರ ಭಾರವನ್ನು ನಾನೇಕೆ ಹೊರಬೇಕೆಂದು ಭಾವಿಸಿ ನಾನು ಸಂಸಾರಿಯಾಗಲಿಲ್ಲ. ಅದರ ಫಲವಾಗಿ ಈಗ ನನ್ನ ಮನಸ್ಸು ಏತರಲ್ಲಿಯೂ ಇಲ್ಲವಾಗಿದೆ. ನಾನು ಈಗ ಸುಖಿಯಾಗಿಲ್ಲ! ಹೇಗೆ ಸುಖಿಯಾಗಿರಬೇಕು? ಪರರಿಗಾಗಿ ನಾನು ಏನನ್ನೂ ಕೊಡದಿರುವಾಗ, ಸುಖದಲ್ಲಿ ನನಗೆ ಅಧಿಕಾರವೆಂತಿರಬೇಕು?

ಸುಖದಲ್ಲಿ ನನಗೆ ಅಧಿಕಾರವಿಲ್ಲ. ಹಾಗೆಂದರೆ ನೀವು ವಿವಾಹಿತರಾಗಿರುವುದರಿಂದ ನೀವು ಸುಖವಾಗಿರುವಿರೆಂದು ಭಾವಿಸಬೇಡಿ. ಪಾರಿವಾರಿಕ ಸ್ನೇಹ ಗುಣದೊಂದಿಗೆ ನಿಮ್ಮ ಆತ್ಮಪ್ರಿಯತೆಯು ಲೀನವಾಗದಿದ್ದರೆ, ವಿವಾಹ ಸಂಸ್ಕಾರದಿಂದ ನಿಮ್ಮ ಮನಸ್ಸು ಉದಾರವಾಗದಿದ್ದರೆ, ನಿಮ್ಮ ಪಾರಿ

ವಾರಿಕ ಪ್ರೇಮದಿಂದ ನೀವು ಸಮಗ್ರ ಮನುಷ್ಯಜಾತಿಯನ್ನು ಪ್ರೀತಿಸಲು ಕಲಿಯದಿದ್ದರೆ, ಆಗ ನೀವು ವಿವಾಹಿತರಾದುದು ವ್ಯರ್ಥ. ಕೇವಲ ಅದರಿಂದ ಭೂತದ ಭಾರವನ್ನು ಹೊತ್ತಂತಾಯಿತು. ಇಂದ್ರಿಯ ತೃಪ್ತಿ ಅಥವಾ ಪುತ್ರ ಮುಖ ನಿರೀಕ್ಷಣವೇ ವಿವಾಹದ ಉದ್ದೇಶವಲ್ಲ. ವಿವಾಹ ಬಂಧನದಿಂದ ಮನುಷ್ಯ ಚರಿತ್ರೆಯ ಉತ್ಕರ್ಷವಾಗದಿದ್ದರೆ, ವಿವಾಹದಿಂದ ಪ್ರಯೋಜನ ವಿಲ್ಲ. ಇಂದ್ರಿಯಾದಿಗಳು ಅಭ್ಯಾಸಕ್ಕೆ ಅಧೀನವಾದವು. ಅಭ್ಯಾಸದಿಂದಲೆ ಇಂದ್ರಿಯಗಳನ್ನು ತಕ್ಷಣ ಶಾಂತಗೊಳಿಸಬಹುದು. ಇಂದ್ರಿಯಗಳಿಗೆ ವಶ ವಾಗಿ ಮನುಷ್ಯ ಜಾತಿಯು ಪೃಥ್ವಿಯಿಂದ ಲುಪ್ತವಾಗಿ ಹೋದರೂ ಚಿಂತೆ ಯಿಲ್ಲ. ಆದರೆ ಯಾವ ವಿವಾಹದಿಂದ ಪ್ರೀತಿ ಶಿಕ್ಷಣವು ದೊರೆಯದೊ ಆ ವಿವಾಹದಿಂದ ಪ್ರಯೋಜನವಿಲ್ಲ.

ಈಗ ಕಮಲಾಕಾಂತನು ಕೈಜೋಡಿಸಿಕೊಂಡು ಎಲ್ಲರೆದುರಿಗೂ ಪ್ರಾರ್ಥಿಸುತ್ತಿರುವನು. ನಿಮ್ಮಲ್ಲಿ ಯಾರಾದರೂ ಕಮಲಾಕಾಂತನಿಗೆ ಒಂದು ವಿವಾಹವನ್ನು ಮಾಡಬಲ್ಲಿರಾ ?

— ಶ್ರೀ ಕಮಲಾಕಾಂತ ಚಕ್ರವರ್ತಿ.

---

## ೬. ಚಂದ್ರ ಲೋಕದಲ್ಲಿ - (ಬೆಳ್ದಿಂಗಳಲ್ಲಿ)

**ಈ** ಗರಿಕೆ ಚಿಗುರುಗಳಿಂದ ಶೋಭಿಸುತ್ತಿರುವ ಹಸುರು ಭೂಮಿಯಲ್ಲಿ ತುಂಬಿ ಹರಿಯುತ್ತಿರುವ ಈ ಗಂಗಾತೀರದಲ್ಲಿ, ಸ್ಫುಟವಾದ ಈ ಬೆಳ್ದಿಂಗಳಲ್ಲಿ ಇಂದು ನನ್ನ ದಫ್ತರದ ಶ್ರೀ ವೃದ್ಧಿಯನ್ನು, ಅದರ ಕಳೇಬರವನ್ನು ವೃದ್ಧಿ ಗೊಳಿಸುವೆನು. ಈ ಬಗೆಯ ಬೆಳ್ದಿಂಗಳಲ್ಲಿಯೇ ಟ್ರೈಲಸ್ ಶೆರ್ಮನು ಟ್ರಾಯ್‌ನ ಎತ್ತರವಾದ ಪೌಳಿ ಗೋಡೆಯನ್ನು ಹತ್ತಿ ಕ್ರಿಸೀಡಳನ್ನು ಸ್ಮರಿಸುತ್ತ, ದೀರ್ಘಶ್ವಾಸವನ್ನು ಬಿಡುತ್ತಲಿರಲಿಲ್ಲವೆ? ಈ ಬಗೆಯ ಬೆಳ್ದಿಂಗಳಲ್ಲಿಯೆ ಸುಂದರಿಯಾದ ಥಿಸವಿಯು ಇದೇ ಬಗೆಯ ಮಂಜು ಹನಿಗಳಿಂದ ಕೂಡಿದ ಕೋಮಲವಾದ ತೃಣಾಂಕುರಗಳನ್ನು ತುಳಿದು ಪಿರಾಮುಸನ ಸಂಕೇತ ಸ್ಥಾನಾಭಿಮುಖಳಾಗಿ ಅಭಿಸಾರಿಣಿಯಾಗಿರಲಿಲ್ಲವೆ? ಅಭಿಸಾರಿಣಿ ಪದದಲ್ಲಿ ಅಭಿ ಎಂಬುದು ಒಂದು ಉಪಸರ್ಗ, ಸೃ ಎಂಬುದು ಒಂದು ಧಾತು, ಅದು ಸ್ತ್ರೀತ್ವವಾಚಕವಾಗಲು "ಇಣಿ" ಎಂಬುದನ್ನು ಸೇರಿಸಿದೆ. ಈ ಜೀವನದಲ್ಲಿ ಕ ಮ ಲಾ ಕಾ ಂ ತ ಶ ರ್ಮ ನು ಎಷ್ಟೋ ಉಪಸರ್ಗಗಳನ್ನು ನೋಡಿದ್ದಾನೆ. ಎಷ್ಟೋ ಜನರು "ಧಾತು" (ರೂಪ) ಗಳನ್ನೆ ಬಿಡುವುದನ್ನು ನೋಡಿದ್ದಾನೆ. ಅನೇಕ "ಇಣಿ"ಗಳು ಬಂದು ಹೋಗುವುದನ್ನು ನೋಡಿದ್ದಾನೆ. ಆದರೆ ಉಪ ಸರ್ಗ ಸಹಿತವಾದ ಧಾತುವಿಶಿಷ್ಟವಾಗಿರುವ ಇಣಿಯನ್ನು ಎಂದೂ ನೋಡಿಲ್ಲ. ಕಮಲಾಕಾಂತವೆಂಬ ಉಪಸರ್ಗವು ಯಾವ "ಇಣಿ"ಯ ಧಾತುವಿನೊಂದಿಗೂ ಸೇರದೆ ಹೋಯಿತು. ಕಮಲಾಭಿಸಾರಿಣಿ ಎಂಬ ರೂಪದ ನಾಯಿಕೆಯು ಎಂದೂ ಹುಟ್ಟಲಿಲ್ಲ. ಹಾಲು ಮೊಸರು ಮಾರುವುದಕ್ಕೆ ಬರುವವರಿಗೆ ಶ್ರೀಮದ್ಭಾಗವತದಲ್ಲಿ "ಪಸಾರಿಣಿ" ಎಂದು ಹೇಳಿದೆ. ಅಭಿಸಾರಿಣಿ ಎಂಬ ರೂಪವು ಎಲ್ಲಿ ಹೇಳಿರುವುದೊ ಸ್ಮರಣೆಯಲ್ಲಿಲ್ಲ. ಆದರೆ ಅನೇಕ ಅಭಿಸಾರಿಣಿಗಳನ್ನು ನೋಡಿರುವೆನೆಂದು ನಾನು ಹೇಳಬಲ್ಲೆ.

ಚಂದ್ರನೆ! ನೀನು ನಗುತ್ತಿರುವೆಯೊ? ನೀನು ನಗುವನ್ನು ತಡೆಯಲಾರದೆ ಉಬ್ಬಿಹೋಗುತ್ತಿರುವೆಯೇನು? ನಿನ್ನ ಇಪ್ಪತ್ತೇಳು "ಇಣಿ" (ಪ್ರಿಯೆ)ಯ ರೊಂದಿಗೆ (ನಕ್ಷತ್ರಗಳೊಂದಿಗೆ) ಕಣ್ಣು ಮಿಟಗಿಸುತ್ತ ನನ್ನನ್ನು

ನೋಡಿ ಹಾಸ್ಯಮಾಡುವೆಯೊ ? ದಕ್ಷರಾಜನು ಈ ಕೆಲಸವನ್ನು ಮಾಡಿದ್ದು. ಒಂದೇ ಬಾರಿಗೆ ಇಪ್ಪತ್ತೇಳು ಕನ್ಯೆಯರನ್ನು ಒಬ್ಬ ಚಂದ್ರನಿಗೆ ಕೊಟ್ಟು ಬಿಟ್ಟನು ! ಆದರೆ ಕಮಲಾಕಾಂತಶರ್ಮನು ಇನ್ನೂ ವಿವಾಹಕ್ಕಾಗಿ ಕಾದೇ ಇದ್ದಾನೆ ! ಹೇ ಅಮಲ - ಧವಲ - ಕಿರಣ - ರಾಶಿ - ಸುಧಾಂಶೊ ! ನೀನು ಎಲ್ಲರನ್ನು ಇಟ್ಟುಕೊಂಡು, 'ಆಶ್ಲೇಷಾ' 'ಮಘಾ' ಎಂಬಿಬ್ಬರನ್ನು ಕೊಟ್ಟು ಬಿಡು ನಾನು ಅವರಿಬ್ಬರನ್ನೂ ಬಹಳ ಪ್ರೀತಿಸುವೆನು. ನನ್ನಂತಹ ನಿಷ್ಕರ್ಮಿಗಳು ಅವರ ಕೃಪೆಯಿಂದ ಎರಡು ದಿನಗಳು ಗೃಹವಾಸ ಸುಖವನ್ನು ಹೊಂದಬಲ್ಲರೆಂದು ನಾನು ತಿಳಿದಿರುವೆನು. ಆ ಸೋದರಿಯರಿಬ್ಬರಿಗೂ ನನ್ನ ಮನೆಯಲ್ಲಿ ಚಿರಕಾಲ ಸ್ಥಾನದಾನಮಾಡಿ ಸುಖದಿಂದ ಕಾಲ ಕಳೆಯುವೆನು. ಅವರಲ್ಲಿ - ಇನ್ನೂ ಅನೇಕ ಗುಣಗಳಿವೆ. ಜನರು ತಮ್ಮ ಅಕ್ಷಮತೆಯಿಂದ ಯಾವ ಕೆಲಸವನ್ನೂ ಮಾಡಲಾಗದಿದ್ದಾಗ ಸುಮ್ಮನೆ ಅವರ ಮೇಲೆ ದೋಷ ವನ್ನು ಹೊರಿಸಿ, ತಾವು ನಿರ್ದೋಷಿಗಳಾದೆವೆಂದು ಭಾವಿಸುವರು. ನಾನೂ ನಸೀರಾಮುಬಾಬುವಿನ ಬಟ್ಟೆ ವಿಕ್ರಯದಲ್ಲಿ ಮೋಸ ಹೋದರೆ ಆಗ ನನ್ನ ಸಹಧರ್ಮಿಣಿಯರಿಬ್ಬರ ಮೇಲೆ ಎಲ್ಲ ದೋಷಗಳನ್ನೂ ಹೊರಿಸಿ ನಾನು ನಿರಪರಾಧಿ ಎನಿಸಿಕೊಳ್ಳುವೆನು.

ಚಂದ್ರದೇವ ! ನೀನು ನನ್ನ ಕಥೆಯನ್ನು ಕೇಳಿದೆಯೋ ಇಲ್ಲವೊ ? ನೀನು ಈಗಲೂ ಮಂದಾಕಿನಿಯ ಮಂದಾಂದೋಲಿತ ವಕ್ಷ - ವಸನಗಳಲ್ಲಿ (ಗಂಗೆಯ ತರಂಗ ತರಂಗ ಪೂರ್ಣವಾದ ವಕ್ಷದಲ್ಲಿ) ಕರಸ್ಪರ್ಶ ಮಾಡು ತ್ತಿರುವಂತೆ ತಿಳಿದುಕೊಂಡಿರುವೆಯೇನು ? ಈಗಲೂ ಮಂದಮಾರುತ ನೊಂದಿಗೆ ಸೇರಿಕೊಂಡು ವೃಕ್ಷಗಳ ಅಗ್ರಭಾಗದಲ್ಲಿ ಪ್ರತಿಕ್ಷಣದಲ್ಲಿಯೂ ನಿನ್ನ ಕಿರಣಗಳನ್ನು ವರ್ಷಿಸುತ್ತಿರುವಿಯೇನು ? ಈಗಲೂ ಗರಿಕೆಗಳ ಮೇಲೆ ಮಣಿ-ಮುಕ್ತ-ಮರಕತ (ಬಿಂದು) ಗಳನ್ನು ವರ್ಷಿಸುವೆಯೇನು? ಹುಲ್ಲಿನಲ್ಲಿ ಮುತ್ತು ! ಅಲ್ಲಿ ಅವನ್ನು ಯಾರೇ ಹರಡಲಿ, ಹರಡದಿರಲಿ, ನೀನು ಮಾತ್ರ ಹರಡುತ್ತಿರುವುದನ್ನು ನಾನು ನೋಡುತ್ತಿದ್ದೇನೆ. ಇಂದು ಈಗ ನಾನೂ ಹರಡುವೆನು !

ಈ ಜಗತ್ತಿನ ಜನರು, ಈ ಬಲ್ಲಾಳಸೇನನ ಪ್ರ - ಪರಾ - ಅಪ - ಪೌತ್ರರೊ ಅವರ ನಿರ - ದುರ - ವಿ - ಅಧಿ - ದೌಹಿತ್ರರೂ ನನ್ನನ್ನು ಸುಟ್ಟು

ಬೂದಿಮಾಡುತ್ತಿರುವರು. ನನ್ನ ಎದೆಯ ಮೇಲೆ ವಿಶ್ವವಿದ್ಯಾಲಯವು ಸ್ಥಾಪಿತವಾಗಿದೆ. ಬಿ.ಎ. ಪಾಸಾಗದ ಹೊರತು ವಿವಾಹವಾಗುವುದಿಲ್ಲ! ಈಗ ಜಗತ್ತು ಮುಳುಗುವುದು. ಉಚ್ಚ ಶಿಕ್ಷಣದ ಫಲವೇನು? – ಸೊಳ್ಳೆ ಪರದೆ, ಬೆಳ್ಳಿಯ ಪಾತ್ರೆ, ರೇಷ್ಮೆಯ ಪಂಚೆ, ಬಂಗಾರದ ಗಡಿಯಾರ, ಸರ ಪಣಿ, ರೇಷ್ಮೆಯ ಅಂಗಿ, ಒಂದು ವಂಶಯಷ್ಟಿಕಾ (ಬೆತ್ತ)! ಹರಿ, ಹರಿ ಎನ್ನಿರಿ, ಅಣ್ಣಂದಿರಾ!! (ಮುಳುಗುವಾಗ) ತೃಣಗ್ರಾಹಿಗಳಾದ ಪಾಂಡಿತ್ಯಾಭಿಮಾನಿ ಗಳೂ, ಬಿ.ಎ. ಉಪಾಧಿಧಾರಿಗಳೂ ಉಚ್ಚ ಶಿಕ್ಷಿತ ನವಯುವಕ ದಳಗಳೂ ರೇಷ್ಮೆ ವಸ್ತ್ರ ವೇಷಭೂಷಣ ವೇತ್ರ ಸಹಿತರಾಗಿ ಸಜೀವದಿಂದಲೆ ಗಂಗೆಯಲ್ಲಿ ಮುಳುಗಿ ಹೋಗಲಿ!!! ಮೊದಲು ಉಪಾಧಿಯನ್ನು ಹೊಂದಿದರು, ಈಗ ಸಮಾಧಿಯನ್ನು ಹೊಂದಲಿ! ಅವರು ವಿಲಾಯತಿ ಬ್ರಹ್ಮನಲ್ಲಿ ಲೀನರಾ ದರು. ಭಾರತೀಯ ಯುವಕರು ಸಂಸಾರಿಗಳಾದರು. ಅವರ ಉಚ್ಚ ಶಿಕ್ಷಣ ದಿಂದ ಅವರು ಉನ್ನತ ಸ್ಥಾನವನ್ನಡರಿರುವರು, ಅವರು ಸಾವಿರ ತೊಲೆಗಳ ಬೆಳ್ಳಿ ಪಾತ್ರೆ, ನೂರು ತೊಲೆಗಳ ಸ್ವರ್ಣಾಲಂಕಾರ, ಮತ್ತು ಸಂಸಾರ ಕುಟೀ ರಕ್ಕೆ ಏಕಮಾತ್ರ ಆಧಾರವಾದ ವಂಶಯಷ್ಟಿಕಾ (ಸ್ತ್ರೀ)-ಇವುಗಳನ್ನು ಹೊಂದಿ ದರು. ಇವುಗಳೊಂದಿಗೆ ಅವರು ಚಿರಕಾಲದಿಂದಲೂ ಆಶಿಸುತ್ತಿದ್ದ ಹೇಮ ಕೂಟ ಪರ್ವತ ಸಮೀಪದಲ್ಲಿರುವ ಕಿಷ್ಕಿಂಧಾಪುರಿಯ ಸರಕಾರಿ ವಕೀಲಿ ಕೆಲಸವನ್ನೂ ಹೊಂದಿದರು! ಹರಿ, ಹರಿ ಎನ್ನಿರಿ, ಅಣ್ಣಂದಿರಾ! ಇಷ್ಟು ದಿನಗಳ ಬಳಿಕ ಅವರಿಗೆ ಸಮಾಧಿ ಪ್ರಾಪ್ತಿಯಾಯಿತು!!! ಅವರು ಉಚ್ಚ ಶಿಕ್ಷಣವನ್ನು ಹೊಂದುವುದಕ್ಕಾಗಿ ವಿಶೇಷ ಪ್ರಯತ್ನಪೂರ್ವಕವಾಗಿ ಕಾಂಸ್ಕಾಟಕಾ ದೇಶದ ನದಿಗಳ ಹೆಸರುಗಳನ್ನು ಕಂಠಪಾಠ ಮಾಡಿದರು. ಈ ಉಚ್ಚ ಶಿಕ್ಷಣಕ್ಕಾಗಿಯೆ ಅವರು ಅರ್ಧ ರಾತ್ರಿಯವರೆಗೆ ಎಣ್ಣೆಯನ್ನುರಿಸಿ ದೀಪದ ಮುಂದೆ ಏಕಾಗ್ರ ಮನಸ್ಕರಾಗಿ ಸಹರಾ ಮರುಭೂಮಿಯ ಮರಳಿನ ಕಣಗಳ ಸಂಖ್ಯೆಯನ್ನು ಎಣಿಸಿರುವರು. ಈ ಉಚ್ಚ ಶಿಕ್ಷಣಕ್ಕಾಗಿಯೆ ಅವರು ಸಾರ್ಲಿಮ್ಯಾನ ಹಿಂದಿನ ೫೨ ಪೀಳಿಗೆ ಮತ್ತು ಮುಂದಿನ ೫೩॥ ಪೀಳಿಗೆಯವರ ಹೆಸರುಗಳನ್ನು ಕಂಠಪಾಠಮಾಡಿದರು. ಈ ಉಚ್ಚಶಿಕ್ಷಣ ಬಲದಿಂದಲೆ ಅವರು ಸಭೆಗಳಲ್ಲಿ ಉಪನ್ಯಾಸ ಕೊಡುವುದು ಪರಮ ಪುರುಷಾರ್ಥ; ಯಾವ ಬಗೆಯಿಂದಲಾದರೂ ಇಂಗ್ಲೀಷರನ್ನು ನಿಂದಿಸುವುದು ರಾಜನೀತಿ ಜ್ಞಾನ;

ಮತ್ತೆ ವಂಶದಂಡಿಕೆಯನ್ನು ಸ್ಥಾಪಿಸಿ (ಪತ್ನಿಯನ್ನು ಹೊಂದಿ) ಉಮೇದುವಾರರ (ಮಕ್ಕಳು ಮರಿಗಳ) ಸಂಖ್ಯೆಯನ್ನು ಹೆಚ್ಚಿಸಿ ದೇಶವನ್ನು ಕಾಡುಮಯವಾಗಿ ಮಾಡುವುದೆ ಕಲಿಯುಗದಲ್ಲಿ ಜೀವನ ಧರ್ಮದ ಚರಿತಾರ್ಥತೆ ಎಂಬುದನ್ನು ಅವರು ಕಲಿತಿದ್ದಾರೆ!

ಈ ಬಗೆಯ ವಂಶದಂಡಿಕೆಯನ್ನು ನಾನು ಅಪೇಕ್ಷಿಸುವುದಿಲ್ಲ. ನಾನು ಹೀಗೆ ಉಯಿಲು (ಮೃತ್ಯುಪತ್ರ) ಬರೆದಿಟ್ಟು ಹೋಗುವೆನು - "ನನ್ನಿಂದ ಏಳು ಪೀಳಿಗೆಯವರೆಗೆ ಯಾರೂ ವಿವಾಹ ಮಾಡಿಕೊಳ್ಳದಿರುವುದು ಅವರ ಕರ್ತವ್ಯ. ಮಾಡಿಕೊಂಡರೂ ಇಂಥಾ ವಂಶದಂಡಿಕಾ-ಆಶ್ರಯದಿಂದ ಸ್ವರ್ಗಲಾಭವನ್ನು ಹೊಂದಲಿಚ್ಛಿಸಕೂಡದು." ಜೀವಪ್ರವಾಹವನ್ನು (ಸಂಸಾರವನ್ನು) ಅಭಿವೃದ್ಧಿಗೊಳಿಸುವುದು ವಿವಾಹದ ಉದ್ದೇಶವಾಗಿದ್ದರೆ ನಾನು ಮತ್ಸ್ಯಾದಿಗಳೊಂದಿಗೆ ವಿವಾಹಿತನಾಗುವೆನು. ಹಣಕ್ಕೋಸ್ಕರ ಮದುವೆಯಾಗುವುದಿದ್ದರೆ, ಟಂಕಸಾಲೆಯ ಮುಖ್ಯಾಧಿಕಾರಿಯನ್ನೆ ಮದುವೆಮಾಡಿಕೊಳ್ಳುವೆನು; ಅಥವಾ ಸೌಂದರ್ಯಾರ್ಥವಾಗಿ ವಿವಾಹವಾಗುವುದಿದ್ದರೆ ಮುಖ ಪರದೆಗಳ ಹಿಂದಿರುವ ಚಂದ್ರವದನೆಯರಿಗೆ ದೂರದಿಂದಲೆ ನಮಿಸಿ, ಈ ಆಕಾಶದಲ್ಲಿರುವ ಚಂದ್ರನನ್ನು ವಿವಾಹ ಮಾಡಿಕೊಳ್ಳುವೆನು.

ಭಾಗೀರಥೀ! ನೀನು ಶಾಂತನು ರಾಜನವಕ್ಷ ಸ್ಥಳದಲ್ಲಿ ಅಥವಾ ಅದಕ್ಕಿಂತ ಉಚ್ಚತರವಾದ ಹಿಮಾಲಯ ಭವನದಲ್ಲಿ ಅಥವಾ ಅದಕ್ಕೂ ಉಚ್ಚತರವಾದ ಧೂರ್ಜಟಿ(ಈಶ್ವರನ) ಜಟಾಕಲಾಪದಲ್ಲಿ ವಿರಾಜಿಸುತ್ತಿದ್ದಿದ್ದರೆ ಇಂದು ಯಾರು ನಿನ್ನ ಉಪಾಸನೆಯನ್ನು ಮಾಡುತ್ತಿದ್ದರು. ನೀನು ನೀಚಗಾಮಿನಿಯಾಗಿ ಮರ್ತ್ಯ ಲೋಕಕ್ಕಿಳಿದು ಸಹಸ್ರಮುಖಿಯಾಗಿ ಸಾಗರಗಾಮಿಯಾದುದರಿಂದಲೆ ಸಗರ ಚಕ್ರವರ್ತಿಯ ವಂಶವನ್ನು (೬೦ ಸಾವಿರ ಮಕ್ಕಳನ್ನು) ಉದ್ಧಾರಮಾಡಬಲ್ಲವಳಾದೆ. ಸಮೀರಣ (ವಾಯು), ನೀನು ಅಂಜನಾದೇವಿಯ ಅಂಚಲದೊಂದಿಗೆ (ಸೆರಗಿನೊಂದಿಗೆ) ಚಿರಕಾಲ ಕ್ರೀಡಾಕ್ತನಾಗಿದ್ದರೆ ಅಥವಾ ಮಲಯಾಚಲದಲ್ಲಿ ಸ್ವಂತ ಪ್ರಮೋದ ಭವನದಲ್ಲೆ ಚಂದನ ಶಾಖೆಗಳನ್ನು ಬಗ್ಗಿಸುತ್ತ, ಅಥವಾ ಏಲಕ್ಕಿಯ ಬಳ್ಳಿಗಳನ್ನು ಅಲ್ಲಾಡಿಸುತ್ತ ತಿರುಗುತ್ತಿದ್ದಿದ್ದರೆ ನಿನ್ನನ್ನು "ತ್ವಮೇವ ಜಗಜ್ಜೀವನಂ ಪಾಲಂ" ಎಂದು ಯಾರು ಸ್ತುತಿಸುತ್ತಿದ್ದರು. ಈ ಬಾಲಸಂತ ವಿಹಾರಿ

ವಿಹಂಗಮ ದಳಗಳ ಕಲರವವು ಕೇವಲ ನಂದನವನದಲ್ಲಿಯೆ ಪ್ರತಿಧ್ವನಿತ ವಾಗುತ್ತಿದ್ದಿದ್ದರೆ ಕಮಲಾಕಾಂತ ಚಕ್ರವರ್ತಿಯು ಅವುಗಳ ಹೆಸರಿನಲ್ಲಿ, ಈ ರಾತ್ರಿಯಲ್ಲಿ ಇಷ್ಟು ಮಸಿ - ಲೇಖನಿಗಳನ್ನು ಏಕೆ ವ್ಯರ್ಥವಾಗಿ ಉಪ ಯೋಗಿಸುತ್ತಿದ್ದನು? ಸುಧಾಂಶೂ! (ಚಂದ್ರನೆ!) ನೀನು ಕ್ಷೀರಸಾಗರ ತಲದಲ್ಲಿ, ಅಮೃತ ಭಾಂಡಾರದಲ್ಲಿ, ಪ್ರವಾಳ ಪರ್ಯಂಕದಲ್ಲಿ (ಹವಳದ ಮಂಚದ ಮೇಲೆ) ಮೌಕ್ತಿಕಶಯ್ಯೆಯಲ್ಲಿ, ಮಲಗಿರುತ್ತಿದ್ದರೆ ನಿನ್ನನ್ನು ರಮಣೀಯ ಮುಖಮಂಡಲದೊಂದಿಗೆ ಯಾರು ಹೋಲಿಸುತ್ತಿದ್ದರು? ಅಥವಾ ನೀನು ನಿನ್ನ ಇಪ್ಪತ್ತೇಳು ಜನ ಸುಂದರಿಯರನ್ನು ಕಟ್ಟಿಕೊಂಡು, "ಸಾರಂ ಶ್ವಶುರ ಮಂದಿರಂ" ಎಂಬ ಸಿದ್ಧಾಂತವೇ ಸತ್ಯವೆಂದು ಭಾವಿಸಿ, ದಕ್ಷಾಲಯದಲ್ಲಿ ವಾಸಮಾಡುತ್ತಿದ್ದಿದ್ದರೆ ಇಂದು ಕಮಲಾಕಾಂತಶರ್ಮನು ಈ ಬಗೆಯಾಗಿ ನಿನ್ನ ದರ್ಶನಾಭಿಲಾಷೆಯಿಂದ ಈ ಸ್ಮಶಾನದ ಬಳಿಯಲ್ಲಿ ಸಂಸಾರದಿಂದ ವಿರಕ್ತ ನಾಗಿ ಏಕೆ ಕುಳಿತುಕೊಳ್ಳುತ್ತಿದ್ದನು?

ಶಶಿ!–ನೀನು ವ್ಯಾಕರಣವನ್ನು ಓದಿದ್ದರೆ ನನ್ನನ್ನು ಕ್ಷಮಿಸು. ಪ್ರಾಣ ಹೋದರೂ "ಶಶಿನ್" ಎಂದು ಹೇಳುವ ಅಭ್ಯಾಸವು ನನಗಿಲ್ಲ - ಈವರೆಗೆ ನಾನು ಕೇವಲ ನಿನ್ನ ಗುಣದ ಮೇಲೆ ದೃಷ್ಟಿಯನ್ನಿಟ್ಟಿರುವೆನು. - ಶಶಿ! ನೀನು ಅನಾಥರ ಕುಟೀರ ದ್ವಾರದಲ್ಲಿ ಕಾವಲುಗಾರನ ರೂಪದಲ್ಲಿ ಎವೆಯಿಕ್ಕದೆ ಕಾವಲಿರುವೆ. ತೊದಲ್ನುಡಿಯ ಮಕ್ಕಳು ಕುಣಿಯುತ್ತ ಕುಣಿಯುತ್ತ ನಿನ್ನನ್ನು ಹಿಡಿಯಲು ಹೊರಟಾಗ ನೀನೂ ಅವರೊಂದಿಗೆ ಕುಣಿಯುತ್ತ ಕುಣಿಯುತ್ತ ಆಟವಾಡುವೆ. ನಿರ್ಮಲವಾದ ಸರೋವರದ ಮಧ್ಯದಲ್ಲಿ ನಿನ್ನನ್ನು ನೋಡಲು ಬಾಲಿಕೆಯರು ಬಂದಾಗ ನೀನು ಕೆಲವು ವೇಳೆ ಅವರಿಗೆ ಕಾಣಿಸಿಕೊಳ್ಳುವೆ; ಕೆಲವು ವೇಳೆ ಕಾಣಿಸಿಕೊಳ್ಳದಿರುವಾಗ ನಿನ್ನ ಸಂದ ರ್ಶನ ಲಾಭಕ್ಕಾಗಿ ಅವರು ಸರೋವರದ ತೀರದಲ್ಲಿ ಓಡಾಡುವಾಗ ನೀನು ಅವರಿಗೆ ಒಂದೊಂದು ಬಾರಿ ಕಾಣಿಸಿಕೊಳ್ಳುತ್ತ, ಅವರೊಂದಿಗೆ ಕಣ್ಣು ಮುಚ್ಚಾಲೆ ಆಟವನ್ನಾಡುತ್ತಿರುವೆ, ನವ ವಧುವು ಏಕಾಂಗಿಯಾಗಿ ಪ್ರಾಸಾ ರದ ಮೇಲೆ ಮರೆಯಲ್ಲಿ ಕುಳಿತುಕೊಂಡು, ದೀರ್ಘ ಶ್ವಾಸವನ್ನು ಬಿಡುವಾಗ ನೀನು ಮೆಲ್ಲಗೆ ತೆಂಗಿನ ಮರಗಳ ಮೇಲಿದ್ದು ನಿಧಾನವಾಗಿ ಅವಳ ಹೃದಯ ವನ್ನಾವರಿಸಿ ಅಲ್ಲಿ ಅಮೃತವನ್ನು ಸುರಿಸಿ, ಅವಳಿಗೆ ಶಾಂತಿಯನ್ನೀಯುವೆ.

ನದಿಯು ಆಶಾತರಂಗ ಪೂರ್ಣವಾಗಿ ಮಂದಗತಿಯಿಂದ ಪ್ರವಹಿಸುತ್ತ ಸಾಗರದ ಕಡೆಗೆ ತೆರಳುವಾಗ, ನೀನು ಅದನ್ನು ಸ್ವರ್ಣ ಭೂಷಣಗಳಿಂದ ಅಲಂಕರಿಸಿ, ಆಶೀರ್ವಾದವನ್ನಿತ್ತು ಅದಕ್ಕೆ ಮಾರ್ಗವನ್ನು ತೋರಿಸುವೆ. ಗುಲಾಬಿಯು ವಸಂತರಾಗದಲ್ಲಿ ಮತ್ತಾಗಿ ತನ್ನ ವೃಂತವನ್ನು ನಾಲ್ಕು ದಿಕ್ಕುಗಳಲ್ಲಿಯೂ ಅಲುಗಾಡಿಸುತ್ತಿರುವಾಗ ಮಲ್ಲಿಗೆ ಲತೆಗೆ ಚುಂಬನವೀಯುವಂತೆ ನೀನು ಅದರ ಕಿವಿಯಲ್ಲಿ ಉಪದೇಶಿಸುವೆ. ಮತ್ತೆ ಅದೇ ನೀನು, ಪಾಪ ವಿಚಾರ ಪೂರ್ಣನಾದ ನರನೊಬ್ಬನು ಕುಲ ಕಾಮಿನಿಯೊಬ್ಬಳ ಧರ್ಮನಾಶ ಕಾರ್ಯದಲ್ಲಿ ಪ್ರವೃತ್ತನಾದಾಗ ನಿನ್ನ ಮುಖಮಂಡಲವನ್ನು ನೋಡಲಾಗದಂತೆ ನಿನ್ನಾ ಕೋಮಲವಾದ ಮುಖ ಮಂಡಲದಲ್ಲಿ ಹುಬ್ಬು ಗಂಟಿಕ್ಕಿ ಕೋಪವನ್ನು ಪ್ರಕಟಿಸುವೆ. ಮತ್ತೆ ನರಹತ್ಯಾಕಾರಿಯ ಕತ್ತಿಯಲ್ಲಿ ಒಂದು ಬಗೆಯ ವಿದ್ಯುತ್ತನ್ನು ನೀನು ಝಳಪಿಸಿ, ಅವನಾ ಪಾಪರಕ್ತ ಬಿಂದುವಿನ ದೋಷದಿಂದಲೆ ಅವನಿಗೆ ರೌರವ ನರಕವು ಕಾಣುವಂತೆ ಮಾಡಿಬಿಡುವೆ.

ನೀನು ಆಟವಾಡುವ ಮಕ್ಕಳಿಗೆ ಚಲನಯುಕ್ತವಾದ ಬಂಗಾರದ ಪಾತ್ರೆಯಾಗಿರುವೆ; ತರುಣರಿಗೆ ಆಶಾಪ್ರದೀಪನು; ಯುವಕ ಯುವತಿಯರಿಗೆ ರಾತ್ರಿ ಕಳೆಯಲು ಮತ್ತು ಭೋಗಿಸಲು ಪ್ರಧಾನ ಸಾಮಗ್ರಿ; ವಾರ್ಧಿಕ್ಯಾವಸ್ಥೆಯಲ್ಲಿರುವವರಿಗೆ ಸ್ಮೃತಿ ದರ್ಪಣ ನೀನು; ನೀನು ಅನಾಥರಿಗೆ ಕಾವಲುಗಾರನು; ಪಥಿಕರಿಗೆ ಪಥಪ್ರದರ್ಶಕನು; ಗೃಹಸ್ಥನಿಗೆ ರಾತ್ರಿ ಸೂರ್ಯನು; ನೀನು ಪಾಪಿಗಳ ಪಾಪಕ್ಕೆ ಸಾಕ್ಷಿಯಾಗಿರುವೆ; ಪುಣ್ಯಾತ್ಮರ ದೃಷ್ಟಿಯಲ್ಲಿ ಅವರ ಯಶಸ್ಸಿನ ಪತಾಕೆಯಾಗಿರುವೆ. ನೀನು ಗಗನಕ್ಕೆ ಉಜ್ವಲವಾದ ರತ್ನ; ಜಗತ್ತಿಗೆ ಭೂಷಣನು, ಈಗ ಈ ಸ್ಮಶಾನ ವಿಹಾರಿಯಾದ ಕಮಲಾಕಾಂತನಿಗೆ ಏಕಮಾತ್ರ ಆಧಾರನಾಗಿರುವೆ. ನೀನು ಒಳ್ಳೆಯವರಿಗೆ ಒಳ್ಳೆಯವನು, ಕೆಟ್ಟವರಿಗೆ ಕೆಟ್ಟವನು. ರಸದಲ್ಲಿ ರಸ, ನೀರಸ ಸಮಯದಲ್ಲಿ ವಿಷ. ನೀನು ಕಮಲಾಕಾಂತನ ಸಹಧರ್ಮಿಣಿ; ಶಶಿ, ನಾನು ನಿನ್ನನ್ನು ವಿಶೇಷವಾಗಿ ಪ್ರೀತಿಸುವೆನು. ನಾನು ನಿನ್ನನ್ನು ಮದುವೆಯಾಗುವೆನು. ಎಲ್ಲರೂ ಹರಿ, ಹರಿ ಎನ್ನಿ! ಅಣ್ಣಂದಿರಾ! ಇಂದು ಈಗಲೆ ಮದುವೆಗೆ ಮುಹೂರ್ತ! ಪಾಠಕರೆಲ್ಲರು ಒಂದು ಬಾರಿ ಹೇಳಿರಿ, ಹರಿ! ಹರಿ! ಎಂದು.

ಬಮ್ ಬೋಲಾನಾಥ! ಚಂದ್ರನು ಪುರುಷನಲ್ಲವೆ! ಈಗ (ಅಫೀಮಿನ) ಮಾತ್ರೆಯನ್ನು ಎರಡರಷ್ಟು ಹೆಚ್ಚಿಸದಿದ್ದರೆ ಪ್ರಯೋಜನವಿಲ್ಲ.

ನಮ್ಮ ಆರ್ಯರ ಅಭಿಪ್ರಾಯಾನುಸಾರವಾಗಿ ಪುರುಷನಾಗಿದ್ದಾನೆ. ಆದರೆ ವಿಲಾಯಿತಿ ಬ್ರಾಹ್ಮಣರ ಅಭಿಪ್ರಾಯದಂತೆ ಅವನು "ಕೋಮಲಾಂಗಿ"! ನಮ್ಮ ಅಭಿಪ್ರಾಯಾನುಸಾರವಾಗಿ ಅವನು ('ಹೀ He')* ಇಂಗ್ಲೀಷರ ಅಭಿಪ್ರಾಯಾನುಸಾರವಾಗಿ ಚಂದ್ರನು "ಷೀ (She)". ಇನ್ನು ಏನು ಉಪಾಯವಿದೆ? ಅವನು 'ಹೀ'ಯೊ 'ಷಿ'ಯೊ ಎಂಬುದನ್ನು ನಿರ್ಣಯಿಸುವುದು ಹೇಗೆ?

ನಿಜವಾಗಿ ಈ ವಿಷಯದಲ್ಲಿ ಈ ಲೋಕದ ಜನರೊಂದಿಗೆ ನನ್ನ ಅಭಿಪ್ರಾಯವು ಎಂದಿಗೂ ಸೇರುವುದಿಲ್ಲ. ಈ ವಿಷಯದಲ್ಲಿ ನನಗೆ ಅನೇಕ ಸಂದೇಹಗಳಿವೆ. ಯಾವ ವಜೀದಾಲಿ ಷಾಹನು ಲಕ್ನೋ ನಗರದಿಂದ ಎತ್ತರವಾದ ಮುಚಿಯ ಬುರ್ಜಿಗೆ (ಗೋಪುರಕ್ಕೆ) ಹೋಗಿ ಸ್ವಚ್ಛಂದವಾಗಿ ಗಂಡು ಹೆಣ್ಣು ಪಾರಿವಾಳಗಳೊಂದಿಗೆ ಕ್ರೀಡಿಸುವನೋ, ಗುಲಾಬಿ ಅತ್ತರಿನಿಂದ ನಿತ್ಯ ಸ್ನಾನಮಾಡಿ ತನ್ನಂತೆ ಬಂಗಾರದ ಪಂಜರದಲ್ಲಿರುವ ಬುಲ್-ಬುಲ್ ಪಕ್ಷಿಗಳಿಗೆ ತುಪ್ಪದ ಪಲಾವನ್ನು ತಿನ್ನಿಸುತ್ತಿರುವನೊ, ಆ ಷಾಹನು 'ಹೀ' ಆಗಿದ್ದನೊ 'ಷೀ' ಆಗಿದ್ದನೊ? ಯಾವ ರಾಣಿಯು ದೇಶವಾತ್ಸಲ್ಯಕ್ಕಾಗಿ ಐಹಿಕ ಸುಖ ಸಂಪತ್ತುಗಳನ್ನು ತ್ಯಜಿಸಿ ರಾಜ ಪುರುಷರಿಗೆ ಶರಣಾಗತಳಾಗುವುದಕ್ಕೆ ಬದಲಾಗಿ ಭಿಕ್ಷೆ ಬೇಡುವುದು ಮೇಲೆಂದು ತಿಳಿದು ನೇಪಾಳದ ಪರ್ವತ ಪ್ರಾಂತ್ಯದಲ್ಲಿ ಆಶ್ರಯವನ್ನು ಹೊಂದಿದಳೋ ಆಕೆ 'ಷೀ' ಆಗಿದ್ದಳೊ 'ಹೀ' ಆಗಿದ್ದಳೋ? ಕೇವಲ ಸಾಹಸದಿಂದಲೆ 'ಹೀ' 'ಷೀ'ಗಳ ನಿರ್ಣಯವಾಗಲಾರದೆಂದು ಇದರಿಂದ ತಿಳಿದುಬರುವುದು. ಹಾಗಾದರೆ ಯುದ್ಧ ನೈಪುಣ್ಯದಿಂದ 'ಹೀ' 'ಷೀ'ಗಳ ನಿರ್ಣಯವಾಗಬೇಕೇನು? ಯಾವ ಜೋನಳು (ಜೋನ್ ಆಫ್ ಆರ್ಕ್) ಆರ್ಲಿಯನ್ಸ್ ದುರ್ಗಾಕ್ರಮಣ ಕಾಲದಲ್ಲಿ ಮುಂದಾಳಾಗಿ ಅಡಿ ಇಟ್ಟಳೊ, ಯಾವಳು

---

* It ಎಂಬುದು ಇಂಗ್ಲೀಷಿನ ಸರ್ವನಾಮ ಪದ. ನಪುಂಸಕಲಿಂಗದಲ್ಲಿ ಅದರ ಪ್ರಯೋಗ.

ಫ್ರಾನ್ಸಿನ ಪುನರುದ್ಧಾರ ಮಾಡಿದಳೊ ಅವಳು 'ಷಿ' ಆಗಿದ್ದಳೆನ್ನಬೇಕೊ, 'ಹೀ' ಆಗಿದ್ದಳೆನ್ನಬೇಕೊ? ಮತ್ತೆ ಯಾವ ಬೆಡ್‌ಫರ್ಡನು ಅದೇ ಜೋನ ಳನ್ನು ಕಪಟ ಜಾಲದಿಂದ ವಂಚಿಸಬೇಕೆಂದು ಅವಳಿಗೆ ಪುರುಷ ವೇಷವನ್ನು ಹಾಕಿ, ಅವಳನ್ನು ಕಾರಾಗೃಹದಲ್ಲಿರಿಸಿದ್ದನೊ, ಅಂಥವನು 'ಹೀ' ಆಗಿದ್ದನೊ 'ಷಿ' ಆಗಿದ್ದನೊ? ಇಲ್ಲ, ಯುದ್ಧ ಕೌಶಲ್ಯದಿಂದಲೂ ಇದು ನಿರ್ಣಯ ವಾಗದು. ಹಾಗಾದರೆ ನಾನು ಕೇಳಿದ್ದೇನೆ - ಸಾಮಾನ್ಯವಾಗಿ ಬಲಶಾಲಿ ಯಾದವನು ಗಂಡಸು, ದುರ್ಬಲಳಾದವಳು ಹೆಂಗಸು ಎಂದು. ಹಾಗೆ ಆಗಲಿ. ಯಾವ ಕಾಂಟೆಯು ತಾನೆ ಸರ್ವ ನೀತಿಜ್ಞ ಶಿರೋಮಣಿಯೆಂದು ಭಾವಿಸಿ, ಯೂರೋಪಿನ ಪಂಡಿತ ಮಂಡಲಿಯಿಂದ 'ಕರ'ವನ್ನು ಕೇಳಿದನೊ, ಅಂತಹ ಅತುಲ ಪ್ರತಾಪಶಾಲಿಯನ್ನು ತನ್ನ ಪ್ರತಾಪದಿಂದ ವಶಪಡಿಸಿ ಕೊಂಡ ಮೇಡಮ್ ಕ್ಲೋಟಿಲಡ-ಡೆಬೊ ಎಂಬವಳಿಗೆ 'ಷೀ' ಎಂದು ಹೇಳು ವಿರೊ? ರೋಮ್ ನಗರದ ಕೈಸರಗಣಗಳಲ್ಲಿ ಪ್ರತಿಯೊಬ್ಬರೂ ಪೃಥ್ವೀ ಪತಿಗಳೆನಿಸಿಕೊಂಡವರಾಗಿದ್ದರು. ಅಂತಹ ಮೂವರು ಕೈಸರರನ್ನು ತನ್ನ ಅಧೀನದಲ್ಲಿಟ್ಟುಕೊಂಡು ಅವರ ಮೇಲೆ ಅಧಿಕಾರವನ್ನು ನಡೆಯಿಸಿದ ಮಿಶ್ರ ದೇಹದ ಕ್ಲಿಓ ಪೇಟ್ರಾ ರಾಣಿಯು ಷಿ (She) ಆಗಿದ್ದಳೋ ಹಿ (He) ಆಗಿ ದ್ದಳೊ? ನಿಜವಾಗಿ ನೋಡಿದರೆ ಈ ಜಗತ್ತಿನಲ್ಲಿ ಹಿ (He) ಯಾರು ಷಿ (She) ಯಾರು ಎಂಬುದು ನಿರ್ಣಯವಾಗಲಾರದು. ಒಂದು ದಿನ ಕೀರ್ತನೆಯಾಗುತ್ತಿತ್ತು. ಕೀರ್ತನೆ ಹಾಡುತ್ತಿದ್ದವಳು ಹೇಳುತ್ತಿದ್ದಳು. - "ಸಿಂಹಿನಿಯಾಗಿ ಶಿವಾಪದವನ್ನು ಸೇವಿಸಬೇಕೆ ?" ಎಂದು. ಆಗ ಭಾರತೀಯ ಯುವಕರೆಲ್ಲರು ಮಂತ್ರಮುಗ್ಧರಾಗಿದ್ದಂತೆ ಚಿತ್ರಪುತ್ಥಳಿಗಳಂತೆ ಅವಳ ಮುಖವನ್ನೆ ನೋಡುತ್ತಿದ್ದರು. ನನಗೆ ಆ ಕೀರ್ತನಗಾಯಕಿಯು ನಿಜವಾ ಗಿಯೂ ಸಿಂಹದಂತೆ ಕಾಣಿಸಿದಳು. ಆ ಯುವಕರೆಲ್ಲರೂ ನನಗೆ ಶಿವಾ (ಬಂಗಾಳಿಯಲ್ಲಿ ನರಿ) ಸ್ವರೂಪವನ್ನು ತಳೆದಿರುವಂತೆ ಕಂಡುಬಂದರು. ಆಗ ನನ್ನನ್ನು ಯಾರಾದರು ಇವರಲ್ಲಿ ಯಾರು 'ಹಿ', ಯಾರು 'ಷಿ' ಎಂದು ಕೇಳಿ ದ್ದರೆ, ನಾನು ಆ ಸ್ತ್ರೀಯು 'ಹಿ' ಎಂದೂ ಜಡರಾಗಿ ಅವಳನ್ನು ನೋಡುತ್ತ ಅವಳ ಸಂಗೀತವನ್ನು ಕೇಳುತ್ತಿದ್ದವರೆಲ್ಲರೂ 'ಷಿ' ಎಂದೂ ಅವಶ್ಯವಾಗಿ ಹೇಳುತ್ತಿದ್ದೆನು. ನಿಜವಾಗಿ ನೋಡಿದರೆ ಭಾರತೀಯ ಯುವಕರು ಕೆಲ

ಸಂದರ್ಭಗಳಲ್ಲಿ 'ಹಿ' ಆದರೂ, ಸರ್ವತ್ರ ವಿಕಲ್ಪದಿಂದ 'ಇಟ್'(It)ಆಗುವರು. ಇದು ಅವರ ನಿತ್ಯವಿಧಿ. ಹೇಗೆಂದರೆ - ಹಾಸ್ಯವಿನೋದಗಳಲ್ಲಿ 'ಹಿ', ಶಯ್ಯಾಗೃಹದಲ್ಲಿ 'ಷಿ', ಕೆಲಸಕಾರ್ಯಗಳಲ್ಲಿ 'ಇಟ್' ಆಗುವರು ಅವರು. ಅವರು ಉಪನ್ಯಾಸಮಾಡುವಾಗ 'ಹಿ'; ಅಧಿಕಾರಿಗಳಾದ ಸಾಹೇಬರ ಮುಂದೆ 'ಷಿ'; ಮದ್ಯಪಾನಮಾಡಿದ ಬಳಿಕ 'ಇಟ್'! ಅಂತೂ ಅವರು 'ಹಿ'ಯೆ ಆಗಿರಲಿ 'ಷೀ'ಯೆ ಆಗಲಿ, ಕೊನೆಗೆ 'ಇಟ್' ಆಗುವುದೇ ಅನಿವಾರ್ಯ. ಅದೇನೆ ಆಗಲಿ, ನನಗೆ ನನ್ನ ವಿಚಾರದಲ್ಲಿಯೆ ನಾನು 'ಹೀ'ಯೋ 'ಷಿ'ಯೋ ಎಂದು ನಿರ್ಣಯವಾಗಿಲ್ಲ. ಆ ದಿನ ಮಧುಚಾತುರಿಯು ನನ್ನ ಹೆಸರನ್ನು ಸೇರಿಸಿ ಗೌಳಗಿತ್ತಿ ಪ್ರಸನ್ನಳನ್ನು ಹಾಸ್ಯಮಾಡಿದನು. ಪ್ರಸನ್ನಳು ಕೂಡಲೆ ಹಾಲು ತುಂಬಿದ್ದ ಗಡಿಗೆಯನ್ನೆ ಅವನ ತಲೆಯ ಮೇಲೆ ಸುರಿದು ಚಾತುರಿಬಾಬುವಿನ ಎದೆಯಲ್ಲಿರುವ ಬಲವನ್ನು ಪರೀಕ್ಷಿಸಲು ಬೇರೊಂದು ರೂಪವಾದ ಆಯುಧವನ್ನು ಪ್ರಯೋಗಿಸಲು ಇಚ್ಛಿಸಿದಳು. ಅಂಥಾ ಪ್ರಸನ್ನಳು ಸಾಂಸಾರಿಕರ ಅಭಿಪ್ರಾಯದಲ್ಲಿ 'ಷೀ'! ಮತ್ತೆ ನಾನು-ನಸೀರಾಮಬಾಬು ಒಂದುದಿನ ಹೇಳಿದ್ದನು-"ಚಕ್ರವರ್ತಿ, ನಿನ್ನೆ ನೀನು ತೂಕಡಿಸುತ್ತ ತೂಕಡಿಸುತ್ತ ದೀಪ ಉರುಳಿಸಿ, ಹಾಸಿಗೆ ಸುಟ್ಟುಬಿಟ್ಟೆ, ಇನ್ನೊಂದುದಿನ ಮನೆಗೆ ಬೆಂಕಿ ಹಚ್ಚುತ್ತೀಯೆ"-ಎಂದು. ನಾನು ಭಯದಿಂದ ಅಫೀಮಿನ ಮಾತ್ರೆಯನ್ನು ಕಡಿಮೆ ಮಾಡಿಬಿಟ್ಟೆನು! ಅಂಥಾ ನಾನು - 'ಹೀ' ಆಗಿದ್ದೇನೆ. ಈ ಬಗೆಯ ವಿಚಾರದಿಂದಲೆ ಈ ಜಗತ್ತಿನವರೊಂದಿಗೆ ನನ್ನವಾದವಿವಾದಗಳು. ಹೀಗಾಗಿ ನಾನು 'ಹೀ'ಯೊ 'ಷೀ' ಯೊ ಎಂಬುದನ್ನು ನಿಷ್ಕರ್ಷಿಸುವುದು ದುಸ್ತರವಾಗಿದೆ. ಹಾಗಾದರೆ ಚಂದ್ರನು 'ಹೀ' ಯೊ 'ಷೀ' ಯೊ ಎಂಬುದು ನಿರ್ಣಯವಾಗುವುದು ಹೇಗೆ? ಚಂದ್ರನು 'ಹೀ' ಆದರೆ, ನಾನು 'ಷೀ', ಏಕೆಂದರೆ ನಾನು ಚಂದ್ರನನ್ನು ಪ್ರೀತಿಸುವೆನು. ಮತ್ತೆ ನಾನು ಚಂದ್ರನನ್ನು ಮದುವೆಯಾಗುವೆನು, ಈಗ ನಾನು ನಿಜವಾಗಿ ಕಮಲಾಕಾಂತ ಚಕ್ರವರ್ತಿಯಾಗಿದ್ದರೆ, ಆಗ ಚಂದ್ರನು 'ಷೀ'. ಚಂದ್ರನು ವಿಲಾಯತೀಯರ ಅಭಿಪ್ರಾಯಾನುಸಾರವಾಗಿ 'ಷೀ'. ಆಗ ನಾನೂ ವಿಲಾಯತಿಯರ ದೃಷ್ಟಿಯಿಂದಲೆ ಚಂದ್ರನ ಪಾಣಿಗ್ರಹಣ ಮಾಡುವೆನು.

ಈ ಕಾಲದಲ್ಲಿ ಅನೇಕ ಮತಗಳು, ಅಭಿಪ್ರಾಯಗಳು ಉಂಟಾಗಿವೆ. ಅವುಗಳಿಗನುಸಾರವಾಗಿ ಕೆಲಸಗಳಲ್ಲಿಯೂ ಹಲವು ಬಗೆಗಳಿವೆ. ನಾನು

ವಿಲಾಯತಿ ಮತದಂತೆ ಮದುವೆಮಾಡಿಕೊಳ್ಳುವೆನು. ಈಗ ವಿಷ್ಣುವಿನ ದಶಾವತಾರಗಳು ದಶಕರ್ಮಾನಿತ್ವವಾಗಿವೆ. ಮತ್ಸ್ಯ, ಕೂರ್ಮ, ವರಾಹ ಗಳು (ಅವುಗಳ ಮಾಂಸಗಳು) ಟೇಬಲಿನ ಶೋಭೆಯನ್ನು ಹೆಚ್ಚಿಸುವುವು. ನೃಸಿಂಹರೂಪಿಯಾದ ನಾಯಿಯು ಕಮಲಾಕಾಂತ ರೂಪಿಗಳಾದ ದೈತ್ಯ ಕುಲದ ಪ್ರಹ್ಲಾದಗಣಗಳ ಆಶ್ರಯವನ್ನು ಹೊಂದಿರುವುದು. ಭಾರತೀಯ ಯುವಕರು ವಾಮನರಾಗಿದ್ದರೂ ಚಂದ್ರನನ್ನು ಮುಟ್ಟಲು, ಹಿಡಿಯಲು, ಸ್ಪರ್ಧಿಸುತ್ತಿರುವರು. ಮೊದಲನೆಯ ರಾಮನ (ಪರಶುರಾಮನ)ಂತೆ ಅವರು (ಯುವಕರು) ಮಾತೃಸೇವೆಯನ್ನೂ, ಎರಡನೆ ರಾಮನಂತೆ (ಶ್ರೀರಾಮನಂತೆ) ಅವರು ಪತ್ನಿಸೇವೆಯನ್ನೂ ಮಾಡುತ್ತ ಮೂರನೆ ರಾಮ (ಬಲರಾಮ)ನ ಬಳಿಯಲ್ಲಿ ಅವರು ವಾರುಣಿ ಸೇವೆಯನ್ನೂ (ಮದ್ಯಪಾನವನ್ನೂ) ಕಲಿಯು ತ್ತಿರುವರು. ಇವರು ಬೌದ್ಧಮತದಂತೆ ಸಂಸಾರವು ಅನಿತ್ಯವೆಂದು ತಿಳಿದು ಕಲ್ಕಿ ಅವತಾರದಂತೆ ಸಂಹಾರಮೂರ್ತಿಯನ್ನು ಧಾರಣಮಾಡಿರುವರು. ಆ ಕಾಲದಲ್ಲಿ ಶಾಕ್ತಮತದಂತೆ ಭೋಜ್ಯ ಪದಾರ್ಥಗಳನ್ನು ತಯಾರಿಸುತ್ತಿರು ವರು. ಅವನ್ನು ಶೈವ ತ್ರಿಶೂಲದಿಂದ ಚೂರು ಚೂರುಮಾಡಿ ಕಂಠದಿಂದ ಕೆಳಗಿಳಿಸಿಬಿಡುವರು. ಅದರ ಮೇಲೆ ಸೌರಪಾನವು ಸೇವನೀಯವಾದುದು. ಈಗ ಜೆರೂಸಲೇಮಿನ ಮೊದಲನೆಯ ಗೌರಾಂಗ (ಏಸುಕ್ರಿಸ್ತ)ನ ಉಪದೇಶಾ ನುಸಾರವಾಗಿ ಭಜನ ಮಂದಿರಗಳನ್ನು ಏರ್ಪಡಿಸುತ್ತಿರುವರು. ನವದ್ವೀಪ ವಾಸಿಯಾದ ದ್ವಿತೀಯ ಗೌರಾಂಗನಂತೆ ಹರಿಕೀರ್ತನವನ್ನು ಮಾಡುತ್ತಿರು ವರು. ಮತ್ತೆ ರಾಧಾನಗರವಾಸಿಯಾದ ಚಿಕ್ಕ ಗೌರಾಂಗನಂತೆ ಸಂಸ್ಕೃತ ಶ್ಲೋಕಗಳನ್ನೂ ಕಲಿಯುತ್ತಿರುವರು.

ಸುತರಾಂ ಶಶಿ, ಪೂರ್ಣ ಶಶಿ! ನಾನು ನಿನ್ನನ್ನು ಇಂಗ್ಲೀಷಭಿಪ್ರಾಯಾನು ಸಾರವಾಗಿ 'ಷೀ'ಎಂದು ನಿರ್ಧರಿಸಿ, ದೃಢಕಾಯನಾಗಿ, ನಿರೋಗಿಯಾಗಿ ಸಂತೋ ಷದಿಂದ ನಿನ್ನೊಂದಿಗೆ ವಿವಾಹವಾಗುವೆನು. ನನ್ನ ಬಳಿಕ ನನ್ನ ಪುತ್ರಪೌತ್ರರು ಕೂಡ, ಬೇರೆ ಭಾಗಿದಾರರಿಲ್ಲದೆ, ಸುಖವಾಗಿ ನಿನ್ನ ಮೇಲೆ ಅಧಿಕಾರ ನಡೆಸು ವರು. ಇದರಲ್ಲಿ ನೀನು ಅಥವಾ ನಿನ್ನ ಸ್ಥಳಾಭಿಲಾಷಿಗಳಾಗಿಬರತಕ್ಕ ಬೇರೆಯ ವರು ಏನಾದರು ಆಪತ್ತನ್ನುಂಟುಮಾಡಿದರೆ ಮಂಜೂರಾಗಲಾರದು. ನಿನ್ನ ೨೭ ಸುಂದರಿಯರ ಮೇಲೆ ಇಂದಿನಿಂದ ನನಗೆ ಪೂರ್ಣ ಅಧಿಕಾರ ಉಂಟಾಗಿದೆ.

ಇನ್ನು ಈ ಬಗೆಯಾಗಿ ಮುಂಗಾಲುಗಳ ಮೇಲೆ ನಿಂತು ಬಗ್ಗಿ ರೋಹಿಣಿ ಯೊಂದಿಗೆ ಮಾತನಾಡುವುದರಿಂದೇನು ಪ್ರಯೋಜನ? ಈ ಬಗೆಯಾಗಿ ಮುಖವನ್ನರಳಿಸಿ ನಗುತ್ತ ನಗುತ್ತ, ತೆಳುವಾದ ಮೋಡಗಳ ಪರದೆಯನ್ನು ತೆಗೆಯುತ್ತ ತೆಗೆಯುತ್ತ ಎಷ್ಟುದೂರ ಹೋಗಬಲ್ಲೆ? - ಇತಿ ಕೋರ್ಟ್‌ಷಿಪ್ ಸಮಾಪ್ತಃ।

ಅಥ ಗಾಂಧರ್ವ ವಿವಾಹ। ನಾನು ನಿನಗೆ ವರಮಾಲೆಯನ್ನು ಹಾಕಿ ದೆನು. ನೀನು ನನಗೆ ಕರಮಾಲೆಯನ್ನು ಪ್ರಧಾನಮಾಡು.

ಹೆಣ್ಣಿನ ಒಡತಿ ಹೆಣ್ಣು,
ಗಂಡಿಗೆ ಗಂಡೇ ಒಡೆಯ,
ತಮ್ಮ ಮನವೇ ಪುರೋಹಿತ,
ಮಸಣದಲಿ ಒಸಗೆಯ ಮನೆ.
ಕಮಲೆ ಕಣ್ಮುಚ್ಚಿ ಚಂದ್ರನ ನೋಡುತಿರಲು,
ಈಗ - ಚಂದ್ರನ ನೋಡಲು ಕಮಲೆ ಕಣ್ಣು ಕೂಡಿಸುವಳು
ಚಂದ್ರನೆಡೆಯಲಿ ಬರಿಯ ಕಳಂಕ - ಆದರೆ

ಕಮಲಳೆದೆಯಲಿ ಚಂದ್ರ ಪೂರ್ಣ ಉಜ್ವಲ,
ಚಂದ್ರನಿಗಿರುವುದು ಹದಿನಾರೇ ಕಲೆ,
ಅದರಲ್ಲೂ ಕ್ಷಯ - ವೃದ್ಧಿ
ಚಕ್ರವರ್ತಿ ಒಂದೆ ಕಲೆಯಿಂದ ಪರಿಪೂರ್ಣ,
ಆ ಕಳೆಯೂ ಒಮ್ಮೆ ಇತ್ತು, ಒಮ್ಮೆ ಇಲ್ಲ
ಕಮಲಳ ತೋಟದಿ ಎಲ್ಲ ನಶ್ವರ.

ನೋಡು ಶಶಿ! ಇದು ನಿರ್ಜನ ಪ್ರದೇಶ. ನಿನ್ನೊಂದಿಗೆ ನಾನು ಗೌಪ್ಯವಾದ ಮಾತುಗಳನ್ನಾಡಬೇಕೆಂದಿರುವೆನು. ನೀನು ನಿನ್ನ ರೂಪ ಗೌರವದ ಅಹಂಕಾರದಿಂದ ಎಲ್ಲ ಕಡೆಗಳಲ್ಲಿಯೂ ರೂಪವನ್ನು ವರ್ಷಿಸ ಕೂಡದು. ಪುತ್ರಶೋಕ ಪೀಡಿತಳಾದ ಮಾತೆಯು ಎದೆ ಬಡಿದುಕೊಳ್ಳುತ್ತ ನಿನ್ನ ಕಡೆ ನೋಡಿ ಅಳುವಾಗ ನೀನು ನಿನ್ನ ರೂಪವನ್ನು ಅವಳಿಗೆ ತೋರಿ

ಏನುಮಾಡುವೆ ? ಆಗ, ಕಲಂಕಿನಿ! ನಿನ್ನ ರೂಪರಾಶಿಯನ್ನು ನೀನು ದೊಡ್ಡ ಮೋಡಗಳ ಹಿಂದೆ ಮುಚ್ಚಿಡಬೇಕು. ಸಂಸಾರ ಜ್ವಾಲೆಯಿಂದ ತಪ್ತರಾದವರು ನಿನ್ನ ದರಬಾರಿಗೆ ಬಂದು ದೂರು ಹೇಳುವಾಗ ನೀನು ನಿನ್ನ ಸೌಂದರ್ಯ ವಿಕಾಸವನ್ನು ಅವರೆದುರಿಗೆ ತೋರಬೇಡ. ಏಕೆಂದರೆ ಸಂಸಾರ ದಗ್ಧರಾದವರಿಗೆ ನಿನ್ನ ಸೌಂದರ್ಯವು ತೀವ್ರ ವಿಷವಾಗಿರುವುದು. ಕೋಪದಿಂದ ಅವರೊಂದಿಗೆ ಸಂಭಾಷಿಸು. ಅವರಿಗೆ ಎಲ್ಲದರಲ್ಲಿಯೂ ತಿರಸ್ಕಾರ ಉಂಟಾಗಿದೆ. ಯಾರ ಪ್ರೀತಿಯನ್ನೂ ಅವರು ಸಹಿಸಲಾರರು. ಮತ್ತೆ ಕೇಳು! ಯಾರು ಲೋಕದ ಎಲ್ಲ ಸುಖಗಳನ್ನೂ ಸಂಪೂರ್ಣವಾಗಿ ಭೋಗಿಸಿ ಆತ್ಮತ್ಯಾಗಕ್ಕಾಗಿ ಪೂರ್ಣ ಸಿದ್ಧರಾಗಿರುವರೊ ಅಂತಹರಿಗೆ ವ್ಯರ್ಥವಾಗಿ ಆಸೆಯನ್ನು ತೋರಿ ಸಂತೈಸಲೆತ್ನಿಸಬೇಡ. ನಿನ್ನ ಮೇಲೆ ಈಗ ನನ್ನ ಏಕಮಾತ್ರ ಅಧಿಕಾರವಿರುವುದು. ಈಗ ನೀನು ಅನ್ಯರನ್ನು ಹೇಗೆ ಸಂತೈಸುವೆ? ಕಮಲಾಕಾಂತನಿಗೆ ಸಮಯ - ಅಸಮಯಗಳಿಲ್ಲ, ಘಟನೆ - ವಿಘಟನೆಗಳಿಲ್ಲ, ಸುಖ ದುಃಖಗಳಿಲ್ಲ. ನೀನು ಯಾವಾಗಲೂ ನನ್ನ ಬಳಿ ಇರಬೇಕು. ನಿನ್ನ ಆತ್ಮ ಚರಿತ್ರೆಯನ್ನು ಹೇಳಬೇಕು. ನನ್ನ ಮಾತುಗಳನ್ನು ಕೇಳಬೇಕು. ಅವುಗಳನ್ನು ನನ್ನ ಹೃದಯದಲ್ಲಿ, ನನ್ನ ಅಸ್ಥಿಮಜ್ಜೆಗಳೊಂದಿಗೆ ಸೇರಿಸಿಕೊಳ್ಳಬೇಕು. ಮತ್ತೆ ಬೆಳ್ದಿಂಗಳ ರಾತ್ರಿಯಲ್ಲಿ ನನ್ನೊಂದಿಗೆ ಸೇರಲು ನೀನು ಬರಬೇಕು. ಕೋಮಲಕಾಂತಿಯನ್ನಿಟ್ಟುಕೊಂಡು ಕತ್ತಲಲ್ಲಿ ಹೊರಬೀಳಬೇಡ. ಪ್ರಿಯೆ, ನನಗೆ ಈ ದಿನವು ಎಷ್ಟು ಸುಖಕರವಾಗಿದೆ. ನಿನ್ನ ಹೊರತು ಅದನ್ನಾರು ತಿಳಿಯಬಲ್ಲರು ? ನೋಡು, ಇಂದಿನಿಂದ ಪ್ರತಿ ತಿಂಗಳಲ್ಲಿಯೂ, ಪ್ರತಿ ತಿಂಗಳ ಕೊನೆಯಲ್ಲಿ, ಇದೇ ಗಂಗಾತಟದಲ್ಲಿ ತೃಣಾವೃತವಾದ ಭೂಮಿಯ ಮೇಲೆ ನಾನು ರಾತ್ರಿಯನ್ನು ಕಳೆಯುವೆನು. ಆದರೆ ಜ್ಞಾಪಕವಿರಲಿ, ನೀನು ಪ್ರತಿ ಪೂರ್ಣಿಮೆಯ ದಿನವೂ ಹಠಾತ್ತಾಗಿ ನನ್ನ ಬಳಿಗೆ ಬರಕೂಡದು. ಪಂಚಾಂಗದವರ ಹತ್ತಿರ ಮುಹೂರ್ತವನ್ನು ಕೇಳಿ, ಬಳಿಕ ಕಮಲಾಭಿಸಾರಿಣಿಯಾಗಿ ಬಾ. ಇಲ್ಲವಾದರೆ ಎಂದಾದರೊಂದುದಿನ ರಾಹುವು ದಾರಿಯಲ್ಲಿ ನಿನ್ನ ಮುಖವನ್ನು ಕಪ್ಪುಮಾಡಿ ನಿನಗೆ ಕಷ್ಟವೀಯಬಹುದು. ಇನ್ನು ಇದೇ ವಿವಾಹ ರಾತ್ರಿಯಲ್ಲಿ ನವ ವಧುವಿಗೆ ಅಧಿಕವಾಗಿ ಉಪದೇಶಿಸುವುದು ಅಧರ್ಮವೆನಿಸುವುದು. ಸುತರಾಂ ಅಲಮತಿ ವಿಸ್ತರೇಣ !

ಈಗ ಒಂದು ಬಾರಿ ಕಮಲ - ಶಶಿಯ ನಿಜವಾಸಸ್ಥಾನದಲ್ಲಿ ಕೋಗಿಲೆಯು ಪಂಚಮಸ್ವರದಲ್ಲಿ 'ಕುಹು' - ಎನ್ನಲಿ.

ಇನ್ನು, ಶಶಿ! ಒಂದು ಬಾರಿ ಈ ಮರ್ತ್ಯಲೋಕಕ್ಕಿಳಿದು ಗಂಗಾ ತರಂಗಗಳ ಮೇಲೆ ಅಪ್ಸರೆಯಂತೆ ನರ್ತಿಸು, ನೋಡೋಣ! ಒಂದು ಬಾರಿ ಕಾರ್ಮೋಡಗಳ ಹಿಂದಕ್ಕೆ ಸರಿದು ಓಡಿಬಂದು ನನಗೆ ಮುಖತೋರು! ಒಂದು ಬಾರಿ ಅನಂತವಾದ ಗಗನದಲ್ಲಿ ಅನಂತ ಪಥಗಳಲ್ಲಿ ಸಂಚರಿಸು! ಒಂದು ಬಾರಿ ಗಂಭೀರವಾದ ಮೇಘಗಳನ್ನು ಛಿದ್ರಗೊಳಿಸಿ ಅವುಗಳ ಸಂದಿನಿಂದ ನನ್ನ ಮೇಲೆ ಮಧುರವಾದ ನಿನ್ನ ದೃಷ್ಟಿ ಪಾತವಾಗುವಂತೆಮಾಡು, ನೋಡೋಣ! ಒಂದು ಬಾರಿ ನಕ್ಷತ್ರಗಳಲ್ಲಿ ಪರಸ್ಪರ ಸಂಗ್ರಾಮವಾಗುವಂತೆಮಾಡಿ, ಅವೆರಡು ದಲಗಳನ್ನೂ ಓಡಿಸಿ ವೇಗದಿಂದ ನೀನು ಓಡಿಹೋಗು ನೋಡೋಣ! ಒಂದು ಬಾರಿ, ಓಡಿದ ಆಯಾಸದಿಂದ ಬೆವರು ಹನಿಗಳಿಂದ ಸುಶೋಭಿತಳಾಗಿ, ಮಸ್ತಕದ ಮೇಲಿರುವ ಅವಕುಂಠನವನ್ನು ತೆರೆದು ಗಗನ ಗವಾಕ್ಷದಲ್ಲಿ ಸ್ಥಿರ ದೃಷ್ಟಿಯಿಂದ ಕುಳಿತು ವಾಯುಸೇವನೆ ಮಾಡು, ನೋಡೋಣ! ಒಂದುಬಾರಿ ಅಜಸ್ರ ಸುಧಾವರ್ಷಣಮಾಡಿ ಚಕೋರ ಚಕೋರಿಗಳನ್ನು ತೃಪ್ತಿಗೊಳಿಸು, ನೋಡೋಣ! ಒಂದು ಬಾರಿ ಈ ಶುಭಕ್ಷಣದಲ್ಲಿ ಕಮಲಾಕಾಂತನ ಹೃದಯದಲ್ಲಿ ಉದಯಿಸು! - ಕಮಲಾಕಾಂತನು ಇನ್ನು ಮಲಗುವನು.

ಶಶಿ! ಇದೇನು? ನೀನು ಕ್ಷೀರಸಾಗರ ಕನ್ಯೆಯಾಗಿ, ತ್ರಿಭುವನ ವಿಹಾರಿಣಿಯಾಗಿಯೂ ಸ್ವಭಾವ ಸುಲಭವಾದ ಅಭಿಮಾನಕ್ಕೆ ವಶಳಾಗುವುದೆ? ಕಮಲಾಕಾಂತನು ಯಾವ ದೋಷವನ್ನೂ ಮಾಡಿಲ್ಲ. ಸ್ತ್ರೀ ಪುರುಷ ಭೇದದ ಜಟಿಲತೆಯನ್ನು ನಿವಾರಿಸುವುದಕ್ಕಾಗಿ ಉದಾಹರಣೆಗೋಸ್ಕರ ನಾನು ಒಂದು ಬಾರಿ ಪ್ರಸನ್ನಳ ಹೆಸರನ್ನೆತ್ತಿದುದು – ಅಷ್ಟೆ - ಆದಕ್ಕಾಗಿ ನೀನು ಈ ರಾತ್ರಿಯಲ್ಲಿ ಇಷ್ಟು ಅಭಿಮಾನವನ್ನು ತೋರುವುದು ಸರಿಯಲ್ಲ! ನೋಡು, ನೀನು ಕಲಂಕಿನಿ, ಆದಾಗ್ಗೂ ನಾನು ನಿನ್ನನ್ನು ವಿವಾಹವಾಗುವೆನೆಂದು ಮೊದಲಿಂದ ನಾನು Lunatic* (ಲ್ಯೂನಟಿಕ್) ಎಂಬ ಹೆಸರನ್ನು ಧರಿಸುವೆನು. ಜ್ಯೋತಿರ್ವಿದರು ನೀನು ಪಾಷಾಣಿ ಎಂದು ಹೇಳುವರು.

* Lunatic ಚಂದ್ರಗ್ರಸ್ತ, ಹುಚ್ಚ.

ಆದಾಗ್ಗೂ ನಾನು ನಿನ್ನನ್ನು ಮದುವೆಯಾದೆನು. ಅವರು ನಿನ್ನಲ್ಲಿ ಮನುಷ್ಯತ್ವವಿಲ್ಲೆಂದು ಹೇಳಿದರು. ಆದಾಗ್ಗೂ ನಾನು ನಿನ್ನನ್ನು ಸ್ವೀಕರಿಸಿದೆನು. ಇನ್ನೂ ಕೋಪವೆ? - ಹಾಗಾದರೆ ಈ ಸಂಸಾರಗರಲ - ಖಂಡನಗಿರಿ - ತರು - ಶಿರೋಮಂಡನ ಕಿರಣ • ಚರಣಗಳನ್ನು ನನ್ನ ತಲೆಯ ಮೇಲಿಟ್ಟುಬಿಡು! ಬೇಕಾದರೆ ಈ ಅನಂತನೀಲ ವೃಂದಾವನದಲ್ಲಿ ಒಂದು ಬಾರಿ ಮೋಡಗಳ ಪರದೆಯನ್ನು ತೆರೆದು ಮಾನಿನಿಯಾದ ರಾಧೆಯಾಗಿ ಕುಳಿತುಕೊ. ಒಂದು ಬಾರಿ ನಾನು ಸ್ತ್ರೀಯ ಕಾಲುಗಳನ್ನು ಹಿಡಿದು ನನ್ನ ಜೀವನವನ್ನು ಸಫಲಗೊಳಿಸುವೆನು.† ನಾನು ನೂರಾರು ಪಾಪಗಳನ್ನು ಮಾಡಿದ್ದರೂ ಇಂದು ನಿನ್ನ ಮೂಲಕ ಎಲ್ಲ ಪಾಪಗಳಿಗೂ ಪ್ರಾಯಶ್ಚಿತ್ತವಾಗಲಿ! ನೀನು ನನ ಚಾಂದ್ರಾಯಣಕ್ಕೆ ಚಂದ್ರಫಲಕಳಾಗು. ನನ್ನನ್ನು ವೈತರಣಿಯಿಂದ ದಾಟಸುವ ಗೋವು ಆಗು!

ನನ್ನ ಮಾತು ಕೇಳುವುದಿಲ್ಲವೇನು? ಹಾಗಾದರೆ ನಾನು ನೂರಾರು, ಸಾವಿರಾರು ವಿವಾಹಗಳನ್ನು ಮಾಡಿಕೊಳ್ಳುವೆನು. ಈಗ ಕಮಲಾಕಾಂತನು ನೂತನ ವಿವಾಹದ ರೀತಿ ಪದ್ಧತಿಗಳನ್ನು ಕಲಿತಿರುವನು. ಅವನು ಈಗ ತಾನೆ ವರ, ಕರ್ತಾ, ಪುರೋಹಿತ, ಘಟಕನಾಗುವುದನ್ನೂ ಕಲಿತಿದ್ದಾನೆ. ಕಮಲಾಕಾಂತನು ಈಗ ಎಲ್ಲಿಬೇಕಾದರಲ್ಲಿ ವಿವಾಹವಾಗಬಲ್ಲನು. ನವಪಲ್ಲವಿತ ಶಾಖಾಸ್ಕಂಧಗಳು ಮುಂದಕ್ಕೆ ಬಗ್ಗಿ ಕರಪತ್ರ ಸಂಚಾಲನದಿಂದ್ನ ಆಹ್ವಾನವನ್ನೀಯುವಾಗ ಆಗಲೆ ನಾನು ಅದನ್ನು ಮದುವೆಯಾಗಿಬಿಡುವೆನು. ಕಮಲವು ಸರೋವರದ ದರ್ಪಣದಲ್ಲಿ ತನ್ನ ಕುತ್ತಿಗೆಯನ್ನು ಬಾಗಿಸಿ ಮುಖವನ್ನು ನೋಡಿಕೊಂಡು ನಗುವಾಗ (ಅರಳುವಾಗ) ಆಗಲೆ ಈ ಸ್ಥಲ-ಕಮಲವು ಜಲ ಕಮಲವನ್ನು ವಿವಾಹವಾಗುವುದು. ನದಿಯು ಇಂದ್ರಧನುಸ್ಸಿನ (ಕಾಮನಬಿಲ್ಲಿನ) ಅಂಚನ್ನು ಹಿಡಿದು ಅದರೊಂದಿಗೆ ಆಟವಾಡುತ್ತಿರುವಾಗ, ಆ ಧನಸ್ಸನ್ನು ಸ್ಪರ್ಶಿಸುವೆನೆಂಬ ಶಪಥವನ್ನುಮಾಡಿ ನಾನು ನದಿಯನ್ನೆ ಚಿರಸಂಗಿನಿಯಾಗಿ ಮಾಡಿಕೊಳ್ಳುವೆನು. ಯಾವಾಗ ಅನಂತ

---

† ನಮಗೆ ತಿಳಿದು ಬಂದಿರುವುದರಲ್ಲಿ ಕಮಲಾಕಾಂತನು ಒಂದು ದಿನ ಪ್ರಸನ್ನ ಗೌಳಗಿತ್ತಿಯ ಕಾಲನ್ನು ಹಿಡಿದಿದ್ದನು. - ಆದರೆ ಅದು ಕೇವಲ ಹಾಲಿಗಾಗಿ.

—ಶ್ರೀ ಭೀಷ್ಮದೇವ.

(ಬೆಳ್ದಿಂಗಳು) ಮತ್ತು ರತ್ನಾಭರಣ (ನಕ್ಷತ್ರ ಬಿಂಬ) ಗಳಿಂದ ಭೂಷಿತಳಾಗಿ ನಿದ್ರಿಸುವಳೊ ಆಗಲೆ ಅವಳ ಪಾಣಿಗ್ರಹಣಮಾಡಿ, ಮೆಲ್ಲ ಮೆಲ್ಲಗೆ ಎಚ್ಚರ ಗೊಳಿಸಿ, ಅವಳು ಅರ್ಧಾಂಗಿಯಾಗುವಂತೆ ಮಾಡುವೆನು. ಕುಂಜಲತೆಯು ಪುಷ್ಪಗುಚ್ಛಗಳಿಂದಲಂಕೃತವಾಗಿ ಶ್ಯಾಮಚಿಕುರ ರಾಶಿಯನ್ನು ನಾಲ್ಕು ದಿಕ್ಕುಗಳಲ್ಲಿಯೂ ಹರಡಿ ನಿಸ್ತಬ್ಧಭಾವದಿಂದ ಕೋಮಲ ಸೂರ್ಯ ಕಿರಣ ದೊಂದಿಗೆ ತೃಪ್ತಿಯನ್ನು ತೋರ್ಪಡಿಸುವಾಗ, ನಾನು ಅದರ ಕೇಶಗುಚ್ಛ ಶಯ್ಯೆಯ (ಪೃಥ್ವಿಯ) ಮೇಲೆ ಮಲಗಿರುವ ಗಂಗೆಯ ಶ್ವೇತವಸ್ತ್ರ ಮಧ್ಯದಲ್ಲಿ ನನ್ನ ಮಸ್ತಕವನ್ನಿಟ್ಟು ಅದಕ್ಕೆ ವರನಾದ ನನ್ನ ಪರಿಚಯವನ್ನು ಮಾಡಿಸುವೆನು. ಕಮಲಾಕಾಂತ ಚಕ್ರವರ್ತಿಯು ಈಗ ವಿವಾಹವಾಗುವು ದನ್ನರಿತಿದ್ದಾನೆ! ಅವನೇ ಈಗ ಘಟಕನ ಕೆಲಸವನ್ನು ಬಲ್ಲವನಾಗಿದ್ದಾನೆ! ಈಗ ಅವನು ಅದಕ್ಕಾಗಿ ಯಾರ ಉಪಾಸನೆಯನ್ನೂ ಮಾಡಬೇಕಾಗಿಲ್ಲ. ಪಾಠಕರೆ, ಈ ನನ್ನ ಅಭಿಪ್ರಾಯವು ನಿಮಗೆ ಸರಿತೋರದಿದ್ದರೆ, ನಾನು ಹೇಳುವಂತೆ ನೀವು ವಿವಾಹ ಮಾಡಿಕೊಳ್ಳಿರಿ. - ನಾನೇ ಘಟಕನಾಗಿ, ನಿಮ್ಮ ಮನಸ್ಸಿಗೆ ತಕ್ಕಂಥಾ ಸಾಮುಗ್ರಿಯನ್ನು ದೊರಕಿಸಿಕೊಡುವೆನು.

ಇತಿ,

— **ಶ್ರೀ ಕಮಲಾಕಾಂತ ಚಕ್ರವರ್ತಿ.**



## ೭. ವಸಂತದ ಕೋಗಿಲೆ

ವಸಂತ ಕೋಗಿಲೆ! ನೀನು ಸಭ್ಯಪ್ರಾಣಿ. ಹೂಗಳು ಅರಳಿದಾಗ, ದಕ್ಷಿಣದ ಗಾಳಿಯು ಬೀಸುವಾಗ, ಈ ಜಗತ್ತು ಸುಖದ ಸ್ಪರ್ಶದಿಂದ ಪುಳಕಿತವಾದಾಗ-ಆಗ-ನೀನು ಬಂದು ರಸಿಕತೆಯನ್ನಾರಂಭಿಸುವಿ. ಮತ್ತೆ ದಾರುಣವಾದ ಶೀತಕಾಲದಲ್ಲಿ ಜೀವಲೋಕದಲ್ಲಿ ಜನರು ಗಡಗಡನೆ ಕಂಪಿಸುವಾಗ, ನೀನು ಎಲ್ಲಿರುವೆ? ಬಾಪೂ! ಶ್ರಾವಣಮಾಸದ ವರ್ಷಧಾರೆಯಿಂದ ನಮ್ಮ ಹರಕಲು ಮುರುಕಲು ಗುಡಿಸಲುಗಳನ್ನು ನದಿಯು ಹೊತ್ತುಕೊಂಡು ಹೋಗುವಾಗ, ಮಳೆಯ ಹನಿಗಳಿಂದ ನೆನೆದು ಒದ್ದೆಮುದ್ದೆಯಾದ ಕಾಗೆಗಳು ಕೂಗುತ್ತಿರುವಾಗ,-ಆಗ-ನಿನ್ನ ಈ ಪೂರ್ಣ ಕೃಷ್ಣ ಕಾಂತಿಯುಳ್ಳ ಕಮನೀಯವಾದ ಶರೀರವು ಎಲ್ಲಿರುವುದು? ನೀನು ವಸಂತದ ಕೋಗಿಲೆ - ಶೀತ ವರ್ಷಾಕಾಲಗಳಿಗೆ ಸಂಬಂಧಿಸಿಲ್ಲ!

ಕೋಪಿಸಿಕೊಳ್ಳಬೇಡ - ನಿನ್ನಂತೆಯೆ ನಮ್ಮಲ್ಲಿ ಮಿತವಾದಿಗಳು – ಮಧ್ಯಕಾಲದಲ್ಲಿ ಬರುವವರನೇಕರು. ನಸೀರಾಮುಬಾಬುವಿನ ಮನೆಗೆ ಸುಗ್ಗಿಯ ಬೆಳೆಯು ಬಂದಾಗ ಮಾನವ-ಕೋಗಿಲೆಗಳು ಅವನ ಗೃಹಕುಂಜದಲ್ಲಿ ತುಂಬಿಬಿಡುವವು. ಹಲವು ಅಕ್ಷತೆ, ನಾಮ, ಬೈತಲೆ, ಕನ್ನಡಕಗಳ ಸಂತೆಯು ಆಗ ಅಲ್ಲಿ ನೆರೆಯುವುದು. ಆಗ ಕವಿತೆ, ಶ್ಲೋಕ, ಗೀತೆ, ಅರ್ಧ ಇಂಗ್ಲೀಷು, ಪೂರ್ಣ ಇಂಗ್ಲೀಷು, ಹರಕಲು ಮುರುಕಲು ಇಂಗ್ಲೀಷು, ಅಲ್ಲಿ ಇಲ್ಲಿ ಕದ್ದ ಇಂಗ್ಲೀಷು-ಇವುಗಳ ನಾದದಿಂದ-ನಸೀರಾಮುಬಾಬುವಿನ ಬೈಠಕಖಾನೆಯಲ್ಲಿ "ಗುಟರಗೂಂ"-"ಗುಟರಗೂಂ" ಎಂಬ ನಾದದಿಂದ ತುಂಬಿರುವ ಪಾರಿವಾಳಗಳ ಗೂಡಿನಂತೆ ವಿಕಾರಗೊಳ್ಳುವುದು. ಯಾವಾಗ ಬಾಬುವಿನ ಮನೆಯಲ್ಲಿ ನೃತ್ಯ-ಗೀತ, ಉತ್ಸವ ಮತ್ತು ಹಬ್ಬಗಳಾಗುವವೊ ಆಗ ಗುಂಪುಗುಂಪಾಗಿ ಮಾನವ ಕೋಗಿಲೆಗಳು ಬಂದು ಅವನ ಮನೆಯನ್ನು ಮುತ್ತುವವು. ಕೆಲವು ತಿನ್ನುವವು, ಕೆಲವು ಹಾಡುವವು, ಕೆಲವು ನಗುವವು, ಕೆಲವು ಕೆಮ್ಮುವವು, ಕೆಲವು ತಂಬಾಕು ಸೇದುವವು, ಕೆಲವು ನಗುತ್ತ ಅಲೆದಾಡುವವು, ಕೆಲವು ಅಫೀಮಿನ ಮಾತ್ರೆಯನ್ನು ಸೇವಿಸುವವು, ಕೆಲವು ಮೇಜಿನ

ಕೆಳಗೆ ಹೊರಳಾಡುವವು. ನಸೀರಾಮುಬಾಬುವು ತೋಟಕ್ಕೆ ಹೋಗುವಾಗ ಮನುಷ್ಯ-ಕೋಗಿಲೆಗಳು ಇರುವೆಗಳು ಸಾಲಿಟ್ಟಂತೆ ಅವನೊಂದಿಗೆ ಹೋಗುವವು. ಆದರೆ ಅವಿಶ್ರಾಂತವಾಗಿ ಮಳೆಯಾದ ದಿನ-ನಸೀಬಾಬುವಿನ ಪುತ್ರನು ಅಕಾಲಮರಣಕ್ಕೆ ತುತ್ತಾದ ದಿನ ಆ ಕೋಗಿಲೆಗಳಲ್ಲೊಂದೂ ಅಲ್ಲಿ ಕಾಣುತ್ತಿರಲಿಲ್ಲ. ಆ ದಿನ ಕೆಲವರಿಗೆ ಆರೋಗ್ಯ ಸರಿಯಾಗಿರಲಿಲ್ಲ, ಆದ್ದರಿಂದ ಬರಲಾಗಲಿಲ್ಲ. ಕೆಲವರಿಗೆ ವಿಶೇಷ ಆನಂದ-ಮೊಮ್ಮಗನು ಹುಟ್ಟಿದ್ದನು. ಆದ್ದರಿಂದ ಬರಲಾಗಲಿಲ್ಲ. ಕೆಲವರಿಗೆ ರಾತ್ರಿಯೆಲ್ಲ ನಿದ್ರೆ ಬರಲಿಲ್ಲ, ಆದ್ದರಿಂದ ಬರಲಾಗಲಿಲ್ಲ. ಕೆಲವರು ಸಮಗ್ರ ರಾತ್ರಿ ನಿದ್ರೆಯಿಂದ ಮಲಗಿಬಿಟ್ಟರು, ಆದಕ್ಕೋಸ್ಕರ ಬರಲಾಗಲಿಲ್ಲ. ನಿಜವಾದ ಸಂಗತಿ ಏನೆಂದರೆ ಆ ದಿನ ಮಳೆಗಾಲ, ವಸಂತ ಕಾಲವಲ್ಲ. ವಸಂತದ ಕೋಗಿಲೆಯು ಆ ದಿನ ಬರುವುದು ಹೇಗೆ ?

ಅಣ್ಣಾ, ವಸಂತ ಕೋಗಿಲೆ, ಅದು ನಿನ್ನ ದೋಷವಲ್ಲ. ನೀನು ಕೂಗು? ಈ ಅಶೋಕ ವೃಕ್ಷದ ಕೊಂಬೆಯ ಮೇಲೆ ಕುಳಿತು, ರಕ್ತಪುಷ್ಪಗಳ ರಾಶಿಯಲ್ಲಿ ನಿನ್ನ ಕಪ್ಪು ಶರೀರವನ್ನು, ಜ್ವಲಿಸುತ್ತಿರುವ ಕೆಂಡಗಳ ಮಧ್ಯದಲ್ಲಿರುವ ಕಪ್ಪು ಬದನೇಕಾಯಿಯಂತೆ ಮುಚ್ಚಿಕೊಂಡು, ಒಂದು ಬಾರಿ ನಿನ್ನ ಪಂಚಮಸ್ವರದಲ್ಲಿ-“ಕೂ-ಊ:” ಎಂದೇ ಕೂಗು. ನಿನ್ನಾ “ಕು-ಊ:”ರವವು ನನಗೆ ವಿಶೇಷವಾಗಿ ರುಚಿಸುತ್ತದೆ. ನೀನು ಸ್ವತಃ ಕಪ್ಪು-ಪರರಿಂದ ಪೋಷಿತನಾದವನು-ನಿನ್ನ ದೃಷ್ಟಿಯಲ್ಲಿ ಎಲ್ಲವೂ “ಕು”. ಆದ್ದರಿಂದ ಎಷ್ಟು ಸಲ ಬೇಕಾದರೂ “ಕು-ಊ”: ಎಂದು ಕೂಗು. ಪೃಥ್ವಿಯಲ್ಲಿರುವ ಸುಂದರವಾದ ವಸ್ತುಗಳನ್ನುನೋಡಿ ನಿನ್ನಮನಸ್ಸಿನಲ್ಲಿ ದ್ವೇಷವೂ ಹಿಂಸೆಯೂ ಈರ್ಷೆಯೂ ಉದಯಿಸಿದಾಗ, ಎತ್ತರವಾದ ಕೊಂಬೆಯಮೇಲೆ ಕುಳಿತು, ಗಟ್ಟಿಯಾಗಿ “ಕೂ-ಊ:” ಎಂದು ಕೂಗು – ಏಕೆಂದರೆ ನೀನು ಸೌಂದರ್ಯಶೂನ್ಯನು, ಪರಾನ್ನ ಪ್ರತಿಪಾಲಿತನು. ಯಾವಾಗ ನೋಡಿದರೂ,-ಸಂಧ್ಯಾಕಾಲದ ಗಾಳಿಯಿಂದ ಹೂ ಗೊಂಚಲುಗಳಿಂದ ಬಾಗಿ ಬಳುಕುವ ಲತೆಗಳು ಅಲುಗಾಡಲಾರಂಭಿಸಿದಾಗ, ಸುಗಂಧದ ತರಂಗಗಳೆದ್ದಾಗ-ಆಗ ಮಾತ್ರ “ಕು-ಊ:” ಎಂದು ಕೂಗಿ ಹೇಳು. ಮತ್ತೆ ಅಸಂಖ್ಯಾತ ಸುಗಂಧರಾಜಪುಷ್ಪಗಳು ಏಕಕಾಲದಲ್ಲಿ ಅರಳಿ ತಮ್ಮ ಸುಗಂಧದಿಂದ ತಾವೆ ಮತ್ತಾಗಿ ಮೆರೆಯುತ್ತ ಒಂದರ

ಮೇಲೊಂದು ಬೀಳುವಾಗ - ನೀನು ಅದೇ ಕೊಂಬೆಯಮೇಲೆ ಕುಳಿತು ಕೂಗು–"ಕು–ಊ:" ಎಂದು! ಮತ್ತೆ ಬಕುಲ ವೃಕ್ಷದ ಘನವಿನ್ಯಸ್ತ ಮಧುರ ಶ್ಯಾಮಲ ಸ್ನಿಗ್ಧೋಜ್ವಲ ಪತ್ರರಾಶಿಗಳ ಶೋಭೆಯು ವೃಕ್ಷದಲ್ಲಿ ಹಿಡಿಸಲಾರ ದಂತಾದಾಗ - ಪೂರ್ಣಯುವತಿಯರಾದ ಸುಂದರಿಯರ ಲಾವಣ್ಯದಂತೆ ನಗುತ್ತ ನಗುತ್ತ, ಬಳುಕುತ್ತ ಬಳುಕುತ್ತ, ಹಿಂದಕ್ಕೂ ಮುಂದಕ್ಕೂ ಓಲಾ ಡುತ್ತ, ಒಂದನ್ನೊಂದು ಆವೇಶದಿಂದ ಆಲಿಂಗಿಸುತ್ತಾ ಅವುಗಳ ಅಸಂಖ್ಯ ಅರಳಿದ ಹೂಗಳ ಸುವಾಸನೆಯೂ ಆಕಾಶದಲ್ಲಿ ಹರಡಿರುವಾಗ - ಆಗ ಮಾತ್ರ ನೀನು ಅದೇ ಮರದ ಆಶ್ರಯದಲ್ಲಿ ಕುಳಿತು, ಅದರ ಎಲೆಗಳ ಸ್ಪರ್ಶ ದಿಂದಲೆ ತಂಪುಮಾಡಿಕೊಂಡು ಅದರ ಗಂಧದಿಂದಲೆ ನಿನ್ನ ದೇಹವನ್ನು ಪವಿತ್ರಗೊಳಿಸಿಕೊಂಡು, ಅದೇ ಬಕುಲ ಕುಂಜದಿಂದ ನೀನು ಕೂಗು - "ಕು - ಊಃ" ಎಂದು. ಮತ್ತೆ ಶುಭ್ರಮುಖಿಯೂ ಶುದ್ಧ ಶರೀರಿಯೂ ಸುಂ ದರಿಯೂ ಆದ ನವಮಲ್ಲಿಕೆಯು ಸಂಧ್ಯಾಕಾಲದ ಹಿಮಕಣಗಳಿಂದ ಸಿಕ್ತ ವಾಗಿ ಪ್ರಖರವಾದ ತಾಪವು ಕಡಿಮೆಯಾದುದನ್ನು ಕಂಡು ನಿಧಾನವಾಗಿ ಮುಖವನ್ನು ತೆರೆಯಬೇಕೆಂದು ಸಾಹಸಪಡುತ್ತಿರುವಾಗ - ದಳದಳವಾಗಿ ಅಸಂಖ್ಯ ಅಕಲಂಕ ಪುಷ್ಪಗಳು ವಿಕಸಿತವಾಗಲಾರಂಭಿಸಿದಾಗ – ಭ್ರಮರ ಗಳು ಅವುಗಳ ರೂಪವನ್ನು ನೋಡಿ ಆದರಪೂರ್ಣವಾಗಿ ಕಂಠವನ್ನು ಸರಿಪಡಿ ಸಿಕೊಂಡು " ಗುನ್ ಗುನ್ " ಎಂದು ಭೋರ್ಗರೆಯುತ್ತಿರುವಾಗ - ಆಗ ಮಾತ್ರ – ಹೇ ಕಾಳಮುಖನೆ! "ಕು - ಊಃ" ಎಂದು ಕೂಗಿ ಹೃದಯದ ಜ್ವಾಲೆಯನ್ನು ನಿವಾರಿಸು. ಮತ್ತೆ ಯಾರಾದರೂ ಗೃಹಸ್ಥರ ಅಂಗಳದಲ್ಲಿ ರುವ ದಾಳಿಂಬೆಗಿಡದ ಕೊಂಬೆಯಮೇಲೆ ಕುಳಿತುಕೊಂಡು, - ಆ ಗೃಹದ ಪುಷ್ಪರೂಪಿಣಿಯರಾದ ಕನ್ಯೆಯರು ಆ ಲತೆಗಳ ದೋಲನವನ್ನೂ ಆ ಸುಗಂಧ ರಾಜಿಗಳ ಪ್ರಫುಲ್ಲತೆಯನ್ನೂ, ಆ ಮಲ್ಲಿಕೆಯ ನಿರ್ಮಲತೆಯನ್ನೂ ಏಕತ್ರ ಗೊಳಿಸಿ ಆಡುತ್ತಿರುವಾಗ - ಅವರ ಎದುರಿಗೆ ಇದೇ. ಪಂಚಮಸ್ವರದಲ್ಲಿ ಮನೆ ಯೆಲ್ಲ ಪ್ರತಿಧ್ವನಿಸುವಂತೆ - ಇಷ್ಟು ರೂಪ, ಇಷ್ಟು ರಸ, - ಇಷ್ಟು ಪವಿತ್ರತೆ ಇವುಗಳೆಲ್ಲ - "ಕು – ಊಃ" ಎಂದು ಕೂಗಿ ಹೇಳು. ಅದೇ ನಿನ್ನ ಜಯ - ಅದೇ ಪಂಚಮ ಸ್ವರ. ಇಲ್ಲವಾದರೆ ನಿನ್ನ "ಕು - ಊಃ" ಕೂಗನ್ನು ಯಾರೂ ಕೇಳುತ್ತಿರಲಿಲ್ಲ. ಈ ಪೃಥ್ವಿಯಲ್ಲಿ ಗ್ಯಾಲ್ಡ್‌ಸ್ಟನ್, ಡಿಸ್ರೇಲಿ ಪ್ರಭೃತಿ

ಗಳಂತೆ ನೀನು ಕೇವಲ ಬೊಬ್ಬಾಟದಿಂದಲೆ ಜಯವನ್ನು ಹೊಂದಿರುವೆ. ಇಲ್ಲವಾದರೆ ನಿನ್ನಾ ಕೃಷ್ಣವರ್ಣನ್ನು ಯಾರು ಪುರಸ್ಕರಿಸುತ್ತಿದ್ದರು? ಬೊಬ್ಬಾಟದಲ್ಲಿ ಅಷ್ಟು ಗುಣವಿಲ್ಲದಿದ್ದರೆ ಕೇವಲ ಕಾದಂಬರೀ (ನಾವೆಲ) ಲೇಖಕನಿಗೆ ರಾಜಮಂತ್ರಿಯ ಪದವಿಯು ಹೇಗೆ ಸಿಕ್ಕುತ್ತಿತ್ತು? ಮತ್ತೆ ಜಾನ್‌ಸ್ಟ್ಯುಯರ್ಟ್ ಮಿಲ್‌ನಿಗೆ ಪಾರ್ಲಿಮೆಂಟಿನಲ್ಲಿ ಸ್ಥಾನ ದೊರೆಯುತ್ತಿರಲಿಲ್ಲವೇ?

ಹಾಗಾದರೆ, ಕೋಗಿಲೆ, ನೀನೂ ಪ್ರಕೃತಿಯ ಮಹಾ ಪಾರ್ಲಿಮೆಂಟಿನಲ್ಲಿ ನಿಂತು ನಕ್ಷತ್ರಮಯವಾದ, ನೀಲ ಚಂದ್ರಾತಪ ಮಂಡಿತವಾದ, ಗಿರಿ ನದಿ - ನಗರ - ಕುಂಜಾದಿ ಬೆಂಚುಗಳಿಂದ ಸುಸಜ್ಜಿತವಾದ, ಈ ಮಹಾ ಸಭಾಗೃಹದಲ್ಲಿ ನಿನ್ನಾ ಮಧುರವಾದ ಪಂಚಮ ಸ್ವರದಲ್ಲಿ "ಕು - ಊಃ" ಎಂದು ಬೊಬ್ಬಿಡು. ಸಿಂಹಾಸನದಿಂದ ಹಿಡಿದು ಹೇಸ್ಟಿಂಗ್ಸ್‌ವರೆಗೆ ಎಲ್ಲರೂ ಕಂಪಿಸಿ ಬಿಡುವರು - "ಕು - ಊಃ!" - ಸರಿ - ಅದೇ ಸರಿ ನಿನ್ನ ಕಮನೀಯವಾದ ಕಂಠದಿಂದ "ಕು" (ಕೆಟ್ಟದ್ದು) ಎಂದು ಹೇಳಿದರೆ ಅದನ್ನೇ ಒಪ್ಪುವೆವು. ಮತ್ತೆ "ಸು" (ಒಳ್ಳೆಯದು) ಎಂದು ಹೇಳಿದರೆ ಅದನ್ನೆ ಒಪ್ಪುವೆವು. "ಕು" ಹೊರತು ಏನಿದೆ? ಎಲ್ಲವು "ಕು!" ಲತೆಗಳು ಕಂಟಕಮಯವಾಗಿವೆ; ಕುಸುಮಗಳಲ್ಲಿ ಕೀಟಗಳಿವೆ, ಗಂಧದಲ್ಲಿ ವಿಷವಿದೆ. ಪರ್ಣಗಳು ಶುಷ್ಕವಾಗುವುವು. ರೂಪವು ವಿಕಾರ ಹೊಂದುವುದು. ಸ್ತ್ರೀ ಜಾತಿಯು ವಂಚನೆಯನ್ನರಿತಿದೆ. "ಕು - ಊಃ" ವೇ ಸರಿ. ನೀನು ಹಾಡು. ಆದರೆ ನೀನು ಇದೇ ಪಂಚಮ ಸ್ವರದಲ್ಲಿ ಹೇಳಿದಾಗ ಮಾತ್ರ ನಾವು "ಕು" ವನ್ನು ಒಪ್ಪುವೆವು. - ಅದೇ ಕುಕ್ಕುಟ (ಕೋಳಿ) ಬಾಬಾಜಿಯು "ಕುಕ್ಕೂಕ್ಕೂಕೂ" ಎಂದು ಸುಖಪೂರ್ಣವಾದ ಪ್ರಭಾತ ನಿದ್ರೆಗೆ "ಕು" ಎಂದರೆ ನಾವು ಒಪ್ಪಲಾರೆವು. ಅದಕ್ಕೆ ಕಂಠವಿಲ್ಲ. ಬೊಬ್ಬೆಯಿಂದ ಜಗತ್ತಿನಲ್ಲಿ ಶಾಸನವನ್ನು ನಡೆಸಬಹುದು. ಆದರೆ ಕೇವಲ ಅರಚುವುದರಿಂದ ಏನೂ ಪ್ರಯೋಜನವಿಲ್ಲ. ಶಬ್ದ ಮಾತ್ರದಿದಂಲೆ ಜಯಿಸಬಲ್ಲವರಾರಾದರೂ ಇದ್ದರೂ ಅವರು ನಿನ್ನಂತೆ ಪಂಚಮ ಸ್ವರವುಳ್ಳವರಾಗಿರಬೇಕು. ಲಯ – ಪರದೆ ಅ ಥ ವಾ ಕಡೀ - ಮಧ್ಯಮಗಳಿಂದ ಪ್ರಯೋಜನವವೇ ಇಲ್ಲ. ಸರ್ ಜೇಮ್ಸ್ ಮ್ಯಾಕಿಂಟಾಷನು ತನ್ನ ವಕ್ತೃತ್ವದಲ್ಲಿ ಫಿಲಾಸಫಿಯ (ದರ್ಶನದ) ಕಡೀ ಮಧ್ಯಮ ರಾಗವನ್ನು ಸೇರಿಸಿ ಸೋತುಹೋದನು. ಮತ್ತೆ ಮೆಕಾಲೆಯ Rhetoricನ (ಅಲಂಕಾರದ)

ಪಂಚಮಸ್ವರವನ್ನು ಸೇರಿಸಿ ಜಯಶಾಲಿಯಾದನು. ಭಾರತ ಚಂದ್ರನೆಂ
ಕವಿಯು ಆದಿರಸ ಪಂಚಮವನ್ನೆ ಹಿಡಿದು ಜಯಹೊಂದಿದನು. ಕವಿಕಂಕ
ಋಷಭ (ಸ್ವರ) ವನ್ನು ಯಾರು ಕೇಳುವರು? ಈಗ ನೋಡು, ಜನ
ವೃದ್ಧ ಮಾತಾಪಿತರ ಸ್ವರ ಹೀನವಾದ ಬುಡಬುಡಿಕೆಯಿಂದ ಆವ ಫಲ
ಕಂಡುಬರುವುದು? ಆದರೆ ಬಾಬುವಿನ ಗೃಹಿಣಿಯು ಬಾಬುವಿನ ಸ್ವರವನ
ಸರಿಪಡಿಸುವುದಕ್ಕಾಗಿ ವೀಣೆಯ ಕಿವಿಯಂತೆ ಬಾಬುವಿನ ಕಿವಿಯನ್ನು ತಿರು
ಸುತ್ತ ಪಂಚಮದಲ್ಲಿ ತನ್ನ ಕಂಠವನ್ನೇರಿಸಿದಾಗ ಬಾಬುವು "ಪಿಡಿಂ - ಪಿಡಿ
ಎನ್ನಲಾರಂಭಿಸುವನೊ ಇಲ್ಲವೊ?

ಮತ್ತೆ ನಿನ್ನಸ್ವರಕ್ಕೆ ಪಂಚಮವೆಂದು ಏಕೆ ಹೇಳುವರೊ ನನಗೆ ತಿಳಿಯ
ಲಾಗಿದೆ. ಯಾವುದು ಮಧುರವೊ ಅದೇ ಪಂಚಮವೆ? ಎರಡು ಪಂಚವ
ಗಳು ನಿಜವಾಗಿ ಮಧುರವಾಗಿರುವವು - ಒಂದು ಸ್ವರದ ಪಂಚಮ. ಅರಗಿ
ಕಾಲಿನಮೇಲೆ ಕಟ್ಟಿರುವ ಸಣ್ಣ ಗೆಜ್ಜೆಗಳ ಪಂಚಮ (ಸ್ವರ) ವು ಮತ್ತೊಂದು
(ಇಲ್ಲಿ ಹೆಂಗಸರ ಕಾಲು ಗೆಜ್ಜೆಯ ಸ್ವರವೆಂದು ಕಮಲಾಕಾಂತನ ಅ
ಪ್ರಾಯ. - ಬ. ಶಿ.) ಆದರೆ ಸ್ವರವನ್ನು ಪಂಚಮದಲ್ಲಿ ಏರಿಸಿದರೆ ಚೆನ್ನಾ
ಗಿರುವುದು, ಮತ್ತೆ ಪಾದ ಪಂಚಮವು ಪಾದಗಳಿಂದ ಇಳಿಯುವಾಗ ಮಧ
ರವಾಗಿರುವುದು.

ಯಾವ ಸ್ವರವು ಪಂಚಮ, ಯಾವುದು ಸಪ್ತಮ, ಯಾವು
ಮಧ್ಯಮ, ಯಾವುದು ಗಾಂಧಾರವೆಂದು ನನಗೆ ತಿಳಿಸುವವರಾರು? ಇದ
ಹಸ್ತಿ ಘೋಷ, ಇದು ಹಯಧ್ವನಿ, ಅದು ಮಯೂರದ ಕೇಕಾರವ
ಮತ್ತೊಂದು ವಾನರಗಳ ಕಿಚಿಮಿಚಿ, - ಎಂದು ಹೇಳಿದರೆ ನನಗೇನೂ ತಿ
ಯುವುದಿಲ್ಲ. ನಾನು ಅಫೀಮಿನ ಸೇವಕನು - ಕೇಳುವುದು ಅಪಸ್ವರ - ಬ
ಯುವುದು ಅಪಸ್ವರ. ನನಗೆ ತಿಳಿದಿರುವುದು ಅಪಸ್ವರ,-ಧೈವತ, ಗಾಂಧಾ
ನಿಷಾದ, ಪಂಚಮ ಇವುಗಳನ್ನು ನಾನು ಲಕ್ಷಿಸುವುದಿಲ್ಲ. ಯಾರಾದರು
ಪಖಾವಜ್, ತಾನಪೂರಾ, ಚಿಕಾರಾ ಮೊದಲಾದ ವಾದ್ಯಗಳನ್ನು ತೆಗೆದ
ಕೊಂಡು ಬಂದು ನನಗೆ ಸಪ್ತಸ್ವರಗಳನ್ನು ತಿಳಿಸಲಾರಂಭಿಸಿದರೆ, ಆ
ಅವರ ಗರ್ಜನೆಯನ್ನು ಕೇಳಿ, ಮಂಗಲಾ ಎಂಬ ಹಸುವಿನ, ಆಗತಾ
ಹುಟ್ಟಿದ ಕರುವಿನ ಜ್ಞಾಪಕವು ಬರುವುದು - ಅದು ಕುಡಿಯದೆ ಉಳಿಸಿ

ಹಾಲಿನ ಕಡೆಗೆ ಧ್ಯಾನವು ಹೊರಟುಹೋಗುವುದು – ಸ್ವರವು ತಿಳಿಯದೆ ಇಲ್ಲ. ನಾನು ಗಾಯಕರನ್ನು ಕೃತಜ್ಞತಾಪೂರ್ವಕವಾಗಿ ಕಾಯ ಮನೋ ವಾಕ್ಯಗಳಿಂದ ಆಶೀರ್ವದಿಸುವೆನು, – "ಅವರು ಇನ್ನೊಂದು ಜನ್ಮದಲ್ಲಿ ಮಂಗಳಾ ಎಂಬ ಹಸುವಿನ ಕರುಗಳಾಗಿ ಹುಟ್ಟಲಿ!" ಎಂದು.

ಈಗ ಬಾ, ಪಕ್ಷಿ! ನೀನೂ ನಾನೂ ಒಂದು ಬಾರಿ ಪಂಚಮದಲ್ಲಿ ಹಾಡುವಾ! ನೀನು ಏನಾಗಿದ್ದೀಯೊ ನಾನೂ ಅದಾಗಿರುವೆನು. ನಾವಿಬ್ಬರೂ ಸಮಾನ ದುಃಖಿಗಳು – ಸಮಾನ ಸುಖಿಗಳು. ನೀನು ಈ ಹೂಗಳ ತೋಟದಲ್ಲಿ ಪ್ರತಿಯೊಂದು ವೃಕ್ಷದಮೇಲೆ ಆನಂದದಿಂದ ಹಾಡುತ್ತಾ ಸಂಚರಿಸುವೆ. ನಾನೂ ಈ ಸಂಸಾರದಲ್ಲಿ ಮನೆ ಮನೆಗೂ ತಿರುಗಿ, ನನ್ನ ಆನಂದದಲ್ಲಿ ಈ ದಪ್ತರವನ್ನು ಬರೆಯುತ್ತಾ ಅಲೆದಾಡುತ್ತಿರುವೆನು. ಬಾ, ಭ್ರಾತನೇ ಬಾ, ನಾವಿಬ್ಬರೂ ಸೇರಿ ಪಂಚಮದಲ್ಲಿ ಹಾಡೋಣ. ನಿನಗೂ ಯಾರೂ ಇಲ್ಲ, ಆನಂದವಿದೆ. ನಿನ್ನ ಬಂಡವಾಳವು ನಿನ್ನ ಕಂಠ, ನನ್ನ ಬಂಡವಾಳವು ಈ ಅಫೀಮಿನ ಗುಳಿಗೆ. ನಿನಗೂ ಈ ಜಗತ್ತಿನಲ್ಲಿ ಪಂಚಮ ಸ್ವರವು ರುಚಿಸುವುದು. ನೀನು ಪಂಚಮಸ್ವರದಲ್ಲಿ ಯಾರನ್ನು ಕರೆಯುವೆ? ಮತ್ತೆ ನಾನು ಯಾರನ್ನು ಕರೆಯುತ್ತಿರುವೆನು? ಹೇಳು, ಕೋಗಿಲೆ, ನಾನು ಯಾರನ್ನು ಕರೆಯುತ್ತಿರುವೆನು?

ಯಾವುದು ಸುಂದರವಾಗಿದೆಯೊ ಅದನ್ನು ಕರೆಯುವೆನು. ಯಾರು ಒಳ್ಳೆಯವರೊ ಅವರನ್ನು ಕರೆಯುವೆನು. ಯಾರು ನನ್ನ ಕೂಗನ್ನು ಕೇಳುವರೊ ಅವರನ್ನು ಕರೆಯುವೆನು. ಯಾವ ಆಶ್ಚರ್ಯಮಯವಾದ ಬ್ರಹ್ಮಾಂಡವನ್ನು ನೋಡಿ ಏನೂ ತಿಳಿಯದಂತಾಗಿರುವುದರಿಂದ, ವಿಸ್ಮಿತನಾಗಿರುವೆನೊ ಆ ಬ್ರಹ್ಮಾಂಡವನ್ನು ಕರೆಯುತ್ತಿರುವೆನು. ಈ ಅನಂತವೂ ಸುಂದರವೂ ಆದ ಜಗತ್ತಿನ ಶರೀರಕ್ಕೆ ಯಾವುದು ಆತ್ಮವೆನಿಸಿದೆಯೊ ಅದನ್ನು ಕರೆಯುತ್ತಿರುವೆನು. ನಾನೂ ಕೂಗುವೆನು. ನೀನೂ ಕೂಗುವೆ. ತಿಳಿದೇ ಕೂಗಲಿ, ತಿಳಿಯದೇ ಕೂಗಲಿ, ಎರಡೂ ಒಂದೇ. ನಿನಗೂ ಏನು ತಿಳಿಯದು, ನನಗೂ ಅಷ್ಟೆ. ನಿನ್ನ ಕೂಗೂ ಕೇಳಿಸುವುದು, ನನ್ನ ಕೂಗೂ ಕೇಳಿಸುವುದು. ಕೂಗನ್ನ ಕೇಳುವ ಕಿವಿಯಿದ್ದರೆ, ನನ್ನ ಕೂಗು ಅಲ್ಲಿಯವ

ರೆಗೆ ಏಕೆ ಕೇಳಿಸುವುದಿಲ್ಲ? ಬಾ ಭ್ರಾತನೆ, ಬಾ! ಇಬ್ಬರೂ ಸೇರಿ ಒಂದು ಬಾರಿ ಪಂಚಮ ಸ್ವರದಲ್ಲಿ ಕೂಗೋಣ.

ಒಳ್ಳೆಯದು ಹಾಗಾದರೆ "ಕು - ಊಃ ಕು – ಊಃ" ಎಂದು ಕೂಗು. ಸರಳವಾದ ಕಂಠದಿಂದ, ಕೋಗಿಲೆ ನೀನು ಒಂದು ಬಾರಿ ಕೂಗು. ಕಂಠ ವಿಲ್ಲದುದರಿಂದ ನಾನು ನನ್ನ ಮನಸ್ಸಿನ ಮಾತುಗಳನ್ನು ಹೇಳಲಾಗಲಿಲ್ಲ. ನಿನ್ನಾ ಭುವನ ಮೋಹನ -ಸ್ವರವು ನನಗಿದ್ದಿದ್ದರೆ ಹೇಳುತ್ತಿದ್ದೆನು. ನೀನೇ ನನ್ನ ಮನಸ್ಸಿನ ಮಾತುಗಳನ್ನು ಪ್ರಕಾಶವಾಗಿ ಈ ಕುಸುಮ ಕುಂಜಕಾನನ ದಲ್ಲಿ ಒಂದುಬಾರಿ ಹೇಳಿಬಿಡು, ಕೇಳುವೆನು.! ನಾನು ಏನು ಹೇಳಲಪೇಕ್ಷಿಸು ವೆನೊ ಅದನ್ನು ಹೇಳುವುದೇ ನನಗೆ ಗೊತ್ತಿಲ್ಲ. ನೀನೇ ಆ ಮಾತನ್ನು ಹೇಳಿಬಿಡು, ನಾನು ಕೇಳುವೆನು. ಕಮಲಾಕಾಂತನ ಮನಸ್ಸಿನ ಕಥೆಯನ್ನು ಈ ಜನ್ಮದಲ್ಲಿ ಹೇಳಲಾಗಲಿಲ್ಲ - ಮನಸ್ಸಿನಲ್ಲಿಯೆ ಉಳಿಯಿತು. ಕೋಗಿಲೆಯ ಕಂಠವನ್ನು ಹೊಂದಿದರೆ, ಯಾವುದಾದರೂ ಅಮಾನುಷ ಭಾಷೆಯನ್ನರಿತರೆ - ಮತ್ತೆ ನಕ್ಷತ್ರ ತಾರಾಗಣಗಳು ಕೇಳುವಂತಾದರೆ - ಆಗ ಮನಸ್ಸಿನ ಕಥೆ ಯನ್ನು ಹೇಳಬಲ್ಲೆನು! ಈ ನೀಲಾಂಬರದಲ್ಲಿ ಪ್ರವೇಶಿಸಿ, ಈ ನಕ್ಷತ್ರ ಮಂಡಲ ಮಧ್ಯದಲ್ಲಿ ಹಾರಿ, ಎಂದಿಗೂ ನಾನು ಸ್ವೇಚ್ಛೆಯಾಗಿ "ಕು - ಊಃ" ಎಂದು ಕೂಗಲಾರೆನೆ? ನಾನಂತೂ ಕೂಗಲಾಗುವುದಿಲ್ಲ. ಸರಿ. ಕೋಗಿಲೆ! ನೀನಾದರೂ ಒಂದು ಬಾರಿ ನನ್ನ ಪರವಾಗಿ ಕೂಗು, ನಾನು ಕೇಳುವೆನು.

ಇತಿ,

— ಶ್ರೀ ಕಮಲಾಕಾಂತ ಚಕ್ರವರ್ತಿ.

---

## ೮. ರಮಣಿಯರ ರೂಪ

ಅನೇಕ ಭಾಮಿನಿಯರು ರೂಪದಿಂದ ಗೌರವವನ್ನು ಹೊಂದಿ, ನೆಲದ ಮೇಲೆ ನಡೆಯದಂತಾಗಿರುವರು. ಅವರು ಭಾವಿಸುವರು - ತಾವು ಅಂಗಾಂಗಗಳನ್ನು ಕುಲಕಿಸುತ್ತ ಎಲ್ಲಿಗೆ ಹೋದರೂ ಅಲ್ಲಿ ಜನರ ಬುದ್ಧಿಯೆಲ್ಲಾ ಲಾವಣ್ಯದ ತರಂಗಗಳಲ್ಲಿ ಮುಳುಗಿಹೋಗುವುದು, - ಅಲ್ಲಿ ನೂತನ ಜಗತ್ತಿನ ಸೃಷ್ಟಿಯಾಗುವುದು - ಎಂದು. ಅವರಾ ರೂಪದ ಬಿರುಗಾಳಿಯು ಎಲ್ಲಿ ಬೀಸುವುದೋ ಅಲ್ಲಿ ಜನರ ಧೈರ್ಯವು ದಿಕ್ಕಾಪಾಲಾಗಿ ಹಾರಿಹೋಗುವುದು, ಧರ್ಮದ ದುರ್ಗವು ಭಂಗವಾಗಿ ಬೀಳುವುದು. ಪುರುಷರ ಮನಸ್ಸಿನ ರೂಪವಾದ ಸಾಗರದಲ್ಲಿ ಅವರಾ ರೂಪದ ಹೊಳೆಯು ಪ್ರವೇಶಿಸಿದಾಗ ಅದರಲ್ಲಿ (ಪುರುಷರ) ಕರ್ಮ ಜಹಜು, ಧರ್ಮನೌಕ, ಬುದ್ಧಿ - ದೋಣಿ ಎಲ್ಲವೂ ಕೊಚ್ಚಿಕೊಂಡು ಹೋಗುವವು. ಈ ಬಗೆಯಾದ ನಂಬಿಕೆಯು ಕೇವಲ ಸೌಂದರ್ಯಾಭಿಮಾನಿಗಳಾದ ಕಾಮಿನೀಕುಲದವರಲ್ಲಿ ಮಾತ್ರವೇ ಇರುವುದೆಂತಲ್ಲ; ಅನೇಕ ಪುರುಷರು ಕೂಡ ಮಹಿಳೆಯರ ಮೋಹಿನೀಶಕ್ತಿಗೆ ವಶರಾಗಿ, ಅವರಾ ರೂಪದ ಮಹಿಮೆಯನ್ನು ವರ್ಣಿಸಲಾರಂಭಿಸಿದಾಗ, ಅವರು ಹೇಳುವ ಮಾತುಗಳನ್ನು ಕೇಳಿದರೆ ಆಶ್ಚರ್ಯವಾಗದಿರದು. ಆಗ ಗಗನದಲ್ಲಿರುವ ತಾರಾಗಣಗಳು, ಪೃಥ್ವಿಯ ಪರ್ವತ, ಪಶುಪಕ್ಷಿ, ಕೀಟ ಪತಂಗ, ಲತಾಗುಲ್ಮಾದಿಗಳನ್ನು ತೆಗೆದುಕೊಂಡು ಉಪಮೆಗಾಗಿ ಹಿಗ್ಗುಮುಗ್ಗಾಗಿ ಎಳೆದಾಡುವರು. ಅವುಗಳಲ್ಲಿ ಅನೇಕ ವಸ್ತುಗಳನ್ನು ಅಪಮಾನಗೊಳಿಸಿ ಹಿಂದಕ್ಕಟ್ಟಿಬಿಡುವರು. ರೂಪವತಿಯ ಮುಖಮಂಡಲದೊಂದಿಗೆ ಹೋಲಿಸಲು ಅವರು ಪೂರ್ಣಚಂದ್ರನಿಗೆ ನಿಮಂತ್ರಣವನ್ನಿತ್ತು, ಮತ್ತೆ ಅವನು ಮಸಿಯಂತೆ ಮ್ಲಾನನಾಗಿರುವನೆಂದು ಕಳಂಕವನ್ನು ಹೊರಿಸಿ ಹಿಂದಕ್ಕೆ ಕಳುಹಿಸುವರು. ಆ ಬಡಪಾಯಿ ಚಂದ್ರನು ತನ್ನ ಕಳಂಕವನ್ನು ಎದೆಗಪ್ಪಿಕೊಂಡು, ಆ ರಾತ್ರಿಯಲ್ಲಿಯೆ ಆಕಾಶದಲ್ಲಿ ತನ್ನ ಕೆಲಸವನ್ನು ಮುಗಿಸಿಕೊಂಡು ಓಡಿ ಹೋಗುವನು. ಸುಂದರಿಯರ ಹಣೆಯಲ್ಲಿರುವ ಸಿಂಧೂರ ತಿಲಕ ಬಿಂದುವನ್ನು ನೋಡಿ ಅವರು ಉಷಃಕಾಲದ ದಿಗಂತದಲ್ಲಿ ಶೋಭಿಸುವ ತರುಣ

ಅರುಣನನ್ನು ನಿಂದಿಸುವರು. ಆದರಿಂದ ಸೂರ್ಯದೇವನು ಕೋಪಗೊಂಡು ಪೃಥ್ವಿಯನ್ನು ಸುಟ್ಟುಹೋಗುವನು. ರಸಮಯಿಯಾದ ರಮಣಿಯ ನಗು ಮುಖದಿಂದ ಸೂಸುವ ಹಾಸ್ಯರಾಶಿಯನ್ನು ನೋಡಿ, ಅದರ ಮುಂದೆ, ಅರಳಿದ ಕಮಲದ ಮೇಲೆ ಸೂರ್ಯ ಕಿರಣಗಳ ಅಥವಾ ಅರಳಿದ ಕನ್ನೈದಿಲೆಗಳ ಮೇಲೆ ಚಂದ್ರಕಿರಣಗಳ ನೃತ್ಯವು ನಿಂದ್ಯವಾದುದೆಂದು ಅವರು ಭಾವಿಸುವರು. ಅಂದಿನಿಂದ ಕಮಲ ಮತ್ತು ನೈದಿಲೆಗಳ ಮೇಲೆ ಕೀಟ ತರಂಗಗಳ ಅಧಿಕಾರವುಂಟಾಯಿತು. ಕಾಮಿನಿಯರ ಕಂಠಹಾರವನ್ನು ನೋಡಿ ರಾತ್ರಿಯಲ್ಲಿ ಹೊಳೆಯುವ ತಾರಾಗಣಗಳ ಮಾಲೆಯು ಪ್ರಕಾಶಹೀನವಾದುದೆಂದು ಅವರು ತಿರಸ್ಕಾರವನ್ನು ಸೂಚಿಸುವರು. ಇನ್ನು ಮುಂದೆ ಅವರು ಜ್ಯೋತಿಷ ಶಾಸ್ತ್ರದ ಅನುಶೀಲನವನ್ನುಬಿಟ್ಟು, ಸ್ವರ್ಣಕಾರನ (ಅಕ್ಕಸಾಲಿಗನ) ವಿದ್ಯೆಗೆ ಗಮನಕೊಡುವರೆಂದು ನನಗೆ ತೋರುತ್ತಿದೆ. ಅವರು ರಸರಂಗಮಯಿಯರಾದ ಲಲನೆಯರ ಶರೀರ ಸಂಚಾಲನದಲ್ಲಿ ಅವರಿಗೆ ಕಂಡುಬರುವ ಲಾವಣ್ಯ ಲೀಲೆಯ ಎದುರಿಗೆ, - ಬೆಳದಿಂಗಳ ರಾತ್ರಿಯಲ್ಲಿ ಮೆಲ್ಲಮೆಲ್ಲನೆ ಅಲುಗಾಡುವ ಪರ್ಣಗಳ ಮಧ್ಯೆ ಅಥವಾ ನಿಯತಕಂಪಿತ ಸಿಂಧುಹಿಲ್ಲೋಲದಲ್ಲಿ ಚಂದ್ರಿಕೆಯ ನರ್ತನವು ನಿಷ್ಪ್ರಯೋಜಕವಾದುದೆಂದು ಅವರ ಭಾವನೆಯಾಗಿರುವುದು. ಆದುದರಿಂದಲೇ ಅವರು ರಾತ್ರಿಯಲ್ಲಿ ನಿದ್ರಿಸುವರು, ಮತ್ತೆ ಗಡಿಗೆ ಕೊಡಗಳನ್ನು ತುಂಬಿಕೊಂಡು ಅವರು ನದಿಯನ್ನು ಒಣಗಿಸಲು ಯತ್ನಿಸುವರು. ಮತ್ತೆ ಅವರು ರಮಣಿಯರ ನಯನಗಳನ್ನು ವರ್ಣಿಸುವಾಗ ಸರೋವರದಲ್ಲಿ ಮಲಯ ಮಾರುತದಿಂದ ತಾಡಿತವಾಗಿ ಹಿಂದಕ್ಕೂ ಮುಂದಕ್ಕೂ ಅಲುಗಾಡುತ್ತಿರುವ ನೀಲ ಕಮಲವಾಗಲಿ - ಸಮಗ್ರ ವಿಶ್ವದಲ್ಲಿರುವ ಯಾವ ವಸ್ತುವೇ ಆಗಲಿ ಅವರಿಗೆ ಒಳ್ಳೆಯದೆಂದು ತೋರುವುದಿಲ್ಲ.

ಈ ನಾರಿಮಣಿಯರ ಸ್ತುತಿಪಾಠಕರ ಉಪಮಾನುಭವ ಶಕ್ತಿಯು ಪ್ರಶಂಸಾರ್ಹವಾಗಿದೆ. ಒಂದು ಕಣ್ಣು - ಅವರಾ ಕಲ್ಪನಾಪ್ರಭಾವದಿಂದ ಕೆಲವುವೇಳೆ ಖಂಜನ, ಚಕೋರಾದಿ ಪಕ್ಷಿಗಳನ್ನೂ, ಕೆಲವುವೇಳೆ ಜಲ ಜೀವಿಗಳಾದ ಮೀನುಗಳನ್ನೂ, ಕೆಲವು ಸಮಯದಲ್ಲಿ ಪದ್ಮ, ಪಲಾಶ, ಇಂದೀವರಾದಿ ವನಸ್ಪತಿಗಳನ್ನೂ ಮತ್ತೆ ಕೆಲವು ಸಮಯಗಳಲ್ಲಿ ಆಕಾಶದ ತಾರೆಗಳಂತಹ ಜಡಪದಾರ್ಥಗಳನ್ನೂ ಹೋಲುವುದು! ಚಂದ್ರನು ಕೆಲವುವೇಳೆ

ರಮಣಿಯರ ಮುಖಮಂಡಲಕ್ಕೂ ಕೆಲವುವೇಳೆ ಕಾಲಿನ ಉಗುರಿಗೂ ಉಪಮೆಯಾಗುವನು! *ಉಚ್ಚವಾದ ಕೈಲಾಸ ಶಿಖರ ಮತ್ತು ಕ್ಷುದ್ರವಾದ ಕಮಲದ ಮೊಗ್ಗು - ಇವೆರಡೂ ಒಂದೇ ಅಂಗದ ಉಪಮೆಗಳಾಗಿಬಿಡುವವು. ಆದರೆ ಅದರಿಂದಲೂ ತೃಪ್ತಿಯಾಗದೆ ದಾಳಿಂಬೆ, ಕದಂಬ, ಕರಿಕುಂಭ- ಈ ವಿಷಮ ಉಪಮೆಗಳೂ ಶೃಂಖಲಬದ್ಧವಾಗಿರುವವು. ಜಲಚರವೂ ಕ್ಷುದ್ರಪಕ್ಷಿಯೂ ಆದ ಹಂಸ, ಸ್ಥಲಚರವೂ ಬಹು ವಿಶಾಲದೇಹಿಯೂ ಆದ ಚತುಷ್ಪಾದ ಪ್ರಾಣಿ ಆನೆ-ಇವುಗಳ ಗಮನದಲ್ಲಿ ವೈಷಮ್ಯವಿರುವುದು ಸ್ವಾಭಾವಿಕವಾಗಿದೆ. ಆದರೆ ಕವಿಜನರ ದೃಷ್ಟಿಯಲ್ಲಿ ಇವೆರಡೂ ರಮಣಿಯರಿಂದ ತಮ್ಮ ನಡೆಯ ರೀತಿಯನ್ನು ಕಲಿತಿರುವವು! ಕೆಲವರು ಅಂತಹ ಆನೆಯ ನಡೆಯೊಂದಿಗೆ ಈ ಹಂಸಗಾಮಿನಿಯರ ಗತಿಯನ್ನು ತುಲನೆಮಾಡಲಿಚ್ಛೆಯಿಲ್ಲದೆ, ಆ ಆನೆಗಳ ಗುಂಪಿಗೆ ರಾಜನಾದ ಗಜರಾಜನ ಗತಿಯೊಂದಿಗೆ ತುಲನೆಮಾಡುವರು. ಆನೆಯು ಒಂದು ದಿನದಲ್ಲಿ ಬಹುದೂರ ನಡೆಯಬಲ್ಲದೆಂದು ಕೇಳಿದ್ದೇವೆ. ಅಶ್ವಾದಿ ಪ್ರಾಣಿಗಳು ಅಷ್ಟು ದೂರ ನಡೆಯಲಾರವಂತೆ! ಹಾಗಾದರೆ ದೂರ ಪ್ರಯಾಣಮಾಡಲಿಚ್ಛಿಸುವವರು ಈ ಗಜೇಂದ್ರಗಾಮಿನಿಯರನ್ನು ವಾಹನವಾಗಿ ಮಾಡಿಕೊಂಡು ಹೋಗುವುದಿಲ್ಲವೇಕೆ? ಎಲ್ಲಿಗೆ ರೈಲುಮಾರ್ಗವು ಇನ್ನೂ ಹೋಗಿಲ್ಲವೋ ಅಂತಹ ಸ್ಥಳಗಳಿಗೆ ಗಜೇಂದ್ರ ಗಾಮಿನಿಯರ ಮೇಲೆ ಅಂಚೆಯನ್ನು ಹೊರಿಸಿ ಕಳುಹಿಸಿದರೆ ಹೇಗಾದೀತು?

ನಾನೂ ಒಂದು ಕಾಲದಲ್ಲಿ ಕಾಮಿನೀಭಕ್ತನಾಗಿ ಕವಿಜನರಲ್ಲಿ ಗಣ್ಯನಾಗಿದ್ದೆನು. ಆಗ ನನಗೆ ಈ ಅಖಿಲ ಜಗತ್ತಿನಲ್ಲಿ ರಮಣಿಯಂತಹ ಸುಂದರವಾದ ವಸ್ತುವು ಬೇರೊಂದು ಕಾಣಿಸುತ್ತಲೆ ಇರಲಿಲ್ಲ. ಚಂಪಕ, ಕಮಲ ಕುಂದ, ಬಂಧುಜೀವ, ಶಿರೀಷ, ಕದಂಬ, ಗುಲಾಬಿ ಮೊದಲಾದ ಪುಷ್ಪಚಯಗಳು ಆಗ ನನಗೆ ಕಾಮಿನಿಯರ ಕಾಂತಿಯಿಂದ ಗ್ರಥಿತವಾದ ಕುಸುಮಮಾಲೆ

---

* ನಮ್ಮ ವಿವೇಚನೆಯಲ್ಲಿ ಚಂದ್ರನೊಂದಿಗೆ ನಖವನ್ನು ತುಲನೆಮಾಡುವುದು ಅತಿ ಸುಂದರವಾಗಿದೆ. ಏಕೆಂದರೆ ಅದರಿಂದ ಕವಿತೆಯಲ್ಲಿ ಉತ್ತಮ ಪದವಿನ್ಯಾಸವಾಗುವುದು. ಉದಾಹರಣೆ - "ನಖರ - ನಿಖರ - ಹಿಮುಖರ - ಕರಂಬಿತ - ಕೋಕಿಲ - ಕೂಜಿತ - ಕುಂಜ - ಕುಟೀರ" - ಇದು ನಮ್ಮ ನಿಜವಾದ ರಚನೆ.

—ಶ್ರೀ ಭೀಷ್ಮದೇವ.

ಯಂತೆ ಮನೋಹರವಾಗಿ ಕಾಣುತ್ತಿರಲಿಲ್ಲ. ಆಗ ವಸಂತದಲ್ಲಿ ಕುಸುಮವತಿಯಾದ ವಸುಮತಿಗಿಂತಲೂ ಕುಸುಮಮಯಿಯಾದ ಮಹಿಳೆಯೆ ನನಗೆ ಶೋಭಾಯಮಾನವಾಗಿ ಕಾಣುತ್ತಿದ್ದಳು. ಮಳೆಗಾಲದಲ್ಲಿ ಉಕ್ಕಿ ತರಂಗಮಯಿಯಾಗಿ ಹರಿವ ನದಿಗಿಂತಲೂ ರಸವತಿಯಾದ ಯುವತಿಯ ಪಕ್ಷವನ್ನೇ ವಿಶೇಷವಾಗಿ ವಹಿಸುತ್ತಿದ್ದವನು ನಾನು. ಆದರೆ ಈಗ ನನ್ನಲ್ಲಿ ಆ ಭಾವನೆಗಳಿಲ್ಲ, ನನಗೆ ದಿವ್ಯಜ್ಞಾನವು ಲಭಿಸಿರುವುದು. ನಾನು ಮಾಯಾಮಯಿಯಾದ ಮಹಿಳಾ ಮಂಡಲಿಯ ಮೋಹಜಾಲವನ್ನು ಕತ್ತರಿಸಿಕೊಂಡು ಅದರಿಂದ ಹೊರಬಿದ್ದು ಪಲಾಯನಮಾಡಿದೆನು. ಬೆಸ್ತನ ಬಲೆಯಲ್ಲಿ ಸಿಕ್ಕಿಕೊಂಡ ಮೀನು ಅವಕಾಶ ದೊರಕಿದಾಗ ಅದರಿಂದ ತಪ್ಪಿಸಿಕೊಂದು ನೀರಿನೊಳಕ್ಕೆ ಹಾರಿ ಹೋಗುವಂತೆ ನಾನು ಓಡಿದೆನು. ಕ್ಷುದ್ರವಾದ ಬೇಡನ ಬಲೆಯಲ್ಲಿ ಸಿಕ್ಕಿಕೊಂಡ ಭ್ರಮರವು ಅದರಿಂದ ಬಿಡಿಸಿಕೊಂಡು ಹಾರಿ ಹೋಗುವಂತೆ ಅಥವಾ ದುಷ್ಟವಾದ ಹೋರಿಯು ಹಗ್ಗವನ್ನು ಕಿತ್ತುಕೊಂಡ ಬಳಿಕ ಬಾಲವನ್ನು ಮೇಲಕ್ಕೆ ಮಾಡಿಕೊಂಡು ಊರ್ಧ್ವಶ್ವಾಸದಿಂದ ಓಡಿ ಹೋಗುವಂತೆ ನಾನು ನಾರೀಜಾಲದಿಂದ ತಪ್ಪಿಸಿಕೊಂಡು ಪಲಾಯನ ಮಾಡಿದೆನು. ಆದರೆ ಇದರಲ್ಲಿ ನನ್ನ ಸಾಹಸವೇನೂ ಇಲ್ಲ. ಎಲ್ಲ ಅಫೀಮಿನ ಪ್ರಸಾದದಿಂದಾದುದು! ಹೇ ಮಾತೆ, ಅಫೀಮುದೇವಿ! ನಿನ್ನ ವನವು ಅಕ್ಷಯವಾಗಲಿ! ನೀನು ಪ್ರತಿ ವರುಷವೂ ಬಂಗಾರದ ಹಡಗನ್ನು ಹತ್ತಿ, ಚೀಣಾದೇಶದಲ್ಲಿ ಪೂಜೆಯನ್ನು ಸ್ವೀಕರಿಸುವುದಕ್ಕಾಗಿ ಹೋಗು! ಜಪಾನ್, ಸೈಬೀರಿಯಾ, ಯೂರೋಪು, ಅಮೆರಿಕ ಮೊದಲಾದ ದೇಶಗಳಲ್ಲಿ ನಿನ್ನ ಅಧಿಕಾರವನ್ನು ನಡೆಯಿಸು. ಅವೆಲ್ಲವೂ ನಿನ್ನ ಉಪಾಸನೆಯನ್ನು ಮಾಡುವಂತಾಗಲಿ! ಆದರೆ ತಾಯಿ, ಕಮಲಾಕಾಂತನನ್ನು ಮರೆಯಬೇಡ. ನಾನು ನಿನ್ನ ಕೃಪೆಯಿಂದ ಸಾಮಾನ್ಯರಿಗೆ ಉಪಕಾರ ಮಾಡಲೆಳಸಿ, ಮನಸ್ಸನ್ನು ಬಿಚ್ಚಿ ನಾಲ್ಕು ಮಾತುಗಳನ್ನು ಹೇಳುವೆನು.

ನನ್ನ ಮಾತುಗಳನ್ನು ಕೇಳಿ, - ಕೇವಲ ಸ್ತ್ರೀಯರು ಮಾತ್ರವಲ್ಲ, ಅನೇಕಜನ ಪುರುಷರು ಕೂಡ ನಾನು ಹುಚ್ಚನೆಂದು ಹೇಳುವರು. ಹೇಳಲಿ, ಅದರಿಂದ ನನಗೇನೂ ಹಾನಿಯಿಲ್ಲ. ಹೊಸ ವಿಷಯವನ್ನು ಹೇಳುವವರು

ಹುಚ್ಚರೆನಿಸಿಕೊಳ್ಳುವುದು ಸ್ವಾಭಾವಿಕವಾಗಿದೆ. ಗ್ಯಾಲಿಲಿಯೋ†ನು ಪೃಥ್ವಿಯು ತಿರುಗುತ್ತಿದೆ ಎಂದು ಹೇಳಿದನು. ಇಟಲಿಯ ಶ್ರೀಮಂತರು, ಧರ್ಮಗುರುಗಳು, ವಿದ್ವಾಂಸರು ಆ ಮಾತನ್ನು ಕೇಳಿ ನಕ್ಕುಬಿಟ್ಟರು. ಗಾಲಿಲಿಯೋಗೆ ಹುಚ್ಚುಹಿಡಿದಿದೆ ಎಂದು ಅವರು ನಿರ್ಣಯಿಸಿದರು. ಬಳಿಕ ಎಷ್ಟೋ ಕಾಲವು ಕಳೆದುಹೋಗಿದೆ. ಈಗ ಇಟಲಿಯು ಶ್ರೀಮಂತರಾಗಲಿ, ಧರ್ಮಗುರುಗಳಾಗಲಿ, ವಿದ್ವಾಂಸರಾಗಲಿ-ಪೃಥ್ವಿಯು ತಿರುಗುತ್ತಿದೆಯೆಂದರೆ ನಗುವುದಿಲ್ಲ, ಗ್ಯಾಲಿಲಿಯೋಗೆ ಮತಿಭ್ರಮೆಯಾಗಿತ್ತೆಂದು ಈಗ ಯಾರೂ ಹೇಳುವುದಿಲ್ಲ.

ಸೌಂದರ್ಯ ವಿಷಯದಲ್ಲಿ ಎಲ್ಲರೂ ಸ್ತ್ರೀಯರ ಪ್ರಾಧಾನ್ಯವನ್ನೇ ಸ್ವೀಕರಿಸುವರು. ವಿದ್ಯೆ, ಬುದ್ಧಿ, ಬಲಗಳಲ್ಲಿ ಪುರುಷರ ಶ್ರೇಷ್ಠತೆಯನ್ನು ಸ್ವೀಕರಿಸಿಯೂ ರೂಪದ ತಿಲಕವನ್ನು ಸ್ತ್ರೀಯರ ಮಸ್ತಕದಲ್ಲಿರಿಸಿರುವರು. ನನ್ನ ಅಭಿಪ್ರಾಯದಲ್ಲಿ ಇದು ದೊಡ್ಡ ತಪ್ಪು. ನಾನು ದಿವ್ಯದೃಷ್ಟಿಯಿಂದ ನೋಡಿದೆ-ಪುರುಷರಿಗಿಂತಲೂ ಸ್ತ್ರೀಯರ ರೂಪವು ಅನೇಕ ವಿಧದಿಂದ ನಿಕೃಷ್ಟವಾದುದೆಂದು ತಿಳಿಯಿತು ಹೇ ಮಾನವಮಯಿಗಳಾದ ಮೋಹಿನಿಯರೆ! ನನ್ನ ಈ ಅಪರಾಧಕ್ಕಾಗಿ ನಿಮ್ಮ ಕುಟಿಲಕಟಾಕ್ಷದಿಂದ ನನ್ನ ಮೇಲೆ ಕಾಲಕೂಟವನ್ನು ವರ್ಷಿಸಿ ನನ್ನನ್ನು ಸುಟ್ಟುಬಿಡಬೇಡಿ; ಕಾಲಸರ್ಪವನ್ನು ನಿಂದಿಸುವ ನಿಮ್ಮ ವೇಣಿಯಿಂದ ನನ್ನನ್ನು ಬಂಧಿಸಿಬಿಡಬೇಡಿ; ನಿಮ್ಮಾ ಭ್ರೂಧನುಸ್ಸನ್ನು ಏರಿಸಿ ಕೋಪದಿಂದ ಬಾಣವನ್ನುಬಿಟ್ಟು ನನ್ನನ್ನು ನಿಂದಿಸುವಾಗ ಭಯದಿಂದ ನನ್ನ ಹೃದಯವು ಹೊಡೆದುಕೊಳ್ಳುತ್ತಿರುವುದು! ಸರಿಯಾದ ಮಾರ್ಗವನ್ನರಿತು ನೀವು ನಿಮ್ಮ ನತ್ತಿನ (ಮೂಗಿನ ಆಭರಣ) ಬಲೆಯನ್ನು ಹರಡಿದರೆ ಅನೇಕ ಆನೆಯಂತಹ ದೊಡ್ಡ ದೊಡ್ಡ ಪ್ರಾಣಿಗಳೆ ಬದ್ಧಚರಣವುಳ್ಳವುಗಳಾಗಿ ನಿಮ್ಮ ಮೂಗಿನಲ್ಲಿ ನೇತಾಡುವವು.-ಹೀಗಿರುವಾಗ ಕಮಲಾಕಾಂತನೆಂತಹ ಕ್ಷುದ್ರವಸ್ತು! ನಿಮ್ಮ ನತ್ತಿನ ತೂಗಲಾಟದಿಂದಲೇ ಮನುಷ್ಯರಿಗೆ ರಕ್ತಬರುವ ಸಂಭವವಿದೆ. ನಿಮ್ಮ ಚಂದ್ರಹಾರದ ಸ್ಥಾನಚ್ಯುತವಾದ ಒಂದು ತುಂಡು (ಚಂದ್ರನು) ಯಾರ ಮೇಲಾದರೂ ಬಿದ್ದರೆ ಅದರಿಂದಿವರ ಕೈಕಾಲುಗಳು ಮುರಿಯುವ ಸಂಭವವುಂಟು!

† ಕೊಪರ್ನಿಕಸ್.

ಆದ್ದರಿಂದ ನೀವು ಕೋಪಿಸಿಕೊಳ್ಳಬೇಡಿ. ಮತ್ತೆ ಹೇ ರಮಣೀಪ್ರಿಯ, ಕಲ್ಪನಾಪ್ರಿಯ, ಉಪಮಾಪ್ರಿಯ ಕವಿಗಣಗಳೆ! ನಿಮ್ಮ ಸುಖಮಯಿಯೂ ಸುವರ್ಣಮಯಿಯೂ ಆದ ಸ್ತ್ರೀ ದೇವಿಯ ಪ್ರತಿಮೆಯನ್ನು ಒಡೆಯಲು ಪ್ರವೃತ್ತನಾಗಿರುವೆನೆಂದು ನನ್ನನ್ನು ಹೊಡೆಯಲೆತ್ನಿಸಬೇಡಿ. ನೀವು ಕುಸಂಸ್ಕಾರ ದೂಷಿತರಾದ ಪೌತ್ತಲಿಕರೆಂದೂ, ಉಪಾಸ್ಯದೇವತೆಯ ಪ್ರಕೃತಿ (ಮೂಲ) ಮೂರ್ತಿಯನ್ನು ಬಿಟ್ಟು ಪರಿತ್ಯಾಗದಿಂದ ವಿಕೃತವಾದ ಪ್ರತಿ ಮೂರ್ತಿಯನ್ನು ನೀವು ಪೂಜಿಸುತ್ತಿರುವಿರೆಂದೂ ನಾನು ಪ್ರಮಾಣ ಸಹಿತವಾಗಿ ತೋರುವೆನು.

ನೈಸರ್ಗಿಕವಾಗಿ ಸುಂದರವಾದ ಕೇಶಪಾಶಗಳುಳ್ಳವರಿಗೆ ಕೃತ್ರಿಮ ಕೂದಲಿನಿಂದೇನು ಪ್ರಯೋಜನ? ಶುಭ್ರವೂ ದೃಢವೂ ಆದ ಹಲ್ಲುಗಳುಳ್ಳವರಿಗೆ ಕೃತ್ರಿಮ ಹಲ್ಲುಗಳಿಂದ ಪ್ರಯೋಜನವಿಲ್ಲ. ಕಾಲುಗಳುಳ್ಳವರು ಕಾಷ್ಠಪದಗಳನ್ನು ಅವಲಂಬಿಸಿರುವುದಿಲ್ಲ. ಈ ಬಗೆಯಾಗಿ ಯಾರ ಬಳಿಯಲ್ಲಿ ಯಾವ ವಸ್ತುವಿದೆಯೊ ಅವರು ಅದಕ್ಕಾಗಿ ಲಾಲಸೆಯುಳ್ಳವರಾಗಿರುವುದಿಲ್ಲ. ಪ್ರಕೃತಿಯು ನಮಗೆ ಯಾವ ವಸ್ತುವನ್ನು ವಂಚಿಸಿರುವುದೊ ಆ ವಸ್ತುವನ್ನು ಹೊಂದುವುದಕ್ಕಾಗಿ ನಾವು ವಿಶೇಷ ಪ್ರಯತ್ನಮಾಡುವೆವು. ಇದನ್ನೆಲ್ಲ ನೋಡಿ, ಕೇಳಿ, ಸ್ತ್ರೀಯರಲ್ಲಿ ಸೌಂದರ್ಯದ ಅಭಾವವಿದೆಯೆಂದು ನಾನು ನಿಶ್ಚಯಿಸಿರುವೆನು. ಅವರು ಯಾವಾಗಲೂ ತಮ್ಮ ರೂಪವನ್ನು ಹೆಚ್ಚಿಸುವುದರಲ್ಲಿ ಮಗ್ನರಾಗಿರುವರು. ಯಾವ ಉಪಾಯದಿಂದ ತಾನು ಸುಂದರಿಯಾಗಿ ಕಾಣಬಹುದು ಎಂಬೀ ಹುಚ್ಚು ಅವರಿಗೆ. ಒಳ್ಳೊಳ್ಳೆಯ ಅಲಂಕಾರಗಳನ್ನು ಹೇಗೆ ಹೊಂದಬಹುದು ಎಂದು ಯಾವಾಗಲೂ ಅವರು ಯೋಚಿಸುವರು, ಅದಕ್ಕಾಗಿ ಪ್ರಯತ್ನಿಸುವರು. ಒಟ್ಟಿನಲ್ಲಿ ಅಲಂಕಾರವೆ ಅವರ ಜಪ, ಅಲಂಕಾರವೆ ಅವರ ತಪಸ್ಸು, ಅಲಂಕಾರವೇ ಅವರ ಧ್ಯಾನ, ಅಲಂಕಾರವೇ ಅವರ ಜ್ಞಾನ - ಎಂದು ಹೇಳಬಹುದು. ಅವರು ತಮ್ಮ ದೇಹವನ್ನು ಹಾಗೆ ಅಲಂಕರಿಸಿಕೊಳ್ಳಲೇಕೆ ಪ್ರಯತ್ನಿಸುತ್ತಿರುವರು? ಅವರಲ್ಲಿ ಪ್ರಕೃತ ಅಧಿಕ ಸೌಂದರ್ಯವಿಲ್ಲವೆಂದು ಪ್ರಯತ್ನಿಸುವರು ಎಂದು ಅರ್ಥವಾಗುವುದಿಲ್ಲವೆ? ಯಾವಳ ಮೂಗು ಸುಂದರವಾಗಿಲ್ಲವೊ ಅವಳು ನತ್ತು ರೂಪದಿಂದಿರುವ ರಜ್ಜುವಿನಿಂದ ಮೂಗಿನಲ್ಲಿ ಅಲುಗಾಡುವ ಜಗನ್ನಾಥ

ವಿಗ್ರಹವನ್ನು ತೂಗಲಾಡಿಸುವಳು. ಯಾವಳ ಕಿವಿಯು ಸುಂದರವಾಗಿಲ್ಲವೋ ಅವಳು ಫಲ-ಪುಷ್ಪ-ಪಶು ಪಕ್ಷಿ ರೂಪವಾದ ದೊಡ್ಡವಸ್ತುಗಳನ್ನು ಕಿವಿಯಲ್ಲಿ ತೂಗುಹಾಕಿಕೊಳ್ಳುವಳು. ಯಾವಳ ಹೃದಯವು ಒಳ್ಳೆಯದಾಗಿಲ್ಲವೋ ಅವಳು ಏಳು ಎಳೆಯ ಆಭರಣಗಳನ್ನು ಅಲ್ಲಿ ತೂಗುಹಾಕಿಕೊಂಡು ಪುರುಷ ರನ್ನೂ ವಿಶೇಷವಾಗಿ ಹಾಲು ಕುಡಿಯುವ ಮಕ್ಕಳನ್ನೂ ಹೆದರಿಸುವಳು. ಅಲಂಕಾರವಿಲ್ಲದೇನೆ ತಾನು ಸುಂದರಿಯಾಗಿರುವೆನೆಂದು ತಿಳಿದಿರುವವಳು, ಆಭರಣಗಳ ಭಾರವನ್ನು ಹೊರಲು ಆತುರಳಾಗಿರುವುದಿಲ್ಲ. ಪುರುಷರು ಭೂಷಣವಿಲ್ಲದಿದ್ದರೂ ಸಂತುಷ್ಟರಾಗಿರುವರು. ಸ್ತ್ರೀಯರು ಭೂಷಣವಿಲ್ಲದೆ ಮನುಷ್ಯ ಸಮಾಜದಲ್ಲಿ ಮುಖ ತೋರಲು ಲಜ್ಜೆಯನ್ನು ಹೊಂದುವರು. ಆದ್ದರಿಂದ ಸ್ತ್ರೀಯರ ನಿತ್ಯ ವ್ಯವಹಾರದಿಂದ ಪುರುಷರಿಗಿಂತಲೂ ಸ್ತ್ರೀಯರು ಸೌಂದರ್ಯ ವಿಚಾರದಲ್ಲಿ ನಿಕೃಷ್ಟರಾಗಿರುವರೆಂದು ತಿಳಿದುಬರುವುದು.

ಸ್ತ್ರೀ ಜಾತಿಗಿಂತಲೂ ಪುರುಷಜಾತಿಯಲ್ಲಿ ಸೌಂದರ್ಯವು ಅಧಿಕವಾಗಿ ರುವುದು. ಪ್ರಕೃತಿಯ ಸೃಷ್ಟಿಪದ್ಧತಿಯನ್ನು ಸಮಾಲೋಚಿಸಿ ನೋಡಿದರೆ ಇದಕ್ಕೆ ಇನ್ನೂ ಸ್ಪಷ್ಟವಾದ ಉದಾಹರಣೆಗಳು ಕಂಡುಬರುವವು. ಯಾವ ಪೂರ್ಣ ಚಂದ್ರಕಲಾಪ (ನವಿಲಿನ ಬಾಲ) ವನ್ನು ನೋಡಿ ಮೋಡಗಳಿಗೆ ಮುಕುಟವೆನಿಸಿದ ಇಂದ್ರಧನುಸ್ಸು ಲಜ್ಜಿತವಾಗುವುದೊ ಆ ಚಂದ್ರಕಲಾಪವು ಗಂಡು ನವಿಲಿಗಿದೆಯೆವಿನಾ ಹೆಣ್ಣು ನವಿಲಿಗಿಲ್ಲ. ಯಾವ ಕೇಶದಿಂದ ಸಿಂಹವು ಶೋಭಿಸುವುದೊ ಆ ಕೇಶವು ಸಿಂಹಿನಿಗಿಲ್ಲ. ಯಾವ ಡುಬ್ಬ (ಹಿಣಿಲು) ವೃಷಭದ ಕಾಂತಿಯನ್ನು ವೃದ್ಧಿಗೊಳಿಸುವುದೊ ಆ ಡುಬ್ಬವು ಆಕಳಿ ಗಿಲ್ಲ. ಹುಂಜಕ್ಕಿರುದ ತಾಮ್ರಚೂಡವೂ ರೆಕ್ಕೆಗಳೂ ಕೋಳಿಗಿಲ್ಲ. ಹೀಗೆಯೇ ನೋಡುತ್ತ ಹೋದರೆ ಉಚ್ಚಶ್ರೇಣಿಯ ಜೀವಿಗಳಲ್ಲೂ ಸ್ತ್ರೀಯರಿಗಿಂತಲೂ ಪುರುಷರೆ ಸಂತ್ರೀ ಎಂದರೆ ಸುಂದರರಾಗಿರುವರು. ಮನುಷ್ಯ ಸೃಷ್ಟಿಯನ್ನು ಮಾಡುವಾಗ ಮಾತ್ರ ಸೃಷ್ಟಿಕರ್ತನು ಈ ನಿಯಮವನ್ನು ಬದಲಾಯಿಸಿರುವ ನೆಂದು ತಿಳಿದುಬರುವುದಿಲ್ಲ, ಹೇ ಮೂಲ "ವಿದ್ಯಾಸುಂದರ" ನಾಟಕಕಾರ! ಈ ತತ್ವವು ನಿನ್ನ ಮನಸ್ಸಿನಲ್ಲಿಯೂ ಮೊದಲೇ ಉದಯಿಸಿತ್ತೇನು? ಅದ ಕ್ಕೋಸ್ಕರವೇ ನಿನ್ನ ನಾಯಕನಿಗೆ ಸುಂದರನೆಂಬ ಹೆಸರಿಟ್ಟಿಯೇನು? ಸ್ತ್ರೀಯರು ಎಷ್ಟು ವಿದ್ಯಾವತಿಯರಾದರೂ ಪುರುಷನ ಸ್ವಾಭಾವಿಕವಾದ

ಸೌಂದರ್ಯ ಮತ್ತು ಬುದ್ಧಿಯ ಮುಂದೆ ಅವರ ಸೋಲನ್ನೊಪ್ಪಿಕೊಳ್ಳಬೇಕಾಗುವುದೆಂದು ಆಗಲೆ ತಿಳಿದುಕೊಂಡಿದ್ದಿಯೇನು?

ಸೌಂದರ್ಯದ ಸೊಗಸು ಯೌವನಕಾಲದಲ್ಲಿ. ಆದರೆ ರೂಪಾಂಧರಾದ ಭಾಮಿನಿಯರೆ! ನಿಮ್ಮ ಯೌವನವು ಎಷ್ಟು ಕಾಲವಿರುವುದು? ಸಮುದ್ರದಂತೆ ಅದು ಉಕ್ಕುವಾಗಲೆ ಇಳಿಯುತ್ತ ಹೋಗುವುದು. ೨೦ ವರುಷ ವಯಸ್ಸಾದ ಕೂಡಲೇ ನೀವು ಮುದುಕಿಯರಾಗುವಿರಿ. ಸ್ವಲ್ಪ ದಿನಗಳಲ್ಲಿಯೇ ನಿಮ್ಮ ಅಂಗಗಳೆಲ್ಲ ಶಿಥಿಲವಾಗುವುವು. ವಯಸ್ಸಾದಂತೆಲ್ಲ ಶೀಘ್ರವಾಗಿ ನಿಮ್ಮ ಕಂಠದಲ್ಲಿರುವ ಲಾವಣ್ಯ - ವಿಜಯಮಾಲೆಯು ಕಿತ್ತುಹೋಗುವುದು. ೪೦-೪೫ ವರುಷ ವಯಸ್ಸಿನ ಪುರುಷನ ಮುಖದಲ್ಲಿರುವ ಲಕ್ಷಣವು, ನಿಮ್ಮ ಮುಖದಲ್ಲಿ ೨೦-೨೫ ವರುಷ ವಯಸ್ಸಾದ ಮೇಲೆ ಇರುವುದಿಲ್ಲ. ನಿಮ್ಮ ರೂಪದ ಸ್ಥಿತಿಯು ಮಿಂಚಿನಂತೆ ಇಂದ್ರಧನುಸ್ಸಿನಂತೆ (ಕಾಮನ ಬಿಲ್ಲಿನಂತೆ) ಅತ್ಯಲ್ಪಕಾಲವಿರುವುದು. ಆದು ಒಂದುಮುಹೂರ್ತದವರೆಗೂ ಇರಲಾರದೆಂಬುದರಲ್ಲಿ ಸಂದೇಹವಿಲ್ಲ. ನಿಮ್ಮಾ ರೂಪಭೋಗಕ್ಕಾಗಿ ಉನ್ಮತ್ತರಾದವರ ವೇದನೆಯು ನಾನು ಊಟಕ್ಕೆ ಕುಳಿತಕೂಡಲೇ ನನಗೆ ಅನುಭವವಾಗುವುದು. ನನ್ನ ಜೀವನದಲ್ಲಿ ಇರುವ ದುಃಖವೆನಗೆ, - ಅನ್ನ, ರೊಟ್ಟಿ, ಪಲ್ಯಗಳನ್ನು ಊಟದ ತಟ್ಟೆಯಲ್ಲಿ ಬಡಿಸುತ್ತಿರುವಾಗಲೆ ಅವು ತಣ್ಣಗಾಗಿಬಿಡುವುವು. - ಹಾಗೆಯೇ ಸ್ತ್ರೀಯರ ಸೌಂದರ್ಯರೂಪವಾದ ಅನ್ನವು ಪ್ರಣಯಕಲಾಪಾತ್ರದಲ್ಲಿ ಬೀಳುವಾಗಲೇ ಅದು ತಣ್ಣಗಾಗಿಬಿಡುವುದು. ಬಳಿಕ ಅದನ್ನು ಹೇಗೆ ತಿನ್ನಬೇಕು? ಕೊನೆಗೆ ವೇಷಭೂಷಣವೆಂಬ ಚಟ್ಣಿಯನ್ನು ಅದಕ್ಕೆ ಸೇರಿಸಿ, ಆದರವೆಂಬ ಲವಣವನ್ನುಹಾಕಿ, ಹೇಗೋ ಅದನ್ನು ಗಂಟಲೊಳಕ್ಕೆ ನೂಕಬೇಕಾಗುವುದು.

ಹೇ ಸೌಂದರ್ಯಗರ್ವಿತರಾದ ಕಾಮಿನಿಯರೆ! ಸತ್ಯವಾಗಿ ಹೇಳುವೆನು. ನೋಡಿ! ನಿಮ್ಮಾ ರೂಪವು ಕ್ಷಣಸ್ಥಾಯಿಯಾದುದೆಂತಲೆ ಅದಕ್ಕೆ ಅಷ್ಟು ಆದರವೇನು? ಚೆನ್ನಾಗಿ ನೋಡುವಷ್ಟರೊಳಗಾಗಿ - ಚೆನ್ನಾಗಿ ಉಪಯೋಗಿಸುವಷ್ಟರೊಳಗಾಗಿ ಅದು ಅಂತರ್ಧಾನವಾಗುವುದೆಂದು ನಿಮ್ಮಾ ರೂಪಕ್ಕಾಗಿ ಪುರುಷರ ಪಿಪಾಸೆಯು ಚಾತಕದಂತೆ ಉನ್ಮತ್ತವಾಗಿರುವುದೇನು? ನಿಮ್ಮಾ

ರೂಪವು ಅಕಸ್ಮಾತ್ತಾಗಿ ದೊರೆತ ನಿಧಿಯಂತಿರುವುದೆಂದು ಅದರ ಬೆಲೆಯನ್ನು ನಿರ್ಣಯಿಸಲಾಗಲಿಲ್ಲವೇನು? ಅದು ಕೇವಲ ಕ್ಷಣಸ್ಥಾಯಿಯೆಂದು ಸ್ತ್ರೀಯರ ರೂಪವು ಅಷ್ಟು ಮನೋಹರವಾಗಿ ಕಾಣಲಾರದು. ಅದಕ್ಕೆ ಬೇರೆ ಕಾರಣವಿದೆ. ಯಾವ ಗ್ರಂಥಕಾರರ ಅಭಿಪ್ರಾಯಗಳು ಭೂಮಂಡಲದಲ್ಲಿ ಗ್ರಾಹ್ಯವಾಗಿವೆಯೋ, ಆ ಗ್ರಂಥಕಾರರೆಲ್ಲ ಪುರುಷರಾಗಿರುವರು; ಅದರಿಂದ ಅವರೆಲ್ಲರೂ ಅನುರಾಗ ನೇತ್ರದಿಂದ ಕಾಮಿನಿಯರ ರೂಪವರ್ಣನೆಯನ್ನು ಮಾಡಿರುವರು. "ಮನ ಒಲಿದರೆ ಕತ್ತೆಯೆ ಕುದುರೆಯಂತೆ ಕಾಣುವುದು" ಎಂದು ನಾಣ್ಣುಡಿಯಿದೆ. ರಮಣಿಯರು ಪ್ರೇಮವಸ್ತುವಾಗಿರುವರು. ಅವರನ್ನು ಯಾವ ರಸಿಕನು ಸಹಜದೃಷ್ಟಿಯಿಂದ ನೋಡಬಲ್ಲವನು? ಒಳ್ಳೆಯ ಕನ್ನಡಿಯಲ್ಲಿ ನೋಡಿಕೊಂಡರೆ ಅದರ ಪ್ರಭಾವದಿಂದ ಕುತ್ಸಿತ ಮುಖವು ಸುಂದರವಾಗಿ ಕಾಣುವುದು. ನಾವು ನಾರಿಯ ಮನಮೋಹನ ರೂಪವನ್ನು ನೋಡುವಾಗ ಕಣ್ಣಿಗೆ ಪ್ರೀತಿಯ ಅಂಜನವನ್ನು ಪೂಸಿಕೊಂಡು ನೋಡಬೇಕು. ಆಗ ಅವರಾ ಸೌಂದರ್ಯದಲ್ಲಿ ಪುರುಷರ ಸೌಂದರ್ಯಕ್ಕಿಂತಲೂ ಅಧಿಕ ಮಾಧುರ್ಯವಿದೆಯೆಂದು ಬೋಧೆಯಾಗದಿರುವುದೆ?

ಹೇ ಪ್ರಣಯದೇವ! ಪಾಶ್ಚಾತ್ಯ ಕವಿಗಳು ನೀನು ಅಂಧನೆಂದು ಹೇಳಿರುವರು. ಅದು ಸುಳ್ಳಲ್ಲ. ನಿನ್ನ ಪ್ರಭಾವದಿಂದ ಪ್ರಿಯ ವಸ್ತುವಿನಲ್ಲಿ ಜನರು ದೋಷವನ್ನು ನೋಡಲಾರದವರಾಗಿರುವರು. ನಿನ್ನ ಅಂಜನವು ಯಾರ ನೇತ್ರಗಳಿಗೆ ಹತ್ತಿರುವುದೊ ಅಂತಹವರಿಗೆ ಸುತ್ತಲೂ ಯಾವಾಗಲೂ ವಿಶ್ವಮೋಹನ ಪದಾರ್ಥಗಳ ರಾಶಿಯೇ ಕಾಣುವುದು. ವಿಕಟಮೂರ್ತಿಯಲ್ಲಿ ಅವರು ಸೌಂದರ್ಯವನ್ನು ಕಾಣುವರು; ಕರ್ಕಶಸ್ವರವನ್ನು ಅವರು ಅಮೃತಮಯವೆಂದು ಭಾವಿಸುವರು; ಪ್ರೇತಿನಿಯ ಅಂಗಭಂಗಿಯನ್ನು ನೋಡಿ, ಅದು ಮೃದುವಾದ ಮಂದಮಾರುತದಿಂದ ದೋಲಾಯಿತವಾದ ಲಲಿತ ಲವಂಗಲತೆಯ ಲಾವಣ್ಯಲೀಲೆಗಿಂತಲೂ ಅಧಿಕ ಸುಖದಾಯಕವಾದುದೆಂದು ಭಾವಿಸುವರು. ಆದುದರಿಂದಲೇ ಚೀಣದೇಶದಲ್ಲಿ ಚಪ್ಪಟೆಯಾದ ಮೂಗಿಗೆ ಆದರವಿದೆ; ಆದುದರಿಂದಲೇ ವಿಲಾಯಿತಿ ಸ್ತ್ರೀಯರ ಕೆಂಚಕೂದಲಿಗೂ ಬೆಕ್ಕಿನ ಕಣ್ಣಿಗೂ ಆದರವಿದೆ. ಆ ಕಾರಣದಿಂದಲೇ ಆಫ್ರಿಕಾಖಂಡದಲ್ಲಿ ದೊಡ್ಡ ತುಟಿಗಳಿಗೆ ಆದರವಿದೆ. ಮತ್ತೆ ಆ ಕಾರಣದಿಂದಲೇ ಭಾರತ ದೇಶ

ದಲ್ಲಿ ಹಚ್ಚೆಯಿಂದ ಚಿತ್ರಿತವಾದ ಹಲ್ಲುಕಪ್ಪಿನಿಂದ ಕಲಂಕಿತವಾದ ಚಂದ್ರ ವದನಕ್ಕೆ ಆದರವಿದೆ! ಈ ಕಾರಣಗಳಿಂದ ಮಾನವ ಸಮಾಜದಲ್ಲಿ ಸ್ತ್ರೀ ರೂಪಕ್ಕೆ ಆದರ. ಮತ್ತೆ ಸ್ತ್ರೀಯರೇನಾದರೂ ಪುರುಷರಂತೆ ಮನಸ್ಸಿನೊಳಗಿನ ಮಾತನ್ನು ಬಾಯಲ್ಲಿ ಆಡಿದರೆ ಆಗ, ಹೇ ಪ್ರೇಮದೇವ, ಅವರಲ್ಲಿರುವ ಗುಣವನ್ನು ಗಣಿಸದೆ, ಕೇವಲ ನಿನ್ನ ಗುಣದ ಪ್ರಭಾವದಿಂದ ಪುರುಷ ಸೌಂದರ್ಯದೆದುರಿನಲ್ಲಿ ಸ್ತ್ರೀ ಸೌಂದರ್ಯವು ನಿಕೃಷ್ಟವಾದುದೆಂದು ಹೇಳಲಾಗುವುದು. ಒಳಗಿರುವ ಭಾವನೆಯನ್ನು ಮಾತಿನಿಂದ ತಿಳಿಸಲು ಮಹಿಳೆಯರು ಬಹು ಸಂಕೋಚಪಡುವರು. ಆದಾಗ್ಯೂ ಅವರಾ ಕಾರ್ಯದಲ್ಲಿ ಅವರಾ ಅಂತರಿಕಗೂಢ ಭಾವನೆಯು ಸ್ವಲ್ಪಮಟ್ಟಿಗೆ ಪ್ರಕಾಶಿತವಾಗುವುದು. ಒಬ್ಬ ಸ್ತ್ರೀಯು ಇನ್ನೊಬ್ಬ ಸ್ತ್ರೀಯು ತನಗಿಂತಲೂ ಸುಂದರಿಯುಳಾಗಿರುವಳೆಂದು ಸ್ವೀಕರಿಸುವುದನ್ನು ನೀವು ಎಲ್ಲಿಯೂ ಕೇಳಿರಲಾರಿರಿ. ಆದ್ದರಿಂದ ಅವಳು ಪುರುಷನಿಗೆ ಭಕ್ತಳಾಗಿ ತನ್ನ ಆತ್ಮವನ್ನೇ ಅವನಿಗೆ ಸಮರ್ಪಿಸುವಳು. ಸ್ತ್ರೀಯರು ಮನಸ್ಸಿನಲ್ಲಿ ಸ್ತ್ರೀ ರೂಪಕ್ಕಿಂತಲೂ ಪುರುಷರೂಪ ಪಕ್ಷಪಾತಿನಿಯರಾಗಿರುವರೆಂದು ಇದರಿಂದ ತಿಳಿದುಬರುವುದಿಲ್ಲವೆ?

ಪುರುಷರು ರೂಪ ರೂಪ ಎಂದು ಕೂಗಿ ಸ್ತ್ರೀಯರ ಸರ್ವನಾಶವಾಗುತ್ತಿದೆ. ರೂಪವೇ ಸ್ತ್ರೀಯರ ಮಹಾಮೂಲ್ಯವಾದ ರತ್ನ-ಸರ್ವಸ್ವವಾಗಿದೆ ಎಂದು ಎಲ್ಲರೂ ಭಾವಿಸುವರು. ಇದರ ಪರಿಣಾಮವಾಗಿ ಈಗ ಸ್ತ್ರೀಯರು ಏನಾದರೂ ಕಾಮ್ಯವಸ್ತುವಿಗಾಗಿ ಪ್ರಾರ್ಥಿಸಿದರೆ ಜನರು ರೂಪಕ್ಕೆ ವಿನಿಮಯವಾಗಿ ಅದನ್ನು ಕೊಡಲಪೇಕ್ಷಿಸುವರು. ಇದರಿಂದ ಮನುಷ್ಯ ಸಮಾಜದಲ್ಲಿ ಕಳಂಕರೂಪವಾದ ವಾರಾಂಗನೆಯರ ವರ್ಗವು ಸೃಷ್ಟಿತವಾಗಿದೆ. ಅದರಿಂದ ಸಂಸಾರದಲ್ಲಿ ಸ್ತ್ರೀಯರಿಗೆ ದಾಸೀತ್ವವು ಲಭಿಸಿದೆ.

ಅಸ್ಥಾಯಿಯಾದ ಸೌಂದರ್ಯವು ಸ್ತ್ರೀಯರಿಗೆ ಏಕಮಾತ್ರ ಮೂಲಧನವಾಗಿದೆಯೋ ಅಥವಾ ಸಂಸಾರಸಾಗರದಿಂದ ಪಾರುಮಾಡಲು ಏಕಮಾತ್ರ ಕರ್ಣಧಾರವಾಗಿದೆಯೋ ಎಂಬುದನ್ನು ಈಗ ನಾನು ಕೇಳಲಪೇಕ್ಷಿಸುವುದಿಲ್ಲ. ಅದನ್ನು ಬಹುಕಾಲ ಕೇಳಿರುವೆನು. ಕೇಳಿ ಕೇಳಿ ಕಿವಿಯು ಮುದಿಯಾಯಿತು. ಇನ್ನು ಕೇಳಲಾರೆ. ನಾರಿಯರಲ್ಲಿ ರೂಪಕ್ಕಿಂತಲೂ ನೂರುಪಾಲು

ಸಾವಿರಪಾಲು, ಲಕ್ಷಪಾಲು, ಕೋಟಿಭಾಗ ಅಧಿಕ ಮಹತ್ವದ ಗುಣವಿದೆಯೋ ಎಂಬುದನ್ನು ಈಗ ಕೇಳಲಪೇಕ್ಷಿಸುವೆನು. ನಾರಿಯರು ಸಹಿಷ್ಣುತೆಯ, ಭಕ್ತಿಯ, ಪ್ರೀತಿಯ ಪ್ರತಿಮೂರ್ತಿಗಳಾಗಿರುವರೆ ಎಂಬುದನ್ನು ನಾನು ಕೇಳಲಪೇಕ್ಷಿಸುವೆನು. ಮಾತೆಯು ಎಷ್ಟು ಕಷ್ಟವನ್ನು ಸಹಿಸಿ ಮಕ್ಕಳ ಲಾಲನೆ ಪಾಲನೆ ಮಾಡುವಳೆಂದು, ಎಷ್ಟು ಕಷ್ಟವನ್ನು ಸಹಿಸಿ ಮಹಿಳೆಯರು ರೋಗಿಗಳಾದ ತಮ್ಮ ಬಂಧುಗಳ ಸೇವೆ ಶುಶ್ರೂಷೆಗಳನ್ನು ಮಾಡುವರೆಂದು ಯಾರಾದರೂ ನೋಡಿದ್ದರೆ ಅವರಿಗೆ ನಾರಿಯರ ಸಹಿಷ್ಣುತೆಯ ಪರಿಚಯವು ಸ್ವಲ್ಪವಾದರೂ ಆಗಿರುವುದು. ಯಾವಳಾದರೂ ಸುಂದರಿಯು ಪತಿಪುತ್ರರಿಗಾಗಿ ಪ್ರಾಣಕೊಡುವುದನ್ನು ಧರ್ಮಕ್ಕಾಗಿ ಬಾಹ್ಯಸುಖವನ್ನು ತಿರಸ್ಕರಿಸುವುದನ್ನು ಯಾರಾದರೂ ನೋಡಿದರೆ, ಸ್ತ್ರೀಯ ಹೃದಯದಲ್ಲಿ ಎಂತಹ ಪ್ರೀತಿ, ಎಂತಹ ಭಕ್ತಿಯು ನೆಲೆಗೊಂಡಿದೆ ಎಂಬುದರ ಪರಿಚಯವು ಅವರಿಗೆ ಆಗುವುದು.

ನಾನು ಶ್ರೇಷ್ಠನಾರಿಯ ಆದರ್ಶವನ್ನರಸಲಾರಂಭಿಸಿದಾಗ, ನನ್ನ ಕಣ್ಣೆದುರಿಗೆ ಸಹಗಮನ ಪ್ರವೃತ್ತಳಾದ ಸತಿಯ ಮೂರ್ತಿಯು ಬಂದು ನಿಲ್ಲುವುದು. ಆಗ ನಾನು ನೋಡುತ್ತಿರುವುದೇನು ? – ಚಿತೆಯು ಜ್ವಲಿಸುತ್ತಿದೆ ; ಪತಿಯ ಪಾದಗಳನ್ನು ಸಾದರದಿಂದ ವಕ್ಷಸ್ಥಳದಲ್ಲಿಟ್ಟುಕೊಂಡು ಪ್ರಜ್ವಲಿತವಾದ ಅಗ್ನಿಯ ಮಧ್ಯದಲ್ಲಿ ಸಾಧ್ವಿಯು ಕುಳಿತಿದ್ದಾಳೆ. ನಿಧಾನವಾಗಿ ಬೆಂಕಿಯ ಜ್ವಾಲೆಯು ಸುತ್ತಲೂ ಹರಡುತ್ತಿದೆ. ಅಗ್ನಿದಗ್ಧಳಾಗಿ ಸತಿಯು ಸ್ವಾಮಿಯ ಚರಣಧ್ಯಾನವನ್ನು ಮಾಡುತ್ತಿರುವಳು. ಮಧ್ಯ ಮಧ್ಯದಲ್ಲಿ ಹರಿನಾಮವನ್ನು ಹೇಳುತ್ತಿರುವಳು. ಮುಖದಲ್ಲಿ ಸ್ವಲ್ಪವಾದರೂ ದೈಹಿಕ ಕ್ಲೇಶದ ಲಕ್ಷಣಗಳಿಲ್ಲ. ಮುಖವು ಪ್ರಫುಲ್ಲವಾಗಿದೆ. ಅಗ್ನಿಜ್ವಾಲೆಯು ಹಬ್ಬಿತು, ಸತಿಯ ಪ್ರಾಣವು ಹಾರಿಹೋಯಿತು, ದೇಹವು ಬೂದಿಯಾಯಿತು! ಧನ್ಯ ಸಹಿಷ್ಣುತೆ ! ಧನ್ಯವಾಪ್ರೇಮ !! ಧನ್ಯವಾಭಕ್ತಿ !!

ಕೆಲವು ದಿನಗಳಿಂದ ನಾನು ಯೋಚಿಸುತ್ತಿದ್ದೇನೆ. – ನಮ್ಮ ದೇಶದ ಅಬಲೆಯರು ಕೋಮಲಾಂಗಿಯರಾಗಿದ್ದರೂ ಈ ಬಗೆಯಾಗಿ ಪತಿಗಾಗಿ ಪ್ರಾಣವನ್ನರ್ಪಿಸುತ್ತಿದ್ದರೆಂಬುದನ್ನು ಯೋಚಿಸುತ್ತಿದ್ದರೆ, ನನ್ನ ಮನಸ್ಸಿನಲ್ಲಿ

ಒಂದು ಹೊಸ ಆಸೆಯು ಮೂಡುವುದು. ಆಗ "ಮಹತ್ವ"ದ ಬೀಜವು ನಮ್ಮೊಳಗೇ ಅಡಗಿರುವುದು ಎಂದು ವಿಶ್ವಾಸವುಂಟಾಗುವುದು. ಕಾಲಬಂದಾಗಲೂ ನಮ್ಮ ಮಹತ್ವವನ್ನು ನಾವು ತೋರಿಸಲಾರೆವೆ? ಹೇ ಭಾರತ ಗೌರಾಂಗನೆಯರೆ! - ಈ ಭಾರತವರ್ಷದ ಅಮೂಲ್ಯವಾದ ರತ್ನಗಳು ನೀವು! ನಿಮಗೆ ಮಿಥ್ಯೆಯಾದ ರೂಪದ ಅಹಂಕಾರವೇಕೆ?

ಇತಿ,

— ಶ್ರೀ ಕಮಲಾಕಾಂತ ಚಕ್ರವರ್ತಿ.

---

# ೯. ಹೂಗಳ ಮದುವೆ

ವೈಶಾಖಮಾಸವು ಮದುವೆಗಳ ತಿಂಗಳು. ವೈಶಾಖ ಶುದ್ಧ ಪಾಡ್ಯಮಿಯ ದಿನ ನಾನು ನಸೀರಾಮಬಾಬುವಿನ ಹೂ ದೋಟದಲ್ಲಿ ಕುಳಿತುಕೊಂಡು ಒಂದು ಮದುವೆಯನ್ನು ನೋಡುತ್ತಿದ್ದೆನು. ಮುಂದಿನಕಾಲದ ವರಕನ್ಯೆಯರ ಶಿಕ್ಷಣಾರ್ಥವಾಗಿ ಅದನ್ನು ಬರೆದಿಡುತ್ತಲಿರುವೆನು.

ಮಲ್ಲಿಗೆ ಹೂವಿನ ಮದುವೆ. ಸಾಯಂಕಾಲವಾಗುತ್ತಲೆ ಶೈಶವವು ಕಳೆದು ಕಲಿಕಾ–ಕನ್ಯೆಯು (ಮೊಗ್ಗು) ವಿವಾಹ ಯೋಗ್ಯಳಾದವಳು. ಕನ್ಯೆಯ ತಂದೆಯು ದೊಡ್ಡ ಮನುಷ್ಯನಲ್ಲ, ಸಣ್ಣ ವೃಕ್ಷಮಾತ್ರ. ಆದರಲ್ಲಿ ಈಗ ಅನೇಕ ಕನ್ಯಾಭಾರಗ್ರಸ್ಥವಾಗಿರುವುದು. ಮದುವೆಯ ವಿಚಾರದಲ್ಲಿ ಅನೇಕ ಮಾತುಕಥೆಗಳು ನಡೆದವು. ಆದರೆ ಯಾವುದೂ ಸ್ಥಿರವಾಗಲಿಲ್ಲ. ಉದ್ಯಾನದ ರಾಜನಾದ ಸ್ಥಲಪದ್ಮವು (ಗುಲಾಬ) ನಿರ್ದೋಷವಾದ ಪಾತ್ರ. ಆದರೆ ಮನೆ ಎತ್ತರವಾದ್ದು. ವರನು ನಮ್ರತೆಯಿಂದ ಬಾಗಿ ಸಂಬಂಧವನ್ನು ಮಾಡಲು ಸಮ್ಮತಿಸುತ್ತಿಲ್ಲ, ಗುಲಾಬಿಗೆ ಈ ವಿವಾಹದಲ್ಲಿ ಸಮ್ಮತವಿದೆ. ಆದರೆ ಅದು ಬಲು ಕೆಂಪಾಗಿ ಕ್ರೋಧ ಪೂರ್ಣವಾಗಿ ಇದೆ. ಕನ್ಯೆಯ ಪಿತನಿಗೆ ತಡೆಯಲಾರದಂತಾಯಿತು, ಸುಗಂಧರಾಜನು ಒಳ್ಳೆಯ ಪಾತ್ರನಾದ ವರ. ಆದರೆ ಅಹಂಕಾರ ಹೆಚ್ಚು. ಹಿಡಿಸಲಾರದಷ್ಟು ಜಂಬ. ಅದೂ ಸಿಕ್ಕುವುದು ಕಷ್ಟ. ಈ ಬಗೆಯ ಅವ್ಯವಸ್ಥೆಯಲ್ಲಿ ಭ್ರಮರ ರಾಜನು ದೂತನಾಗಿ ಮಲ್ಲಿಗೆ ಬಳ್ಳಿಯ ಸಮೀಪಕ್ಕೆ ಬಂದನು. ಬಂದಕೂಡಲೆ ಹೇಳಿದನು.–

–"ಗುಜ್! ಗುಜ್! ಗುಜ್! ಹುಡುಗಿ ಇದ್ದಾಳೇನು?" ಮಲ್ಲಿಗೆ ಬಳ್ಳಿಯು ಎಲೆಗಳನ್ನು ಅಲ್ಲಾಡಿಸುತ್ತ "ಇದ್ದಾಳೆ" ಎಂದು ಉತ್ತರವಿತ್ತಿತ್ತು.

ಭ್ರಮರವು ಪತ್ರಾಸನದ ಮೇಲೆ ಕುಳಿತು ಹೇಳಿತು–

"ಗುಜ್! ಗುಜ್! ಗುಜ್ ಗುಜ್! ಹುಡುಗೀನ ನೋಡಬೇಕು."

ವೃಕ್ಷವು ಕೊಂಬೆಗಳನ್ನು ಬಾಗಿಸಿ ಸಂಕೋಚದಿಂದ ಕಣ್ಣು ಮುಚ್ಚಿಕೊಂಡಿದ್ದ ಮೇಲ್ಮುಸುಕು ಓರೆಮಾಡಿದ ಕನ್ಯೆಯನ್ನು ತೋರಿತು.

ಭ್ರಮರವು ಒಂದುಬಾರಿ ಸುತ್ತಿ ಹೇಳಿತು - "ಗುಜ್! ಗುಜ್! ಗುಜ್! ಗುಣ ನೋಡಬೇಕು. ಮುಸುಕು ತೆಗೆ."

ಲಜ್ಜಾಶೀಲಳಾದ ಕನ್ಯೆಯು ಯಾವ ಬಗೆಯಿಂದಲೂ ಮುಸುಕು ತೆಗೆಯುತ್ತಿಲ್ಲ. ವೃಕ್ಷವು ಹೇಳಿತು - "ನನ್ನ ಮಗಳಿಗೆ ಬಲು ನಾಚಿಕೆ. ನೀವು ಸ್ವಲ್ಪ ಹೊತ್ತು ತಡೆಯಿರಿ, ನಾನು ಮುಸುಕು ತೆಗೆದು ತೋರುವೆನು."

ಭ್ರಮರವು "ಭನ್" ಎಂದು ಹಾರಿಹೋಗಿ ಗುಲಾಬಿಯ ಬೈಠಕಖಾನೆಯಲ್ಲಿ ಕುಳಿತು ರಾಜಪುತ್ರನೊಂದಿಗೆ ಹರಟುತ್ತ ಕುಳಿತುಕೊಂಡಿತು. ಇತ್ತ ಮಲ್ಲಿಗೆಯ ಅಕ್ಕನಾದ ಸಂಧ್ಯಾ ಠಾಕೂರಾಣಿಯು ಬಂದು ತಂಗಿಗೆ ಎಷ್ಟೋ ಸಮಾಧಾನ ಹೇಳಿದಳು. - "ಮಗು ಮುಸುಕು ತೆಗೆಯೆ! ಇಲ್ಲವಾದರೆ ವರನು ಬರುವುದಿಲ್ಲ. ನನ್ನಲಕ್ಷ್ಮಿ, ನನ್ನಚಂದ್ರ, ನನ್ನಬಂಗಾರ, ಮುಸುಕು ತೆಗಿಯೆ" - ಇತ್ಯಾದಿ. ಮೊಗ್ಗು ಕೆಲವು ಸಲ ತಲೆಬಾಗಿಸಿತು, ಕೆಲವು ಬಾರಿ ಮುಖ ತಿರುಗಿಸಿಕೊಂಡಿತು. ಕೆಲವುಬಾರಿ "ಹೋಗಕ್ಕ, ನೀನು!" ಎಂದಿತು. ಆದರೆ ಕೊನೆಗೆ ಸಂಧ್ಯೆಯು ಸ್ನಿಗ್ಧಸ್ವಭಾವಕ್ಕೆ ಮುಗ್ಧವಾಗಿ ಮುಸುಕನ್ನು ತೆರೆಯಿತು. ಆಗ ದೂತ ಮಹಾಶಯನು ಅರಮನೆಯಿಂದ "ಗುಜ್" ಎಂದು ಬಂದು ಕುಳಿತು ಕನ್ಯೆಯನ್ನು ನೋಡಿದನು. ಕನ್ಯೆಯ ಪರಿಮಳದಿಂದ ಮೋಹಗೊಂಡು ಹೇಳಿದನು. - "ಗುಜ್ ಗುಜ್ ಗುಜ್! ಗುಜ್ ಗುಜ್ ಗುಜ್ ಕನ್ಯೆಯು ಗುಣವತಿಯಾಗಿದ್ದಾಳೆ. ಒಳ್ಳೆಯದು, ಮನೆಯಲ್ಲಿ ಮಧು ವೆಷ್ಟಿದೆ?"

ಕನ್ಯಾ ಪಿತನಾದ ವೃಕ್ಷನು - "ಎಷ್ಟು ಕೊಡಬೇಕೆಂದು ಕರಾರು ಆಗುವುದೊ ಅಷ್ಟು ಕೊಡುವೆನು. ಅದರಲ್ಲಿ ಸ್ವಲ್ಪವೂ ಕಡಿಮೆ ಮಾಡುವುದಿಲ್ಲ" ಎಂದಿತು. ಭ್ರಮರವು "ಗುಜ್ ಗುಜ್! ನೀವು ಬಹು ಗುಣ ಶಾಲಿಗಳು. - ನನ್ನ ಮಧ್ಯಸ್ಥಗಾರಿಕೆಗೆ ತಕ್ಕ -" ಎಂದಿತು.

ವೃಕ್ಷವು ಶಾಖೆಗಳನ್ನಲುಗಿಸುತ್ತ - "ಅದನ್ನೂ ಕೊಡುತ್ತೇನೆ" ಎಂದಿತು. ಭ್ರಮರವು ಹೇಳಿತು - "ಮಧ್ಯಸ್ಥಗಾರಿಕೆ ರುಸುಮುವನ್ನು ಮುಂಗಡವಾಗಿ

ಕೊಡುವುದಿಲ್ಲವೆ ? ನಗದು ದಾನದಲ್ಲಿ ಬಹು ಗುಣವಿದೆ, ಗುಜ್ ಗುಜ್ ಗುಜ್ "

ಕ್ಷುದ್ರ ವೃಕ್ಷವು ವಿರಕ್ತಭಾವದಿಂದ ಶಾಖೆಗಳನ್ನೆಲ್ಲಾ ಡಿಸುತ್ತ- "ಮೊದಲು ವರನ ಗುಣವನ್ನು ತಿಳಿಸು ! ವರನಾರು ?" ಎಂದಿತು.

ಭ್ರಮರ- "ವರನು ಅತಿ ಯೋಗ್ಯನು. ಅವನಲ್ಲಿ ಅನೇಕ ಗುಣವಿದೆ- ಗುಜ್ ಗುಜ್ !..........."

"ಅವನ ಹೆಸರೇನು ?"

" ಗುಲಾಬ ಲಾಲ ಗಂಧೋಪಾಧ್ಯಾಯ. ಅವನಲ್ಲಿ ಗುಣಗಳಿವೆ. ಗುಜ್ ಗುಜ್ !"

ಈ ಮಾತುಕಥೆಗಳನ್ನು ಮನುಷ್ಯರು ಕೇಳಲಾರರು. ನಾನು ಕೇವಲ ಅಫೀಮಿನ ಪ್ರಸಾದದಿಂದ ದಿವ್ಯಕರ್ಣವನ್ನು ಹೊಂದಿ, ಅದನ್ನೆಲ್ಲ ಕೇಳಲಾರಂಭಿಸಿದೆನು. ಕುಲಾಚಾರ್ಯನಾದ ಭ್ರಮರ ಮಹಾಶಯನು ರೆಕ್ಕೆಗಳನ್ನು ಪಸರಿಸಿಕೊಂಡು ಆರು ಕಾಲುಗಳನ್ನು ಅಗಲಿಸಿ ಗುಲಾಬಿಯ ಗುಣಗಾನವನ್ನು ಮಾಡಲಾರಂಭಿಸಿತು. - "ಗುಲಾಬಿ ಮನೆತನ ಬಹಳ ದೊಡ್ಡದು. ಅದರ ಕುಲವು ಬಹು ಉಚ್ಚವಾದುದು. ಅದರ ವರ್ಣವೇ ಬೇರೆ. ಎಲ್ಲ ಹೂಗಳೂ ಅರಳುವವು. ಆದರೂ ಗುಲಾಬಿಯ ಗೌರವವು ಅಧಿಕವಾದ್ದು. ಏಕೆಂದರೆ ಅದು ಸಾಕ್ಷಾತ್ ವಾಂಛಾಮಾಲಿಯ ಸಂತಾನ. ಅದು ಅವನ ಕೈಯಿಂದಲೆ ಪಾಲಿತವಾದುದು. ಅದರಲ್ಲಿ ಮುಳ್ಳು ಇದೆ ಎಂದು ಹೇಳಬಹುದು. ಅದಿಲ್ಲದ ಕುಲವಾಗಲಿ ಹೂವಾಗಲಿ ಯಾವುದು ?"

ಅದೇನೆ ಆಗಲಿ, ಮಧ್ಯಸ್ಥಗಾರನು ಹೇಗೋ ಸಂಬಂಧವನ್ನು ನಿಶ್ಚಯಿಸಿ 'ಭೌಂ' ಎಂದು ಹಾರಿ ಗುಲಾಬ ಬಾಬುವಿನ ಬಂಗಲೆಗೆ ಸುದ್ದಿಯನ್ನು ತಿಳಿಸಲು ಹೋಯಿತು. ಗುಲಾಬಿಯು ಆಗ ಹವೆಯೊಂದಿಗೆ ನರ್ತಿಸುತ್ತ, ನಗುತ್ತ ಹಾರುತ್ತ ಕ್ರೀಡಿಸುತ್ತಿತ್ತು. ಮದುವೆಯ ಸುದ್ದಿಯನ್ನು ಕೇಳಿ, ಸಂತೋಷದಿಂದ ಹುಡುಗಿಯ ವಯಸ್ಸನ್ನು ವಿಚಾರಿಸಿತು. ಭ್ರಮರವು ಹೇಳಿತು- 'ಇವತ್ತೇ ಮೊಗ್ಗು ಅರಳುವಂತಿದೆ.'

ಗೋಧೂಳಿ ಲಗ್ನದ ಸಮಯ. ಗುಲಾಬಿಯು ವಿವಾಹ ಯಾತ್ರೆಯ ಉದ್ಯೋಗಕ್ಕಾರಂಭಿಸಿತು. ಚಿಟ್ಟೆಗಳು ನೌಬತ್ತನ್ನು ಬಾರಿಸಲಾರಂಸಿದವು. ಜೇನುನೊಣವು ಕೊಳಲನ್ನು ಬಾಜಿಸಲಾರಂಭಿಸಿತು. ಆದರೆ ಇರುಳಗಣ್ಣ ದೆಸೆಯಿಂದ ಅವು ಜತೆಯಲ್ಲಿ ಬರಲಿಲ್ಲ. ಮಿಂಚು ಹುಳುಗಳು ದೀವಟಿಗೆ ಗಳನ್ನು ಹಿಡಿದವು. ಆಕಾಶದಲ್ಲಿ ತಾರಾರಾಜಿಗಳು ಪ್ರಕಾಶಿಸಲಾರಂಭಿಸಿದವು. ಕೋಗಿಲೆಯು ವಾಲಗವನ್ನು ಮಾಡುತ್ತ ಮುಂದೆ ಮುಂದೆ ಹೊರಟಿತು. ದಿಬ್ಬಣದೊಂದಿಗೆ ಅನೇಕರು ಹೊರಟರು. ರಾಜಕುಮಾರ ಸ್ಥಳಪದ್ಮವು ಸಂಧ್ಯಾಕಾಲದಲ್ಲಿ ಅಸ್ಪಷ್ಟವಾದುದರಿಂದ ದಿಬ್ಬಣದಲ್ಲಿ ಸೇರಲಾಗಲಿಲ್ಲ. ಆದರೆ ಗುಲಾಬಿ ಮನೆತನದವರೆಲ್ಲ, ಎಂದರೆ ಬಿಳಿ ಗುಲಾಬಿ, ಹಳದಿ ಗುಲಾಬಿ, ಕೆಂಪು ಗುಲಾಬಿ ಮೊದಲಾಗಿ ಎಲ್ಲ ಮನೆತನದವರೂ ಹಾಜರಿದ್ದರು. ಕರವೀರ ದಳಗಳು ಹಿಂದಿನ ಕಾಲದ ರಾಜರಂತೆ ಬಹಳ ದೊಡ್ಡ ದೊಡ್ಡ ಕೊಂಬೆಗಳ ಮೇಲೆ ಕುಳಿತುಕೊಂಡು ಹಾಜರಾಗಿದ್ದವು. ಸೇವಂತಿಗೆಯು ವರನನ್ನು ಕರೆತಲು ತಾನೇ ಮುಂದರಿಯಬೇಕಾಗಬಹುದೆಂದು ಸರಿಯಾಗಿ ಅಲಂಕರಿಸಿ ಕೊಂಡು ಬಂದಿತ್ತು. ಸಂಪಿಗೆಯು ಪೀತಾಂಬರವನ್ನು ಧರಿಸಿ ನಿಂತಿತ್ತು. ಮತ್ತೆ ವಿಶೇಷ ಬ್ರಾಂದಿಯನ್ನು ಕುಡಿದು ಬಂದಿತ್ತು. ಬಾಯಿಂದ ಉಗ್ರವಾದ ಗಂಧವು ಹೊರಡುತ್ತಿತ್ತು. ಕೇದಿಗೆ ಹೂವಿನ ದಳಗಳು ಗುಂಪು ಗುಂಪಾಗಿ ಗಂಧವನ್ನು ಹೊರಸೂಸುತ್ತ ಎಲ್ಲರನ್ನೂ ಮುಗ್ಧಗೊಳಿಸಿದ್ದುವು. ಅಶೋಕ ಪುಷ್ಪವು ನಿಷಾದಿಂದ ಮತ್ತಾಗಿ ಕೆಂಪಾಗಿತ್ತು. ಇರುವೆಗಳ ಗುಂಪೊಂದು ದಿಬ್ಬಣದೊಂದಿಗೆ ಬಂದಿತ್ತು. ಅವುಗಳಲ್ಲಿ ಗುಣವೇನೂ ಇಲ್ಲ. ಅದಕ್ಕೆ ಬದಲಾಗಿ ಅವುಗಳ ದಂತದಂಶನದ ಭಯವು ವಿಶೇಷವಾಗಿತ್ತು. ಇಂತಹ ದಿಬ್ಬಣದಲ್ಲಿ ಎಲ್ಲವೂ ಹೇಗೆ ಸರಿಯಾಗಿರಬೇಕು ? ಯಾವ ಮದುವೆಯಲ್ಲಿ ಗದ್ದಲವಾಗಿ ಜಗಳವಾಗದೆ ಇರುವುದು? ಕುಂದ, ಕುರುವಕ, ಕುಟಜ ಮೊದ ಲಾದ ಅನೇಕ ದಿಬ್ಬಣಗಳೂ ಬಂದಿದ್ದವು. ಭ್ರಮರ ಮಹಾಶಯನ ಮೂಲಕ ಅವುಗಳ ಪರಿಚಯವಾಗಬೇಕು. ಏಕೆಂದರೆ ಭ್ರಮರವು ಎಲ್ಲ ಕಡೆಗಳಲ್ಲಿ ಸಂಚರಿಸುವುದು ಮತ್ತೆ ಅದು ಎಲ್ಲ ಕಡೆಗಳಿಂದಲೂ ಅಲ್ಪ ಸ್ವಲ್ಪ ಮಧುವನ್ನು ಸಂಗ್ರಹಿಸುವುದು.

ನನಗೂ ಆಮಂತ್ರಣವು ಬಂದಿತ್ತು, ನಾನು ಹೋದೆನು. ನೋಡಿದೆ, ವರನ ಕಡೆಯ ಜನರು ದೊಡ್ಡ ವಿಪತ್ತಿಗೆ ಸಿಕ್ಕಿರುವರು. ವಾಯುದೇವನು ದಿಬ್ಬಣದವರನ್ನೆಲ್ಲ ಹಾರಿಸಿಕೊಂಡು ಹೋಗುವಂತೆ ಕಂಡಿತು. ಆಗ ಅವನು ಹೂಂಕರಿಸುತ್ತ ವೇಗವಾಗಿ ಸಂಚರಿಸುತ್ತಿದ್ದನು. ಆದರೆ ಕೆಲಸದ ಸಮಯ ದಲ್ಲಿ ಅವನು ಎಲ್ಲಿಗೆ ಹೋಗಿ ಬಚ್ಚಿಟ್ಟುಕೊಂಡನೊ ತಿಳಿಯದು. ನಾನೂ ನೋಡಿದೆ, ವರನೂ, ದಿಬ್ಬಣದವರೂ ಮೌನದಿಂದ ಯೋಚನೆಯಲ್ಲಿ ಮುಳುಗಿ ದ್ದಾರೆ. ಮಲ್ಲಿಗೆಯ ಕುಲರಕ್ಷಣಾರ್ಥವಾಗಿ ನಾನು ಹೂಗಳಿಗೆ ವಾಹನ ವಾಗಲು ಒಪ್ಪಿಕೊಂಡೆನು. ವರನನ್ನೂ ದಿಬ್ಬಣದವರನ್ನೂ ಕರೆದುಕೊಂಡು ಮಲ್ಲಿಕಾಪುರಕ್ಕೆ ಹೋದೆನು.

ಅಲ್ಲಿ ಹೋಗಿ ನೋಡಿದೆ. ಕನ್ಯೆಯ ಕಡೆಯ ಕಾಮಿನಿಯರೆಲ್ಲ ಸಂತೋಷದಿಂದ ಮುಖಗಳನ್ನರಳಿಸುತ್ತಿದ್ದಾರೆ. ಮುಸುಕನ್ನು ತೆರೆದು ಸುಗಂಧವನ್ನು ಸೂಸುತ್ತ ಸುಖವಾಗಿ ನಗುತ್ತಿದ್ದಾರೆ. ನೋಡಿದೆ. ಒಂದು ಎಲೆ ಇನ್ನೊಂದು ಎಲೆಯನ್ನು ಅಪ್ಪಿಕೊಂಡಿದೆ. ಸುಗಂಧದ ಭಾಂಡಾರ ವನ್ನೇ ತೆರೆದಿಟ್ಟಿರುವಂತಿದೆ. ರೂಪದ ಭಯದಿಂದ ಅಲ್ಲಲ್ಲಿ ಎಲ್ಲವೂ ಚದರಿ ಬಿದ್ದಿವೆ. ಸೂಜಿಮಲ್ಲಿಗೆ, ಮಾಲತಿ, ಬಕುಲ, ರಜನೀಗಂಧಾದಿ ಸುವಾಸಿನಿ ಯರು ಪದ್ಧತಿಗನುಸಾರವಾಗಿ ವರನನ್ನು ಅಲಂಕರಿಸಿ, ಹಾಸ್ಯಮಾಡಲಾರಂಭಿ ಸಿದರು. ಅಷ್ಟರಲ್ಲಿ ಪುರೋಹಿತರು ಬಂದರು. ನಸೀರಾಮುಬಾಬುವಿನ ಒಂಭತ್ತು ವರುಷದ ಕುಸುಮುಲತೆ ಎಂಬ ಕನ್ಯೆಯು (ಸಜೀವ ಕುಸುಮ ರೂಪಿಣಿಯು) ಸೂಜಿದಾರಗಳನ್ನು ಹಿಡಿದು ನಿಂತಿದ್ದಾಳೆ. ಕನ್ಯಾಪಿತನು ಕನ್ಯಾದಾನ ಮಾಡಿದನು. ಪುರೋಹಿತೆಯು ವರಕನ್ಯೆಯರಿಗೆ ಒಂದೇ ದಾರ ದಿಂದ ಗಂಟು ಹಾಕಿದಳು.

ಬಳಿಕ ಸ್ತ್ರೀಯರು ವರನನ್ನು ಒಳಗೆ ಕರೆದುಕೊಂಡುಹೋದರು. ಎಷ್ಟುಜನ ರಸಮಯಿಗಳೂ, ಮಧುಮಯಿಗಳೂ ಆದ ಸುಂದರಿಯರು ಅಲ್ಲಿ ವರನ ಸುತ್ತಲೂ ಮುತ್ತಿಕೊಂಡರೆಂದು ಹೇಳುವುದು ಅಸಾಧ್ಯ. ಪ್ರಾಚೀನ ಲತಾಶಾಕೂರಾಣಿಯು ರಸಿಕತೆಯನ್ನು ತೋರುತ್ತ ತೋರುತ್ತ ಅವಳ ಮುಖವು ಬಾಡುತ್ತ ಬಂದಿತು. ಗುಲಾಬಿ ಮನೆತನದವರ ಮುಖ

ಗಳಲ್ಲಿ ಹಾಸ್ಯವು ಹಿಡಿಸಲಾರದಂತೆ ಸೂಸುತ್ತಿತ್ತು. ಜಾಜಿಯು ಕನ್ಯೆಯ ಜತೆಗಾರಳು. ಅವಳು ಕನ್ಯೆಯ ಮಗ್ಗುಲಲ್ಲಿ ಮಲಗಿಬಿಟ್ಟಳು. ರಜನೀ ಗಂಧ ಪುಷ್ಪವನ್ನು ಕುರಿತು ತಾಟಕಿ ರಾಕ್ಷಸಿಯೆಂದು ವರನು ಬಹಳ ತಮಾಷೆಮಾಡಿಬಿಟ್ಟನು. ಬಕುಳವು ಇನ್ನೂ ಬಾಲಿಕೆ. ಅದರಲ್ಲಿ ಗುಣವಿದ್ದಷ್ಟೂ ರೂಪವಿಲ್ಲ. ಆದ್ದರಿಂದ ಅದೊಂದು ಮೂಲೆಯಲ್ಲಿ ಕುಳಿತುಬಿಟ್ಟಿತು. ಮತ್ತೆ ದೊಡ್ಡವರ ಮನೆ ಗೃಹಿಣಿಯಂತೆ ಝೂಮ ಪುಷ್ಪವು ದೊಡ್ಡದಾಗಿ ನೀಲಿಯ ಸೀರೆಯನ್ನುಟ್ಟು ಬೇರೊಂಪೆಡೆಯಲ್ಲಿ ಕುಳಿತುಬಿಟ್ಟಿತು. ಆಗ–

"ಕಮಲ ಕಾಕಾ–ರಾತ್ರಿ ಬಹಳ ಹೊತ್ತಾಗಿದೆ–ಎದ್ದು ಒಳಗೆ ಹೋಗಬಾರದೆ? ರಾತ್ರೆ ಇಲ್ಲೇ ಇರುತ್ತೀಯಾ?" ಎಂದು ಹೇಳುತ್ತ ನಸೀರಾಮ ಬಾಬುವಿನ ಮಗಳು ಕುಸುಮಲತೆ ನನ್ನನ್ನು ಅಲ್ಲಾಡಿಸಿದಳು. ನಾನು ಬೆಚ್ಚಿಬಿದ್ದು ನೋಡಿದೆ. -ಏನೂ ಕಾಣುತ್ತಿಲ್ಲ! ಎಲ್ಲವೂ ಮಾಯವಾಗಿಬಿಟ್ಟಿತು! ಆ ವಿವಿಧ ವರ್ಣಗಳ ಹೂಗಳೆಲ್ಲಿ ಮಾಯವಾದವು!– ಈಗ ನನಗೆ ಯೋಚನೆಯು ಹೊಳೆಯಿತು.-ಜಗತ್ತು ನಿಜವಾಗಿಯೂ ಅನಿತ್ಯವಾದುದು. ಈಗ ಇತ್ತು, ಈಗ ಇಲ್ಲ - ಆ ರಮ್ಯವಾದ ದಿನವೆಲ್ಲಿ ಹೋಯಿತು? ಆ ನಗುಮೊಗದ ರಸಮಯಿಗಳಾದ ಪುಷ್ಪನಾರಿಯರೆಲ್ಲಿ ಹೋದರು? ಎಲ್ಲರೂ ಎಲ್ಲಿಗೆ ಹೋಗುವರೊ ಅಲ್ಲಿಗೆ - ಸ್ಮೃತಿದರ್ಪಣದ ತಳಕ್ಕೆ - ಭೂತಸಾಗರ ಗರ್ಭದೊಳಕ್ಕೆ. ರಾಜರು, ಪ್ರಜೆಗಳು, ಪರ್ವತಗಳು, ಸಮುದ್ರ, ಗ್ರಹ, ನಕ್ಷತ್ರಾದಿಗಳು ಎಲ್ಲಿಗೆ ಹೋಗುವವೊ ಅದೇ ಧ್ವಂಸಪುರಿ. ಈ ಮದುವೆಯಂತೆ ಎಲ್ಲವೂ ಶೂನ್ಯದಲ್ಲಿ ಲೀನವಾಗಿ ಹೋಗುವುದು. ಎಲ್ಲವೂ ಗಾಳಿಯಲ್ಲಿ ಹಾರಿಹೋಗುವುದು. ಕೇವಲ ಇರುವುದು - ಯಾವುದು? ಭೋಗವೆ? ಇಲ್ಲ, ಭೋಗದ ವಸ್ತುವಿಲ್ಲದೆ ಭೋಗವಿರುವುದು. ಹಾಗಾದರೆ ಇರುವುದೇನು? ಸ್ಮೃತಿ - ನೆನಪು ಮಾತ್ರ.

ಕುಸುಮಳು - "ಏಳಬಾರದೆ? ಏನುಮಾಡುತ್ತಿದ್ದೀಯಾ" ಎಂದಳು.

ನಾನು ಹೇಳಿದೆ-ಹೋಗೇ ಹುಚ್ಚಿ! ನಾನು ಮದುವೆ ಮಾಡುತ್ತಿದ್ದೆನು.

ಕುಸುಮಳು ನಗುತ್ತ ಮತ್ತಷ್ಟು ಸಮೀಪಕ್ಕೆ ಬಂದು ವಿಶೇಷ ಆದರದಿಂದ ಕೇಳಿದಳು - ಯಾರ ಮದುವೆ? ಕಾಕಾ (ಚಿಕ್ಕಪ್ಪ)!

ನಾನು - ಹೂವಿನ ಮದುವೆ !

ಕುಸುಮ - ಶಾಬಾಸ್ ? ಹೂವಿನ ಮದುವೆಯೆ ? ನಾನೂ ಹೂಗಳ ಮದುವೇನೇ ಮಾಡುತ್ತಿದ್ದೆ.

ನಾನು - ಎಲ್ಲಿ ?

ಕುಸುಮ - ನೋಡು, ನಾನು ಈ ಹೂಗಳ ಮಾಲೆಯನ್ನು ಕಟ್ಟಿದ್ದೇನೆ.

ನಾನು ನೋಡಿದೆ ! - ಬಾಲಿಕೆಯು ಕಟ್ಟಿದ ಮಾಲೆಯಲ್ಲಿಯೆ ನನ ವಧೂ - ವರರಿಬ್ಬರೂ ಇದ್ದಾರೆ !

ಇತಿ,

— ಶ್ರೀ ಕಮಲಾಕಾಂತ ಚಕ್ರವರ್ತಿ.



## ೧೦. "ದೊಡ್ಡ ಸಂತೆ" (ಬಡಾ ಬಾಜಾರ್)

**ಪ್ರ**ಸನ್ನ ಗೌಳಗಿತ್ತಿಗೂ ನನಗೂ ಮಹತ್ತರವಾದ ಮನಸ್ತಾಪ ಬರು ವಂತೆ ತೋರಿತು. ನಾನು ನಸೀರಾಮಬಾಬುವಿನ ಮನೆಗೆ ಬಂದ ದಿನದಿಂದ ಹಾಲು ತುಪ್ಪ ಮೊಸರು ಬೆಣ್ಣೆ ಮೊದಲಾದುವನ್ನು ಅವಳಿಂದ ತೆಗೆದು ಕೊಳ್ಳುತ್ತಿದ್ದವನು. ಪರಲೋಕದಲ್ಲಿ ಉತ್ತಮಗತಿ ಹೊಂದಬೇಕೆಂದೇ ಪ್ರಸನ್ನಳು ಇಷ್ಟು ಪುಣ್ಯ ಕಟ್ಟಿಕೊಳ್ಳುತ್ತಿರುವಳೆಂದು ನಾನು ಊಟಮಾಡು ತ್ತಿರುವಾಗಲೆಲ್ಲ ಹೇಳಿಕೊಳ್ಳುತ್ತೇನೆ. ಅಲ್ಲದೆ ಈ ಪ್ರಪಂಚವೆಂಬ ದೊಡ್ಡ ಕಾಡಿನಲ್ಲಿ ಪುಣ್ಯರೂಪಿಯಾದ ಮೃಗವನ್ನು ಹಿಡಿಯಬೇಕೆಂದು ಬಲೆಯನ್ನು ಬೀಸಿ ಅಲೆದಾಡುವವರಲ್ಲಿ ಈ ಪ್ರಸನ್ನಳು ಬಹು ಜಾಣೆ ಎಂದು ಭಾವಿಸಿದ್ದೆ. ಪ್ರಸನ್ನಳಿಗೆ ಪರಕಾಲದಲ್ಲಿ ಅಕ್ಷಯಸ್ವರ್ಗಲಾಭವಾಗಲೆಂದೂ, ಇಹದಲ್ಲಿ ಅವಳ ಆಶೋತ್ತರಗಳು ಅಭಿವೃದ್ಧಿಗೊಳ್ಳಲೆಂದೂ ನಾನು ನಿತ್ಯವೂ ಊಟ ವಾದ ಮೇಲೆ ದೇವರನ್ನು ಪ್ರಾರ್ಥನೆ ಮಾಡುತ್ತೇನೆ. ಆದರೆ ಇದೇನು ಕೇಡು! ಭಯಂಕರವಾದ ಸ್ವಾರ್ಥಪರತೆಯಿಂದ ಮನುಷ್ಯನ ಚರಿತ್ರೆಯು ಎಷ್ಟರಮಟ್ಟಿಗೆ ಕಲುಷಿತವಾಗುವುದಲ್ಲಾ? ಈಗ ಅವಳು ಹಾಲು ಮೊಸ ರಿನ ಬೆಲೆ ಕೇಳುತ್ತಿದ್ದಾಳೆ!

ಮುಖ್ಯವಾಗಿ ಅವಳೊಡನೆ ಮನಸ್ತಾಪಬಾರದೆ ನಿರ್ವಾಹವಿಲ್ಲ. ಅವಳು ಮೊದಲನೆಯ ದಿನ ಬಂದು ಬೆಲೆ ಕೇಳಿದಾಗ ಪರಿತ್ಯಾಗಮಾಡಿ ಕಳುಹಿಸಿದೆ; ಎರಡನೆಯ ದಿನ ವಿಸ್ಮಿತನಾದೆ; ಮೂರನೆಯ ದಿನ ಬೈದು ಕಳುಹಿಸಿದೆ. ಈಗ ಅವಳು ಹಾಲೂ ಮೊಸರೂ ನಿಲ್ಲಿಸಿಬಿಟ್ಟಳು. ಅಬ್ಬಾ! ಮನುಷ್ಯ ಜಾತಿಯು ಕೇವಲ ಸ್ವಾರ್ಥಪರವಾದುದೆಂದು ಇಷ್ಟು ದಿನಗಳ ಮೇಲೆ ಗೊತ್ತಾಯಿತು. ಹೃದಯ ಕ್ಷೇತ್ರದಲ್ಲಿ ಸಮಸ್ತವಾದ ಆಶೋತ್ತರಗಳನ್ನು ಪ್ರಯತ್ನಪೂರ್ವಕವಾಗಿ ನಟ್ಟು, ವಿಶ್ವಾಸವೆಂಬ ನೀರೆರೆದು ಬೆಳೆಯಿಸುವುದು ಕೂಡ ನಿರರ್ಥಕವೆಂಬುದು ಇಷ್ಟು ದಿನಗಳ ಮೇಲೆ ಗೊತ್ತಾಯಿತು. ಭಕ್ತಿ, ಪ್ರೀತಿ, ಸ್ನೇಹ, ವಿಶ್ವಾಸ ಮೊದಲಾದುವೆಲ್ಲ ವ್ಯರ್ಥವೆಂದೂ, ಮಾತುಗಳು

ಗಗನ ಕುಸುಮವೆಂದೂ ಈಗತಾನೆ ತಿಳಿದೆನು. ಎಲ್ಲವೂ ಛಾಯಾಪ್ರತಿಮೆ ಗಳು. ಅಯ್ಯೋ ಈ ಸ್ವಾರ್ಥಿ ಮನುಷ್ಯ ಜಾತಿಗೆ ಯಾರು ದಿಕ್ಕು? ಅಕಟಾ, ಹಣದಾಸೆಯುಳ್ಳ ಗೌಳಿಗರನ್ನು ಯಾರು ಕಾಪಾಡುವರು? ಅಯ್ಯೋ ಪ್ರಸನ್ನ ಗೌಳಗಿತ್ತಿಯ ಹಸುವು ಎಂದು ಕಳುವಾದೀತು!

ಪ್ರಸನ್ನಳಿಗೆ ಹಾಲು ಮೊಸರು ಇದೆ, ಅವಳು ಕೊಡುತ್ತಾಳೆ; ನನಗೆ ಹೊಟ್ಟೆಯಿದೆ ಕುಡಿಯುತ್ತೇನೆ. ಇದೇ ಅವಳಿಗೂ ನನಗೂ ಇರುವ ಸಂಬಂಧ. ಹೀಗಿರುವಾಗ, ಅವಳು ಬೆಲೆ ಕೇಳುವುದಕ್ಕೇನು ಕಾರಣವೋ ನಾನು ಕಾಣೆ. ನನಗೆ ಕಾರಣ ಗೀರಣ ತಿಳಿಯದು. "ನನ್ನ ಹಸು, ನನ್ನ ಹಾಲು, ನಾನು ಬೆಲೆ ತೆಗೆದುಕೊಳ್ಳುತ್ತೇನೆ" ಎಂದು ಪ್ರಸನ್ನಳು ಹೇಳಿದಳು. ಹಸು ಯಾರದು? ಹಸು ಯಾರದೂ ಅಲ್ಲ. ಅದು ಅದರ ಸ್ವಂತದ್ದು; ಹಾಲು ಯಾರು ಕುಡಿಯುವರೋ ಅವರದು ಎಂಬುದು ಅವಳಿಗಿನ್ನೂ ತಿಳಿಯದು.

ಆದರೆ ಈ ಪ್ರಪಂಚದಲ್ಲಿ ಬೆಲೆ ತೆಗೆದುಕೊಳ್ಳುವ ಒಂದು ಪದ್ಧತಿ ಇರುವುದೆಂದು ಒಪ್ಪಿಕೊಳ್ಳುತ್ತೇನೆ. ಆಹಾರ ಪದಾರ್ಥಗಳನ್ನು ಮಾತ್ರವೇ ಅಲ್ಲ, ಎಲ್ಲ ಪದಾರ್ಥಗಳನ್ನೂ ಬೆಲೆ ಕೊಟ್ಟು ಕೊಳ್ಳಬೇಕಾಗಿದೆ. ಅಕ್ಕಿ ಬೇಳೆ ತಿಂಡಿ ನೀರು ಹಾಲು ಮೊಸರು ಬಟ್ಟೆ ಬರೆ ಮೊದಲಾದ ವ್ಯಾಪಾರದ ದಿನಸು ಗಳು ಹಾಗಿರಲಿ. ವಿದ್ಯೆ ಬುದ್ಧಿ ಮೊದಲಾದುವನ್ನೂ ಬೆಲೆಕೊಟ್ಟು ಕೊಳ್ಳ ಬೇಕಾಗಿದೆ! ವಿದ್ಯೆಯನ್ನು ಕಾಲೇಜಿನಲ್ಲಿ ಬೆಲೆಕೊಟ್ಟು ಕೊಳ್ಳಬೇಕು. ಅನೇಕರು ಒಳ್ಳೆಯ ಮಾತುಗಳನ್ನು ಸಹ ದುಡ್ಡುಕೊಟ್ಟು ಕೊಂಡಿದ್ದಾರೆ! ಹಿಂದೂಗಳಲ್ಲಿ ಎಲ್ಲರೂ ಧರ್ಮವನ್ನು ಬೆಲೆಕೊಟ್ಟು ಕೊಳ್ಳುತ್ತಿದ್ದಾರೆ! ಯಶಸ್ಸು ಗೌರವ ಮುಂತಾದುವು ಬಹು ಸ್ವಲ್ಪ ಬೆಲೆಗೆ ಮಾರಾಟವಾಗು ತ್ತಿವೆ. ಒಳ್ಳೆಯ ಪದಾರ್ಥಗಳನ್ನು ಬೆಲೆಕೊಟ್ಟು ಕೊಳ್ಳುವುದೆಂದರೆ ಸ್ವಲ್ಪ ಮಟ್ಟಿಗೆ ಸಮ್ಮತಿಸಿದರೂ ಸಮ್ಮತಿಸಬಹುದು. ಆದರೆ ಮನುಷ್ಯರು, ಕೆಟ್ಟ ಪದಾರ್ಥಗಳನ್ನೂ ಕೂಡ ಬೆಲೆಯಿಲ್ಲದೆ ಯಾರಿಗೂ ಕೊಡದಿರುವಮಟ್ಟಿಗೆ ಕೃಪಣರಾಗಿಬಿಟ್ಟಿರುವರು. ವಿಷವನ್ನು ತಿಂದು ಸಾಯಬೇಕೆಂದು ಸಂಕಲ್ಪ ಮಾಡಿದರೆ, ಅದನ್ನು ಸಹ ಬೆಲೆಕೊಟ್ಟು ಅಂಗಡಿಯಿಂದ ಕೊಂಡುತಂದೇ ತಿನ್ನಬೇಕಾಗಿದೆ !!

ಇದೆಲ್ಲವನ್ನೂ ನೋಡಿದರೆ – "ಈ ಪ್ರಪಂಚವೇ ಒಂದು ದೊಡ್ಡ ಸಂತೆ (ಬಡಾ ಬಾಜಾರ್); ಇದರಲ್ಲಿ ಎಲ್ಲರೂ ತಮ್ಮ ತಮ್ಮ ಅಂಗಡಿಗಳನ್ನು ಹರಡಿ ಕುಳಿತಿದ್ದಾರೆ. ಪ್ರತಿಯೊಬ್ಬರ ಉದ್ದೇಶವೂ ಮೂಲ್ಯ ಪ್ರಾಪ್ತಿಯೇ" ಎಂದು ತೋರುತ್ತದೆ. "ನಮ್ಮ ಅಂಗಡಿ ಸರಕು ಒಳ್ಳೆಯದು, ಕೊಳ್ಳುವರು ಓಡಿಬನ್ನಿ" ಎಂದು ಪ್ರತಿಯೊಬ್ಬರೂ ಎಡೆಬಿಡದೆ ಕೂಗಿಕೊಳ್ಳುತ್ತಿರುವರು. ಎಲ್ಲರ ಉದ್ದೇಶವೂ ಒಂದೇ, ಗಿರಾಕಿಗಳ ಕಣ್ಣಿಗೆ ಮಣ್ಣೆರಚಿ ಕೆಟ್ಟ ಸರಕುಗಳನ್ನು ಕೈಬಿಟ್ಟು ತೊಲಗಿಸಿಕೊಳ್ಳಬೇಕು" ಎಂದು ಪರಸ್ಪರ ಮೋಸಮಾಡುವುದರಲ್ಲಿ ಯಾರು ಶಕ್ತರು ಎಂಬ ವಿಷಯವಾಗಿ ವರ್ತಕರಿಗೂ ಗಿರಾಕಿಗಳಿಗೂ ಪರಸ್ಪರ ಯುದ್ಧವಾಗುತ್ತಲೇ ಇದೆ. ಸರ್ವದಾ ಅಗ್ಗದ ಬೆಲೆಗಾಗಿ ಪ್ರಯತ್ನಮಾಡುತ್ತಿರುವುದೇ ಮನುಷ್ಯಜೀವನವೆಂದು ವ್ಯಕ್ತವಾಯಿತು.

ಯೋಚಿಸಿ ಯೋಚಿಸಿ ಮನಸ್ಸಿಗೆ ಉಂಟಾದ ಕಷ್ಟದಿಂದ ಅಫೀಮಿನ ಪರಿಮಾಣವನ್ನು ಹೆಚ್ಚಿಸಿದೆ. ಆಗ ಜ್ಞಾನ ನೇತ್ರವು ತೆರೆಯಿತು. ಎದುರಿನಲ್ಲಿಯೇ ವಿಸ್ತಾರವಾದ ಪ್ರಪಂಚವೆಂಬ ದೊಡ್ಡ ಸಂತೆಯನ್ನು ನೋಡಿದೆ! ಅದರಲ್ಲಿ ಅನೇಕಮಂದಿ ವರ್ತಕರು ಅಂಗಡಿಗಳನ್ನಿಟ್ಟು ಕುಳಿತುಕೊಂಡಿರುವರು. ಅನೇಕಮಂದಿ ಗಿರಾಕಿಗಳು ವ್ಯಾಪಾರಮಾಡುತ್ತಿದ್ದಾರೆ. ಅಸಂಖ್ಯಾತರಾದ ವರ್ತಕರಿಗೂ ಅಸಂಖ್ಯಾತರಾದ ಗಿರಾಕಿಗಳಿಗೂ ಬಹುವಾಗಿ ಹೋರಾಟವಾಗುತ್ತಿದೆ ನಾನು ಒಂದು ಚೌಕವನ್ನು ಹೆಗಲ ಮೇಲೆ ಹಾಕಿಕೊಂಡು ವ್ಯಾಪಾರಕ್ಕೆಂದು ಹೊರಟೆ! ಮೊದಲು ರೂಪದ ಅಂಗಡಿಗೆ ಹೋದೆ! ಯಾವ ವಸ್ತುವು ಮನೆಯಲ್ಲಿ ಇಲ್ಲವೋ ಅದನ್ನು ಅಲ್ಲಿ ಮೊದಲು ಹೊಂದಬಹುದು. ಅದು ಪ್ರಪಂಚದಲ್ಲಿ ಮೀನಿನ ಅಂಗಡಿಯೆಂದು ತೋರಿತು. ಪ್ರಪಂಚದ ಸುಂದರಿಯರು ಮೀನುಗಳಾಗಿ ಮೀನಿನ ಮಕ್ಕರಿಬುಟ್ಟಿಗಳನ್ನು ಹೊಕ್ಕಿರುವರು. ಬಾಳೆಮೀನು, ನಳ್ಳಿಮೀನು, ಗಿಣಿಮೀನು, ಹಾವುಮೀನು ಇವೇ ಮೊದಲಾದ ಜಾತಿಗಳಲ್ಲಿ ಸಣ್ಣವೂ ದೊಡ್ಡವೂ ಗಿರಾಕಿಗಳನ್ನು ಸೆಳೆಯಲು ಢಡಫಡನೆ ಬಾಲ ಬಡಿಯುತ್ತಿರುವುದನ್ನು ನೋಡಿದೆ. ಹೊತ್ತೇರುತ್ತ ಬಂದಹಾಗೆಲ್ಲ ಅವು ಮಾರಾಟಕ್ಕಾಗಿ ತತ್ತರಗೊಳ್ಳುತ್ತಿವೆ. ಮೀನು ಮಾರುವ ಹೆಂಗುಸರು – "ಮೀನು ಬೇಕೇ ಮೀನು, ಕುಲ ಸರೋವರದ ಅಗ್ಗವಾದ ಮೀನು; ಈಗಲೇ ಬಿಟ್ಟುಕೊಡುತ್ತೇನೆ. ಸರಕು ಮಾರಿದರೆ ಸಾಕು"

ಎಂದೂ, ಇನ್ನೊಬ್ಬಳು–"ಮೀನು ಬೇಕೇ ಮೀನು, ಧನಸಾಗರದ ಏಡಿ ಮೀನು. ಇದನ್ನು ಕೊಂಡವರಿಗೆ ಪುನರ್ಜನವಿಲ್ಲ!! ಯಜಮಾನಿಯ ಇರುವಿಕೆಯೇ ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳೆಂದು ನಂಬಿ ಯಾರು ಹಣವನ್ನು ಸೂರೆಮಾಡಬಲ್ಲರೋ ಅವರು ಇದನ್ನು ಕೊಳ್ಳಬಹುದು. ಬಂಗಾರದ ಪಾತ್ರೆಯಲ್ಲಿ ಕಣ್ಣೀರನ್ನು ತುಂಬಿ, ಹೃದಯ ಜ್ವಾಲೆಯಿಂದ ಪಾತ್ರೆಯನ್ನು ಕಾಯಿಸಿ ಅಡುಗೆಮಾಡಬೇಕು. ಇದನ್ನು ಮಾಡಬಲ್ಲ ಧೀರರು ಬರಲಿ" ಎಂದೂ, - "ಎಚ್ಚರಿಕೆ" ವಜ್ರದ ಮುಳ್ಳು. ಮಕ್ಕಳ ಬದಲು ಇದನ್ನು ಕಟ್ಟಿಕೊಂಡುದೇ ಆದರೆ ಅತ್ತೆಯ ಆಕಾರದ ಬೆಕ್ಕಿನ ಕಾಲಿಗೆ ಬಿದ್ದೇ ಬೀಳಬೇಕು. ಮುಳ್ಳಿನ ನೋವಿಗೆ ಹೆದರಿ, ಗಿರಾಕಿ ತಲೆಮರಸಿಕೊಳ್ಳುವನೇನು ?" ಎಂದು ಮತ್ತೊಬ್ಬಳೂ,-"ಉಪ್ಪು ಕಾರ, ಕಹಿ ಸಿಹಿ, ಎಣ್ಣೆ ತುಪ್ಪ, ಹಾಲು ನೀರು ಯಾವುದರಲ್ಲಿ ಇದನ್ನು ಹಾಕಿದರೂ ಲಜ್ಜಾಶೀಲವಾದ ಈ ಮೀನಿನ ಗುಣದಿಂದ ಅಡುಗೆಯಾಗಿ ಸಂಸಾರವು ಸಸಾರವಾಗಿ ಕಳೆಯುವುದು-" ಎಂದೂ, ಮಗದೊಬ್ಬಳು - "ಕೆಸರನ್ನು ಕೆದರಿ ಬಿಳಿಮೀನು ತಂದಿದ್ದೇನೆ. ಗಿರಾಕಿಯು ನೋಡಿ ಬೆರಗಾಗಬೇಕು. ಕೊಂಡು, ತೆಗೆದುಕೊಂಡು ಹೋದವನ ಮನೆ ಬೆಳಗುವುದೇ ನಿಜ" ಎಂದೂ ಸಾರಿ ಸಾರಿ ಹೇಳುತ್ತಿರುವರು.

ಇವೆಲ್ಲವನ್ನು ನೋಡಿ ಕೇಳಿದ ಮೇಲೆ "ಮೀನು ಕೊಳ್ಳುವ ಪ್ರಯತ್ನ ಮಾಡಿದೆ. ಏತಕ್ಕೆಂದರೆ ನಾವು ಮಾಂಸಾಹಾರಿಗಳಾಗದೇ ಇರಕೂಡದಂತೆ! ಮೀನಿನ ವ್ಯಾಪಾರಕ್ಕೆ ದಳ್ಳಾಳಿಗಳೂ ಇರುವರೆಂದು ಗೊತ್ತಾಯಿತು. ಅವರೇ ಪುರೋಹಿತರು! ದಳ್ಳಾಳಿಯೊಬ್ಬನು ಎದುರಿಗೆ ಸಿಕ್ಕಿದ ಕೂಡಲೆ ಮೀನಿನ "ದರ"ವನ್ನು ವಿಚಾರಿಸಿದೆ. ದರವು "ಜೀವನಸರ್ವಸ್ವ" ಎಂದು ಅವನು ಹೇಳಿದ. - ಒಳ್ಳೆಯದು, ಈ ಮೀನು ಎಷ್ಟುದಿನ ಉಪಯೋಗಕ್ಕೆ ಬಂದೀತು?" ಎಂದು ಪ್ರಶ್ನೆ ಮಾಡಿದ್ದಕ್ಕೆ, ದಳ್ಳಾಳಿಯು - "ನಾಲ್ಕಾರು ದಿನ-ಅನಂತರ ಕೊಳೆತು ನಾರುವುದು" ಎಂದು ಹೇಳಿದ. ಅದನ್ನು ಕೇಳಿ - "ಇಷ್ಟು ಬೆಲೆ ಕೊಟ್ಟು, ಇಂತಹ ನಶ್ವರ ಪದಾರ್ಥಗಳನ್ನು ಏಕೆ ಕೊಳ್ಳಲಿ ?" ಎಂದುಕೊಂಡು. ನಾನು ಮೀನಿನ ಸಂತೆಯಿಂದ ಪಲಾಯನಮಾಡಿದೆ. ಇದನ್ನು ನೋಡಿ ಮೀನು ಮಾರುವವರು, ಹೆಗಲಿನ ಮೇಲೆ ವಸ್ತ್ರ ಹಾಕಿಕೊಂಡಿದ್ದವರನ್ನು ಬಯ್ಯತೊಡಗಿದರು.

ಮೀನಿನ ಸಂತೆ ಬಿಟ್ಟವನೇ ವಿದ್ಯೆಯ ಸಂತೆಗೆ ಹೋದೆ. ಅಲ್ಲಿ ನೋಡಿದರೆ ಹಣ್ಣು ಹಂಪಲುಗಳ ಮಾರಾಟವಾಗುತ್ತಿದೆ. ಒಂದುಕಡೆ, ಮತ ಚಿನ್ಹೆಗಳನ್ನಿಟ್ಟು, ಗೋಷ್ಪಾದದಷ್ಟು ಕೂದಲುಬಿಟ್ಟು, ಟಾಸಾ ರೇಷ್ಮೆ ಮುಗುಟವನ್ನುಟ್ಟು, ಮಡಿಯನ್ನು ಹೆಗಲ ಮೇಲೆ ಹಾಕಿಕೊಂಡು, ಮಟ್ಟೆ(ಸಿಪ್ಪೆ)ತೆಂಗಿನಕಾಯಿ ಅಂಗಡಿಯಿಟ್ಟು, ಬ್ರಾಹ್ಮಣನೊಬ್ಬನು ಗಿರಾಕಿಗಳನ್ನು ಕುರಿತು ಕೂಗುತ್ತಿರುವುದನ್ನು ಕಂಡೆನು. ಬ್ರಾಹ್ಮಣನು - "ನನ್ನ ಘಟತ್ವ ಪಟತ್ವ ಕ್ಷತ್ವ ನತ್ವಗಳನ್ನು ಮಾರುತ್ತೇನೆ. ಮನೆಯಲ್ಲಿ ಅಕ್ಕಿಯಿದ್ದರೆ ಸತ್ವ, ಇಲ್ಲವಾದರೆ ನತ್ವ. ದ್ರವ್ಯತ್ವ, ಜಾತಿತ್ವ, ಗುಣತ್ವಗಳುಳ್ಳುದೇ ಪದಾರ್ಥ. ಅಪ್ಪನ ಶ್ರಾದ್ಧಕ್ಕೆ ಅಪ್ಪಣೆ ಕೊಡದ ಮಗನು ಅಪದಾರ್ಥ. ಪದಾರ್ಥ ಸತ್ವವೆಂಬುದೇ ಮಟ್ಟೆ ತೆಂಗಿನಕಾಯಿ, ತಿನ್ನುವುದು ಸಾಧ್ಯವಲ್ಲ. ಅದರ ಮೊದಲ ಮೊಟ್ಟೆಯಲ್ಲಿ ಹೆಂಡತಿಯೇ ನಿಜವಾದ ಪದಾರ್ಥವೆಂದು ಬರೆದಿದೆ ನಾರಿಕೇಳದಲ್ಲಿ ಅಭಾವವೆಂಬುದು ನಾಲ್ಕು ವಿಧ. ನಿಮ್ಮ ಮನೆಯಲ್ಲಿ ಹಣವಿದೆ. ನಮ್ಮ ಮನೆಯಲ್ಲಿ ಇಲ್ಲ - ಇದಕ್ಕೆ "ಅನ್ಯೋನ್ಯಾಭಾವ" ಎಂದು ಹೆಸರು. ಎದುವರೆಗೆ ಹಣದೊರೆಯದೋ ಆವರೆಗೆ ಪ್ರಾಗಭಾವ ಎಂದು ಹೆಸರು. ಬಂದ ಹಣವು ವೆಚ್ಚವಾಗಿ ಹೋಯಿತೆಂದರೆ ಅದು ಧ್ವಂಸಾಭಾವವೆನಿಸಿಕೊಳ್ಳುವುದು. ನಾಲ್ಕನೆಯದಾದ ಅತ್ಯಂತಾಭಾವವು ನಮ್ಮವರ ಮನೆಗಳಲ್ಲಿ ಯಾವಾಗಲೂ ಇದ್ದೇ ಇರುವುದು. ಅಭಾವವೆಂಬುದು ನಿತ್ಯವೋ ಅನಿತ್ಯವೋ ಪರೀಕ್ಷಿಸಬೇಕಾದರೆ ನಮ್ಮ ಉಗ್ರಾಣದ ಕಡೆ ಇಣಿಕಿನೋಡಿ. "ನಿತ್ಯಾಭಾವ" ವೆಂಬುದು ವ್ಯಕ್ತವಾಗುವುದು. ಈಗ ನಮ್ಮ ಮಟ್ಟೆತೆಂಗಿನಕಾಯಿ ಕೊಳ್ಳಿರಿ. ವ್ಯಾಪ್ಯ, ವ್ಯಾಪಕ, ವ್ಯಾಪ್ತಿ ಗುಣಗಳು, ಈ ತೆಂಗಿನಕಾಯಿಯಲ್ಲಿ ಇವೆ. ಬ್ರಾಹ್ಮಣನ ಕೈಯಲ್ಲಿರುವುದರಿಂದ ವ್ಯಾಪ್ಯವಾಯಿತು. ಇದರ ರಜತ ಗುಣವು ವ್ಯಾಪಕವು. ಇದನ್ನು ನೀನು ಕೊಂಡುಕೊಳ್ಳುವಿಯಾದರೆ ವ್ಯಾಪ್ತಿಯಾಗಿಯೇ ಆಗುವುದು. ಈ ಮಟ್ಟೆತೆಂಗಿನಕಾಯಿ ಕೊಂಡುಕೋ. ಎಲ್ಲವನ್ನೂ ತಿಳಿಯುವೆ. ಅಯ್ಯೋ ಕಾರ್ಯಕಾರಣ ಸಂಬಂಧಗಳೆಂಬುವು ಮಹಾ ದೊಡ್ಡ ವಿಚಾರಗಳು. ರೂಪಾಯಿಕೊಡು. ಈಗಲೇ ಒಂದು ಕಾರ್ಯವಾದಂತಾಗುವುದು. ಕಡಿಮೆಯಾಗಿ ಕೊಟ್ಟರೆ ಅದು ಅಕಾರ್ಯ. ಇನ್ನು ಕಾರಣವೇನೆಂಬುದನ್ನೂ ತಿಳುಹಿಸಲೋ! ಇದೋ, ಈ ಮಧ್ಯಾಹ್ನದ ಬಿಸಿಲಿನಲ್ಲಿ

ಮಟ್ಟಿ ತೆಂಗಿನಕಾಯನ್ನು ಮಾರಲು ತಂದಿದ್ದೇನೆ. ಬ್ರಾಹ್ಮಣಿಯೇ ಇದರ ಕಾರಣ. ಇದನ್ನು ಈಗ ಯಾರೂ ಕೊಳ್ಳದಿರುವುದಾದರೆ ಮತ್ತೆ ಮನೆಗೆ ಹೊರುವುದು ಮಹಾ ಅಕಾರಣ. ಅಕಾರಣವಾಗಬಾರದೆಂದು ಮಟ್ಟಿ ತೆಂಗಿನ ಕಾಯಿಂದ ತಲೆಯಮೇಲೆ ನೆತ್ತಿಗೆ ಹೊಡೆಯುತ್ತೇನೆ" ಎಂದು ಅವನು ಗಿರಾಕಿಗಳನ್ನು ಕೂಗುತ್ತಿದ್ದನು.

ತೀವ್ರವಾದ ಬಿಸಿಲಿನಿಂದ ಬಳಲಿ ಬೆವರಿದ ಹಣೆಯನ್ನೂ, ವಿತಂಡವಾದದಿಂದ ಉಂಟಾದ ಬ್ರಾಹ್ಮಣನ ಅಧರ ಸುಧಾವೃಷ್ಟಿಯನ್ನೂ ನೋಡಿ ಮರುಕವಾಯಿತು. - "ಸ್ವಾಮೀ ಭಟ್ಟಾಚಾರ್ಯ ಮಹಾಶಯರೇ! ಮಟ್ಟಿ ತೆಂಗಿನಕಾಯಿ ಕೊಳ್ಳುವುದಕ್ಕೇನೋ ಅಡ್ಡಿಯಿಲ್ಲ. ಆದರೆ ಅದನ್ನು ಒಡೆಯಲು ಅಂಗಡಿಯಲ್ಲಿ ಕೊಡಗತ್ತಿಯುಂಟೆ? ಮಟ್ಟಿ ಎಡೆಯುವುದು (ಸಿಪ್ಪೆ ತೆಗೆಯುವುದು) ಹೇಗೆ? ಎಂದು ಕೇಳಿದೆನು.

"ಇಲ್ಲವಯ್ಯಾ, ಕೊಡಗತ್ತಿ ಇರಿಸಿಲ್ಲ!"

"ಹಾಗಾದರೆ ತೆಂಗಿನಕಾಯಿ ಬಿಡಿಸುವುದು ಹೇಗೆ?"

"ನಾವು ಕಾಯನ್ನು ಬಿಡಿಸುವುದಿಲ್ಲ. ಅದನ್ನು ಕಚ್ಚಿ ಕಚ್ಚಿ ಮಟ್ಟಿ (ಸಿಪ್ಪೆ) ತಿನ್ನುತ್ತೇವೆ"

ಇದನ್ನು ಕೇಳಿ ನಾನು ಬ್ರಾಹ್ಮಣನಿಗೆ ನಮಸ್ಕಾರಮಾಡಿ ಹತ್ತಿರದಲ್ಲಿಯೇ ಮತ್ತೊಂದು ಅಂಗಡಿಗೆ ಹೋದೆ.

ವಿದ್ಯೆಯ ಸಂತೆಗೆ ಎದುರಾಗಿಯೇ "ಎಕ್ಸ್ಪೆರಿಮೆಂಟಲ್‌ಸೈನ್ಸ್" ಅಂಗಡಿ. ಇಟ್ಟಿರುವವರು ಕೆಲವು ಜನ ಸಾಹೇಬರು. ಮಟ್ಟಿಯ ತೆಂಗಿನ ಕಾಯಿ, ಬಾದಾಮಿ ಪಿಸ್ತಾ ಅಡಕೆ ಮುಂತಾದುವು ಮಾರಾಟಕ್ಕೆ ಇಟ್ಟಿರುವ ದಿನಸುಗಳು. ಅಂಗಡಿಯ ಮುಂಭಾಗದಲ್ಲಿ ಮೇಲ್ಗಡೆ ಹಿತ್ತಾಳೆಯ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಹೀಗೆ ಬರೆದಿತ್ತು. —

Messrs.

BROWN JONES & ROBINSON

NUT SUPPLIERS

(*Established 1757*)

## On the Field of Plassey

Messrs. Brown Jones & Robinson

Offer to the Indian Public

A Large Assortment of Nuts Physical,
Metaphysical, Logical & Illogical

AND

Sufficient to Break The Jaws And
Dislocate the Teeth of

ALL INDIAN YOUTHS

Who stand in Need of having
Their Dental Superfluities
Curtailed.

ಅಂಗಡಿಯುವರು "ಬನ್ನಿ ಕಪ್ಪು ಹುಡುಗರೇ ಬನ್ನಿ!" ಎಕ್ಸ್ಪೆರಿಮೆಂಟಲ್‌ಸೈನ್‌ಸ್ ಅನುಭವಿಸುವಿರಂತೆ! ಬನ್ನಿರಿ. ಇದೊ! ಒಂದನೆಯ ನಂಬರು ಎಕ್ಸ್ಪೆರಿಮೆಂಟು - ಮುಷ್ಟಿಪ್ರಹರ! ಇದರಿಂದ ಹಲ್ಲು ಬುಡಸಹಿತ ಕಳಚಿಕೊಳ್ಳುವುದು; ತಲೆ ಒಡೆಯುವುದು; ಮೂಳೆ ಮುರಿಯುವುದು. ನಾವು ಈ ಎಕ್ಸ್ಪೆರಿಮೆಂಟುಗಳನ್ನೆಲ್ಲಾ ದುಡ್ಡುಕೇಳದೆ ಉಚಿತವಾಗಿ ತೋರಿಸುತ್ತೇವೆ. ಕಂಡವರ ತಲೆ ಅಥವಾ ಬಲಹೀನವಾದ ಮೂಳೆ ಸಿಕ್ಕಿದರೆ ಸಾಕು.

"ನಾವು ಸ್ಥೂಲ ಪದಾರ್ಥಗಳ ಸಂಯೋಗ ವಿಯೋಗಕಾರ್ಯಗಳಲ್ಲಿ ಕುಶಲಿಗಳು. ರಸಾಯನಶಾಸ್ತ್ರ ಬಲದಿಂದಾಗಲೀ ವಿದ್ಯುಚ್ಛಕ್ತಿಯ ಬಲದಿಂದಾಗಲೀ, ಆಕರ್ಷಣಾಪಕರ್ಷಣಗಳಿಂದಾಗಲೀ ಜಡಪದಾರ್ಥಗಳನ್ನು ವಿಂಗಡಿಸುವುದರಲ್ಲಿ ನಾವು ನಿಪುಣರು. ಆದರೆ ಇವೆಲ್ಲಕ್ಕಿಂತಲೂ ಮುಷ್ಟಿಪ್ರಹಾರದಿಂದ ತಲೆ ಮೊದಲಾದುವನ್ನು ವಿಂಗಡಮಾಡುವುದರಲ್ಲಿ ನಾವು ಸಿದ್ಧಹಸ್ತರು. ಮಧ್ಯಾಕರ್ಷಣ, ಯೋಗಿಕಾಕರ್ಷಣ, ಸೂಜಿಕಲ್ಲಿನ ಆಕರ್ಷಣ- ಇವೇ ಮೊದಲಾದ ಬಗೆ ಬಗೆಯ ಆಕರ್ಷಣಗಳ ವಿಷಯುವನ್ನು ನಾವು ಬಲ್ಲೆವು; ಆದರೆ ಇವೆಲ್ಲಕ್ಕಿಂತಲೂ ಕೇಶಾಕರ್ಷಣ ವಿಷಯದಲ್ಲಿ ನಾವು ಪಾರಂಗತರು. ಈ ಪ್ರಪಂಚದ ಪದಾರ್ಥಗಳಿಗೆ ಬಗೆ ಬಗೆಯ ಯೋಗಗಳುಂಟಾಗುತ್ತಿರುವುದನ್ನು ನೋಡಿದ್ದೇವೆ. ಆಮ್ಲಜನಕ ಮತ್ತು ನಿರ್ಗಂಧ

ವಾಯುಗಳ ಸಂಯೋಗವೇ ಗಾಳಿ; ಜಲಜನಕ ಮತ್ತು ಅಮ್ಲಜನಕಗಳ ರಸಾಯನಿಕಯೋಗವೇ ನೀರು, ಇತ್ಯಾದಿ. ಹೀಗೆಯೇ ನಿಮ್ಮ ಬೆನ್ನಿನ ಮೇಲೆ ನಮ್ಮ ಕೈಯಿಂದ ಮುಷ್ಟಿಯೋಗವಾಗುವುದು. ಇವೆಲ್ಲವನ್ನೂ ಪರೀಕ್ಷಿಸ ಬೇಕಾದಲ್ಲಿ ತಲೆಯನ್ನೆತ್ತಿಕೊಂಡು ನಿಲ್ಲಿರಿ. ಎಕ್ಸ್ಪೆರಿಮೆಂಟ್ ಮಾಡಿ ತೋರಿ ಸುತ್ತೇನೆ. ಗ್ರಾವಿಟೇಶನಿನ ಬಲದಿಂದ ಈ ತೆಂಗಿನಕಾಯಿಗಳೇ ಮೊದ ಲಾದುವು ನಿಮ್ಮ ತಲೆಯ ಮೇಲೆ ಬೀಳುವುದೂ, ಪರ್ಕಷನ್ (Percussion) ಎಂಬ ಅದ್ಭುತವಾದ ಶಬ್ದಸಂಬಂಧದ ರಹಸ್ಯವೂ ನಿಮಗೇ ತಿಳಿಯ ಬರುವುದು. ಇಷ್ಟರ ಮೇಲೆ ನಿಮ್ಮ ಮೆದುಳಿನಲ್ಲಿರುವ ಸ್ನಾಯವ ಪದಾರ್ಥ ಗಳ ಗುಣದಿಂದ ನೀವು ವೇದನೆಯನ್ನೂ ಅನುಭವಿಸುವಿರಿ!

"ಹಣವನ್ನು ಮುಂಗಡವಾಗಿಕೊಡಿ, ಎಂದರೆ ಎಲ್ಲ ಎಕ್ಸ್ಪೆರಿಮೆಂಟು ಗಳನ್ನೂ ಉಚಿತ ಉಚಿತವಾಗಿ ಅನುಭವ ಮಾಡುವಿರಿ" ಎಂದು ಕೂಗಿ ಕರೆಯುತ್ತಿದ್ದರು.

ನಾನು ಇವೆಲ್ಲವನ್ನೂ ನೋಡುತ್ತಲೂ ಕೇಳುತ್ತಲೂ ಇದ್ದಾಗ ಹಠಾ ತ್ತಾಗಿ ಆ ಇಂಗ್ಲೀಷ್ ಅಂಗಡಿಯವರು ದೊಣ್ಣೆಗಳನ್ನು ಎತ್ತಿಕೊಂಡು ಓಡೋಡುತ್ತ ಬಂದು ಬ್ರಾಹ್ಮಣರ ಮಟ್ಟೆ ತೆಂಗಿನಕಾಯ ರಾಶಿಯನ್ನು ಮುತ್ತಿದರು! ಇದನ್ನು ಕಂಡ ಎಲ್ಲ ಬ್ರಾಹ್ಮಣರು ತೆಂಗಿನಕಾಯಿಗಳನ್ನು ಬಿಟ್ಟು ಮಡಿಪಂಚೆಗಳನ್ನು ಎಸೆದು ಬರಿಗೈಯಲ್ಲಿ ದಿಕ್ಕೆಟ್ಟು ಓಡಲಾರಂಭಿ ಸಿದರು!!

ಆಗ ಸಾಹೇಬರು ಅವರು ಬಿಟ್ಟುಹೋದ ತೆಂಗಿನಕಾಯಿಗಳನ್ನೆಲ್ಲ ತಮ್ಮ ಅಂಗಡಿಗೆ ತಂದು ಹಾಕಿಕೊಂಡು ಸೀಮೆಯ ಅಸ್ತ್ರಗಳಿಂದ ಅದನ್ನು ಒಡೆದು ತಿನ್ನುತ್ತ ಸುಖವಾಗಿ ಕುಳಿತರು. "ಇದೆಲ್ಲಾ ಏನೆಂದು ನಾನು ಪ್ರಶ್ನೆ ಮಾಡಿದುದಕ್ಕೆ ಸಾಹೇಬರು "ಇದಕ್ಕೆ Asiatic Researches (ಏಸಿ ಯಾಟಿಕ್ ರೀಸರ್ಚಸ್) ಎಂದು ಹೆಸರು" ಎಂದರು. ಅದನ್ನು ಕೇಳಿ ಭಯಪಟ್ಟು ನನ್ನ ಶರೀರದಿಂದ ಅವರು Anatomical Researches ಮಾಡಿಯಾರೆಂದು ಶಂಕಿಸಿ ಆ ಸ್ಥಳದಿಂದ ಬೇಗ ಪಲಾಯನ ಮಾಡಿದೆ.

ಮುಂದೆಯೇ ಸಾಹಿತ್ಯದ ಸಂತೆ. ವಾಲ್ಮೀಕಿಯೇ ಮೊದಲಾದ ಋಷಿ ಸಮೂಹವು ಅಮೃತ ಫಲಗಳನ್ನು ವಿಕ್ರಯಿಸುತ್ತಿರುವುದನ್ನು ನೋಡಿದೆ. ಇದೇ ಸಂಸ್ಕೃತ ಸಾಹಿತ್ಯವೆಂದು ಗೊತ್ತಾಯಿತು. ಅಲ್ಲದೆ ಕೆಲವು ಮಂದಿ ಗಳು ಸಣ್ಣವೂ ಸುಲಭವೂ ಆಗಿರುವ ಕೆಲ ಕೆಲವು ಸೇಬು-ಅಂಜೂರ ಅನಾನಸು-ಮೂಸುಂಬಿ-ದಾಳಿಂಬೆ ಮೊದಲಾದ ರುಚಿಕರ ಫಲಗಳನ್ನು ಮಾರುತ್ತಿರುವರು. ಇವೆಲ್ಲವೂ ಪಾಶ್ಚಾತ್ಯ ಸಾಹಿತ್ಯವೆಂದು ತಿಳಿಯಿತು ಹತ್ತಿರದಲ್ಲಿಯೇ ಮತ್ತೂ ಒಂದು ಅಂಗಡಿ ನೋಡಿದೆ! ಲೆಕ್ಕವಿಲ್ಲದಷ್ಟು ಮಂದಿ ಹೆಂಗಸರೂ ಮಕ್ಕಳೂ ಅದರಲ್ಲಿ ವ್ಯಾಪಾರಮಾಡುತ್ತ ಕುಳಿತಿರುವರು! ದೊಂಬಿಯ ದೆಸೆಯಿಂದ ಒಳಗೆ ಹೋಗಲಾಗಲಿಲ್ಲ. "ಇಲ್ಲಿ ಮಾರುವುದೇನು?" ಎಂದು ಹೊರಗಿನಿಂದಲೇ ಕೇಳಿದೆ.

"ದೇಶೀಯ ಸಾಹಿತ್ಯ" ಎಂದು ಅಲ್ಲಿದ್ದ ಹುಡುಗರು ಹೇಳಿದರು. ಮಾರುವವರು ಯಾರು? ಎಂದು ಕೇಳಿದೆ. "ನಾವುಗಳೆ ಮಾರುವವರು; ವಯಸ್ಸಾದವರೂ ಒಬ್ಬಿಬ್ಬರಿದ್ದಾರೆ. ಇಷ್ಟರ ಮೇಲೆ ಸುತ್ತ ಮುತ್ತಲ ವರ್ತಕರ ಪರಿಚಯ ಬೇಕಾಗಿದ್ದಲ್ಲಿ ನಮ್ಮಲ್ಲಿರುವ "ಪತ್ರಾವಳಿ" ಎಂಬ ಗ್ರಂಥ ದಲ್ಲಿ ದೊರೆಯುವುದು" ಎಂದರು.

ಇದೆಲ್ಲವನ್ನೂ ಕೊಳ್ಳುವವರು ಯಾರು? ಎಂದು ಕೇಳಿದ್ದಕ್ಕೆ ಅವರು "ನಾವೇ" ಎಂದು ಉತ್ತರಕೊಟ್ಟರು. ಆಗ ಮಾರಲಿಟ್ಟಿರುವ ಪದಾರ್ಥ ಗಳನ್ನು ನೋಡುವ ಲವಲವಿಕೆಯಾಯಿತು. ತರಿಸಿ ನೋಡಿದೆ; ಹಳೆಯ ನ್ಯೂಸ್ ಪೇಪರಿನಲ್ಲಿ ಸುತ್ತಿಟ್ಟಿರುವ ಅನಾರೋಗ್ಯಕರವಾದ ಅರ್ಧ ಬಲಿತ ಬಾಳೆಯ ಕಾಯಿಗಳು!

ಮುಂದೆಯೇ ಗಾಣಿಗರ ಸಂತೆ. ಹತ್ತಿರದಲ್ಲಿಯೇ ಎಣ್ಣೆಯ ಗಡಿಗೆ ಗಳನ್ನು ಇಟ್ಟುಕೊಂಡು ಉಮೇದುವಾರರೆಂಬ ಎಷ್ಟೋಮಂದಿ ಹೊಗಳು ಭಟ್ಟರು ಸಾಲು ಸಾಲಾಗಿ ಕುಳಿತಿದ್ದಾರೆ. ನಿಮ್ಮ ಸೊಂಟದಲ್ಲಿ ಚಾಕರಿ ಸಿಕ್ಕಿಸಿ ಕೊಂಡಿರುವಿರೆಂದು ತಿಳಿದರೆ ಸಾಕು, ಗಡಿಗೆ ಮುಂದಕ್ಕೆ ಎಳೆದು ನಿಮ್ಮ ಕಾಲು ಹಿಡಿದು, ಎಣ್ಣೆ ಹಚ್ಚಲು ಆರಂಭಿಸುವರು. ಚಾಕರಿ ಇಲ್ಲದಿದ್ದರೂ ಕೂಡ, ಇದ್ದರೂ ಇರಬಹುದೆಂಬ ಊಹೆಯಿಂದ ನಿಮ್ಮ ಕಾಲುಹಿಡಿದು ಎಣ್ಣೆ

ತಿಕ್ಕುತ್ತಾ ಕೂತುಕೊಳ್ಳುವರು. ನಿಮ್ಮಬಳಿ ಚಾಕರಿ ಇಲ್ಲ, ಹೋಗಲಿ! ನಗದು ರೊಕ್ಕವಿರುವುದಷ್ಟೆ ಅದನ್ನೇ ಕೊಡಿ, ಎಣ್ಣೆ ತಿಕ್ಕುತ್ತೇವೆ? ಎಂದು ಕೆಲವರೂ, ನಿಮ್ಮ ತೋಟದಲ್ಲಿ ಕುಳಿತು ನೀವು ಬ್ರಾಂಡಿ ಕುಡಿಯುವಾಗ ನಾನು ನಿಮ್ಮ ಕಾಲಿಗೆ ಎಣ್ಣೆ ಹಚ್ಚಲೊಪ್ಪುತ್ತೇನೆ; ಸದ್ಯ ನನ್ನ ಮಗಳ ಮದುವೆಯಾದರೆ ಸಾಕು, ಎಂದು ಪ್ರಾರ್ಥಿಸುತ್ತ ಕೆಲವರೂ, ನಿಮ್ಮ ಕಿವಿಗೆ ಸರ್ವದಾ ಸಂತೋಷ ವಾರ್ತೆಯೆಂಬ ಸುಗಂಧ ತೈಲವನ್ನು ಹಾಕುತ್ತೇನೆ. ಮನೆಯ ಗೋಡೆಯನ್ನು ದಯಮಾಡಿ ನಿಲ್ಲಿಸಿಕೊಡಬೇಕೆಂದು ಕೆಲವರೂ, ನನ್ನ ವರ್ತಮಾನ ಪತ್ರವು ಸರಿಯಾಗಿ ನಡೆದಲ್ಲಿ ನಿಮ್ಮ ಹಜಾರದಲ್ಲಿ ಧೂಪ ಹಾಕುವೆನೆಂದು ಹರಕೆ ಹೊರುತ್ತ ಕೆಲವರೂ, ಹೋಗಿಬರುವವರ ಕಾಲುಗಳನ್ನು ಹಿಡಿದೆಳೆದು ಎಣ್ಣೆ ಹಚ್ಚುವುದನ್ನು ಕಂಡೆನು. ಈ ಗಾಣಿಗರ ಪೋಟಾಪೋಟಿಯಿಂದ ಅನೇಕರ ಕಾಲು ಮುರಿದುಹೋದ ಸಂಗತಿ ಕೇಳಿದ್ದೇನಾಗಿ, ಯಾವನಾದರೊಬ್ಬ ಗಾಣಿಗನು ಅಫೀಮನ್ನು ಬೇಡಿ ನನ್ನ ಕಾಲಿಗೂ ಎಣ್ಣೆ ಹಚ್ಚಿಯಾನೆಂಬ ಭಯದಿಂದ ನಾನು ಅಲ್ಲಿ ನಿಲ್ಲದೆ ಪಲಾಯನ ಮಾಡಿದೆನು.

ಸ್ವಲ್ಪ ದೂರದಲ್ಲಿಯೇ ಯಶಸ್ಸೆಂಬ ಫಲಹಾರ ಮಂದಿರಗಳು! ವರ್ತಮಾನ ಪತ್ರ ಲೇಖಕರೆಂಬ ಫಲಾಹಾರದಂಗಡಿಯ ಮಾಲೀಕರು ಅಂಗಡಿಯಲ್ಲಿ ಬೆರಕೆ ಹಿಟ್ಟಿನ ದೋಸೆಯಿಟ್ಟು ನಗದು ಹಣಕ್ಕೆ ಬಿಕರಿ ಮಾಡುತ್ತಿದ್ದಾರೆ. ಬೀದಿಯ ಜನರನ್ನು ಹಿಡಿದು ಬಲವಂತಮಾಡಿ ದೋಸೆಕೊಟ್ಟು ಅನಂತರ ಬೆಲೆಗೆ ಕೈನೀಡುತ್ತಾರೆ. ಬೆಲೆಯ ಹಣ ಬಾರದಿದ್ದರೆ ಹೊದ್ದಬಟ್ಟೆ ಕಿತ್ತುಕೊಳ್ಳುವರು. ಇನ್ನೊಂದು ಕಡೆ ಈ ಜನರಿಂದ ಮಾರಲ್ಪಟ್ಟಿರುವ ಯಶಸ್ಸಿನ ದುರ್ಗಂಧದಿಂದ ದಾರಿಹೋಕರು ಮೂಗು ಮುಚ್ಚಿಕೊಂಡು ಓಡುತ್ತಿರುವರು! ಅಂಗಡಿಯವರು ಮಜ್ಜಿಗೆ ಬೆರಸದೆ ಕೇವಲ ಬೆರಕೆ ಹಿಟ್ಟಿನ ದೋಸೆಮಾಡಿ ಸುಲಭ ದರದಲ್ಲಿ ಮಾರಾಟಮಾಡುತ್ತಿದ್ದಾರೆ. ಕೆಲವರು ರೂಪಾಯಿಗೆ,ಕೆಲವರು ಪಾವಲಿಗೆ,ಕೆಲವರು ಆಣೆ ದೊಡ್ಡಾಣೆಗಳಿಗೆ ಕೊಂಡುಹೋಗುವರು; ಕೆಲವರು ನಂಬಿಕೆಯಮೇಲೆ ವ್ಯಾಪಾರ ಮಾಡುವರು. ಕೆಲವರು ಒಂದು ಹೊತ್ತಿನ ಗಟ್ಟಿ ಫಲಹಾರದಿಂದಲೇ ತೃಪ್ತರು, ಮತ್ತೆಕೆಲವರು ಧಣಿಯ ಗಾಡಿ ಏರುವಂತಾಗುವವರೆಗೂ ಯಶೋವಿಕ್ರಯ ಮಾಡುತ್ತಿರುವರು.

ಮತ್ತೊಂದು ಕಡೆ ಅಧಿಕಾರವರ್ಗದವರು ರಾವ್ ಬಹದ್ದೂರ್, ರಾಜಾ ಬಹದ್ದೂರ್, ಬಿರುದುಗಳು, ಖಿಲ್ಲತ್ತುಗಳು, ಆಹ್ವಾನ ಪತ್ರಗಳು, ಧನ್ಯವಾದಗಳು - ಇವೇ ಮೊದಲಾದ ಸಿಹಿ ಪದಾರ್ಥಗಳನ್ನು ಅಣಿಮಾಡಿ, ಮಿಠಾಯಿ ಅಂಗಡಿಗಳನ್ನು ಇಟ್ಟುಕೊಂಡಿರುವರು. ಚಂದಾ, ನಮಸ್ಕಾರ, ಹೊಗಳಿಕೆ, ಆಸ್ಪತ್ರೆ, ಛತ್ರ ಮೊದಲಾದ ಬೆಲೆಗೆ ಮಿಠಾಯಿಯ ಮಾರಾಟವಾಗುತ್ತಿದೆ! ಆದರೆ ಮಾರಾಟದಲ್ಲಿ ಒಂದೂ ನಿಯಮವಿಲ್ಲ. ಕೆಲವರಿಗೆ, ತಮ್ಮಲ್ಲಿರುವುದನ್ನೆಲ್ಲಾ ಕೊಟ್ಟರೂ ಒಂದು ಚೂರೂ ಸಿಕ್ಕುವುದಿಲ್ಲ! ಮತ್ತೆ ಕೆಲವರು ಸಲಾಮು, ಮಾತ್ರ ಹಾಕಿ ಒಂದೂವರೆ ಮಣ ಮಿಠಾಯಿ ಕೊಳ್ಳುವರು!! ಈ ಬಗೆಯ ಅನೇಕ ಅಂಗಡಿ ನೋಡಿದೆ; ಎಲ್ಲ ಕಡೆಯಲ್ಲಿಯೂ ಕೊಳೆತ ಮಾಲು, ಅಡ್ಡ ಖರೀದಿ. ಸರಿಯಾದ ಅಂಗಡಿ ಕಾಣಲೇ ಇಲ್ಲ. ಒಂದು ಅಂಗಡಿ ಮಾತ್ರ ನೋಡಿದೆ - ಅದೂ ಬಹು ಆಶ್ಚರ್ಯಕರ!

ನೋಡಿದೆ; ಅಂಗಡಿಯಲ್ಲಿ ಕಗ್ಗತ್ತಲೆ, ಯಾವುದೂ ಕಾಣುವುದಿಲ್ಲ. ಕೂಗಿದರೂ ಅಂಗಡಿಯವನ ಉತ್ತರವಿಲ್ಲ. ಆದರೆ, ಎಲ್ಲ ಜೀವಿಗಳಿಗೂ ಭಯವನ್ನುಂಟುಮಾಡುವಂತಹ ಅನಂತ ಗರ್ಜನೆ ಮಾತ್ರ ಕೇಳಿತು! ಬಾಗಿಲಲ್ಲಿ ಕಟ್ಟಿದ್ದ ಹಲಗೆಯ ಮೇಲಿನ ಬರಹವನ್ನು ಮುಸುಕು ಬೆಳಕಿನಲ್ಲಿ ಓದಿದೆ:—

"ಯಶಸ್ಸಿನ ಅಂಗಡಿ!"

ಮಾರತಕ್ಕದು - ಅನಂತ ಯಶ!

ಮಾರುವವನು - ಕಾಲ! ಬೆಲೆ - ಜೀವನ!!—

ಬದುಕಿರುವವರೊಬ್ಬರೂ ಇಲ್ಲಿಗೆ ಬರಲಾಗುವುದಿಲ್ಲ ಮತ್ತೆಲ್ಲಿಯೂ ಯಶಸ್ಸು ಮಾರುವುದಿಲ್ಲ!!!"—

ಓದಿ ಆಲೋಚಿಸಿದೆ. ನನಗೆ ಯಶಸ್ಸಿನಿಂದ ಫಲವಿಲ್ಲ. ಕಮಲಾಕಾಂತನ ಜೀವವೊಂದಿದ್ದರೆ ಯಶಸ್ಸು ದೊರೆಯುವುದು ಎಂದುಕೊಳ್ಳುತ್ತ ಹಾಗೆಯೇ ನ್ಯಾಯದ ಅಂಗಡಿಗೆ ಹೋದೆನು. ನೋಡಿದರೆ ಅದೇ ಕಟುಕರ ಅಂಗಡಿ! ಟೋಪಿ ತಲೆಯ ಹಾಗೆಯೇ ಕರಿದಲೆಯ ಚಿಕ್ಕ ದೊಡ್ಡ ಕಟುಕರು

ಕತ್ತಿಹಿಡಿದು ಹಸುವನ್ನು ಕತ್ತರಿಸುತ್ತಿದ್ದಾರೆ. ಎಮ್ಮೆಗಳೇ ಮೊದಲಾದ ದೊಡ್ಡದೊಡ್ಡಪಶುಗಳೆಲ್ಲವೂ ಕೊಂಬುಗಳಿಂದ ಇರಿಯುತ್ತ ತಪ್ಪಿಸಿಕೊಂಡೋಡುತ್ತಿವೆ. ಆಡು, ಕುರಿ, ಹಸು ಮೊದಲಾದ ಸಾಧು ಪಶುಗಳು ಮಾತ್ರ ಬಲಿಬೀಳುತ್ತಿವೆ! ಕಟುಕರವನೊಬ್ಬನು ನನ್ನನ್ನು ನೋಡಿ ಹಸುವಾಗಿರಬೇಕೆಂದು ಭಾವಿಸಿ "ಬಾಮ್ಮಾ ಹಸು, ಕತ್ತರಿಸುತ್ತೇನೆ - ಬಾಮ್ಮಾ" ಎಂದು ಕರೆದನು! ನಾನು ಅವನಿಗೆ ಸಲಾಂ ಹಾಕಿ ಪಲಾಯನಮಾಡಿದೆ!

ದೊಡ್ಡ ಸಂತೆಯಲ್ಲಿ ಸುತ್ತಾಡಬೇಕೆಂಬ ಆಸೆ ಇಲ್ಲಿಗೆ ಮುಗಿಯಿತು. ಆದರೆ ಪ್ರಸನ್ನಳ ಮೇಲೆ ಕೋಪವಿದ್ದುದರಿಂದ ಒಂದು ಸಾರಿ ಗೊಲ್ಲರಕೇರಿ ಕಡೆ ಹೋಗಿ ನೋಡಿದೆ. ಖುದ್ದು ಕಮಲಾಕಾಂತ ಚಕ್ರವರ್ತಿಯ ಹೆಸರಿನಿಂದ, ಗೊಲ್ಲತಿಯೊಬ್ಬಳು ದಪ್ತರ ರೂಪದ ಕೊಳೆತ ಮಜ್ಜಿಗೆ ಗಡಿಗೆಯನ್ನು ಹತ್ತಿರ ಇಟ್ಟು ಕುಳಿತುಕೊಂಡೇ ಇದ್ದಾಳೆ. ಅದರಿಂದ ಅವಳೂ ಮಜ್ಜಿಗೆ ಕುಡಿಯುತ್ತಿದ್ದಾಳೆ. ಹಾಗೆಯೇ ಇತರರಿಗೂ ಮಜ್ಜಿಗೆ ಕುಡಿಸುತ್ತಿದ್ದಾಳೆ. ಇವೆಲ್ಲವನ್ನೂ ನೋಡಿದೆ.

ಆಗ ಎಚ್ಚರವಾಯಿತು. ಕಣ್ಣು ತೆರೆದೆ. ನೋಡಿದರೆ ನಸೀಬಾಬುಗಳ ಮನೆಯಲ್ಲಿಯೇ ಇದ್ದೇನೆ. ಆದರೆ ಮಜ್ಜಿಗೆಯ ಗಡಿಗೆ ಹತ್ತಿರದಲ್ಲಿತ್ತು. ಪ್ರಸನ್ನಳು ಒಂದು ಗಡಿಗೆ ಮಜ್ಜಿಗೆ ತಂದು, "ಚಕ್ರವರ್ತಿ ಮಹಾಶಯ, ಕೋಪಮಾಡಿಕೊಳ್ಳಬೇಡ, ಇಂದು ಇನ್ನು ಹಾಲು ಮೊಸರುಗಳಿಲ್ಲ, ಈ ಮಜ್ಜಿಗೆಯನ್ನು ತಂದಿದ್ದೇನೆ? ಇದಕ್ಕೆ ಬೆಲೆಯೇನೂ ಕೊಡಬೇಕಾಗಿಲ್ಲ" ಎಂದು ನನ್ನನ್ನು ಸಮಾಧಾನಮಾಡುತ್ತಿದ್ದಾಳೆ.

ಇತಿ,

— ಶ್ರೀ ಕಮಲಾಕಾಂತ ಚಕ್ರವರ್ತಿ.

---

## ೧೧. ನನ್ನ ದುರ್ಗೋತ್ಸವ

**ಸ**ಪ್ತಮಿಾ (ನವರಾತ್ರಿ) ಪೂಜೆಯದಿನ ಇಷ್ಟು ಭಂಗಿ ಸೇವಿಸುವುದಕ್ಕೆ ನನಗೆ ಹೇಳಿದವರಾರು! ನಾನು ಯಾಕೆ ಭಂಗಿ ಸೇವಿಸಿದೆ! ನಾನು ದೇವಿ ಪ್ರತಿಮೆಯನ್ನು ನೋಡಲು ಹೋದದ್ದೇಕೆ! ಮತ್ತೆ ಯಾವುದನ್ನು ನಾನು ನೋಡಲಾಗುವುದಿಲ್ಲವೊ ಅಂಥಾದ್ದನ್ನು ನೋಡಿದೆನೇಕೆ! ಈ ಇಂದ್ರಜಾಲ ವನ್ನು ತೋರಿಸಿದವರಾರು!

ನನ್ನ ಕಣ್ಣಿಗೆ ಕಾಣುತ್ತಿರುವುದೇನು!– ಅಕಸ್ಮಾತ್ತಾಗಿ ಕಾಲವು ಪ್ರವಾಹರೂಪವಾಗಿ ದಿಗಂತದವರೆಗೆ ವ್ಯಾಪಿಸಿ, ಪ್ರಬಲವೇಗದಿಂದ ಹರಿಯುತ್ತಿದೆ. ನಾನೂ ಅದರಲ್ಲಿ ಸಣ್ಣ ದೋಣಿಯೊಂದರಲ್ಲಿ ಕುಳಿತಿದ್ದೇನೆ. ಎತ್ತ ತಿರುಗಿದರೂ ಅನಂತ ಅಪಾರ ಅಂಧಕಾರ. ಬಿರುಗಾಳಿಯಿಂದ ಆ ಪ್ರವಾಹದಲ್ಲಿ ದೊಡ್ಡ ಅಲೆಗಳು ಏಳುತ್ತಿವೆ. ಮಧ್ಯ ಮಧ್ಯದಲ್ಲಿ ಉಜ್ವಲ ವಾದ ನಕ್ಷತ್ರಗಳೂ ಕಾಣಿಸುವವು. ಕ್ಷಣಕಾಲ ಮರೆಯಾಗುವವು, ಮತ್ತೆ ಕಾಣಿಸಲಾರಂಭಿಸುವವು. - ಅಲ್ಲಿರುವವನು ನಾನು ಒಬ್ಬನೇ ಒಬ್ಬ. ಒಬ್ಬನೇ ಆದ್ದರಿಂದ ಭಯವೂ ಹುಟ್ಟಿತು. ಕೇವಲ ಒಬ್ಬಂಟಿಗ, ತಾಯಿಯೂ ಹತ್ತಿರ ವಿಲ್ಲ, "ಅಮ್ಮಾ! ಅಮ್ಮಾ" ಎಂದು ಕೂಗಲಾರಂಭಿಸಿದೆ. ಈ ಕಾಲಸಾಗರ ದಲ್ಲಿ ತಾಯಿಯನ್ನು ಹುಡುಕುವುದಕ್ಕೆ ಬಂದಿದ್ದೇನೆ, ಅಮ್ಮನೆಲ್ಲಿದ್ದಾಳೆ? ನನ್ನ ತಾಯಿ ಎಲ್ಲಿ? ಕಮಲಾಕಾಂತಪ್ರಸೂತೆ ಭಾರತಮಾತೆ ಎಲ್ಲಿ? ಘೋರ ವಾದ ಈ ಕಾಲ ಸಮುದ್ರದಲ್ಲಿ ನೀನೆಲ್ಲಿ ಅಡಗಿರುವೆ? ಸಹಸಾ ತಾನಾಗಿಯೆ ಸ್ವರ್ಗೀಯ ವಾದ್ಯಗಳ ಧ್ವನಿಯು ಕಿವಿಯಲ್ಲಿ ಮೊಳಗಲಾರಂಭಿಸಿತು. ಆಕಾಶದಲ್ಲಿ ಪ್ರಾತಃಕಾಲದ ಅರುಣೋದಯದಂತೆ ಉಜ್ವಲವಾದ ಪ್ರಕಾಶವು ಹರಡಲಾರಂಭಿಸಿತು. ತಂಪಾದ ಮಂದಮಾರುತವು ಬೀಸಲಾರಂಭಿಸಿತು. - ಆ ತರಂಗಪೂರ್ಣ ಜಲರಾಶಿಯ ಮೇಲೆ, ದೂರದಲ್ಲಿ ನಾನು ನೋಡಿದೆ. - ಆ ಸುವರ್ಣಮಂಡಿತ ಸಪ್ತಮಿಯ ಶಾರದೆಯ ಪ್ರತಿಮೆ ಕಾಣುತ್ತಿದೆ! ಅದು ಜಲರಾಶಿಯಲ್ಲಿ ನಗುತ್ತಲಿದೆ, ಮುಳುಗುತ್ತಲಿದೆ, ಮತ್ತೆ ವಿಮಲವಾದ

ಪ್ರಕಾಶವನ್ನು ಹರಡುತ್ತಿದೆ. ಇವಳೇ ಏನು ತಾಯಿ! ಹೌದು, ಇವಳೇ ತಾಯಿ! ಇವಳೇ ನನ್ನ ಜನನಿ ಜನ್ಮಭೂಮಿ ಎಂದು ಗುರುತಿಸಿದೆನು! ಈ ಮೃಣ್ಮಯಿ-ಮೃತ್ತಿಕಾರೂಪಧಾರಿಣಿ - ಅನಂತ ರತ್ನಭೂಷಿತೆ - ಈಗ ಕಾಲ ಗರ್ಭದಲ್ಲಿ ಮುಳುಗಲು ಹೊರಟಿದ್ದಾಳೆ! ರತ್ನಭೂಷಿತವಾದ ಆಕೆಯ ದಶ ಭುಜಗಳು ದಶದಿಕ್ಕುಗಳ ಕಡೆ ಚಾಚಿಕೊಂಡಿವೆ, ಅವುಗಳಲ್ಲಿ ನಾನಾ ಆಯುಧ ರೂಪದಲ್ಲಿರುವ ನಾನಾ ಶಕ್ತಿಗಳು ಶೋಭಿಸುತ್ತಿವೆ! ಪದತಲದಲ್ಲಿ ಶತ್ರುವು ವಿಮರ್ದಿತನಾಗಿ ಬಿದ್ದಿದ್ದಾನೆ. ಪದಾಶ್ರಿತ ವೀರಕೇಸರಿಯು ಶತ್ರು ನಿವಾರಣೆ ಗಾಗಿ ನಿಯುಕ್ತವಾಗಿದೆ! ಅದು ಶತ್ರುವು ಮೇಲಕ್ಕೆ ಏಳದಂತೆ ಮಾಡಿರು ವುದು. ಈ ಮೂರ್ತಿಯನ್ನು ನಾನು ಇಂದು ನೋಡಲಾರೆನು, - ನಾಳೆಯೂ ನೋಡಲಾರೆನು - ಕಾಲ ಸಾಗರದಿಂದ ಪಾರಾಗುವವರೆಗೆ ನಾನು ನೋಡ ಲಾರೆನು. ಆದರೆ ಒಂದು ದಿನ ನೋಡುತ್ತೇನೆ. - ಇದೇನು ಮತ್ತೆ ನಾನು ತಲ್ಲೀನನಾಗಿ ನೋಡಿದೆ - ಆ ಕಾಲ ಪ್ರವಾಹದಲ್ಲಿ ದಶಭುಜೆಯು, ಅನೇಕ ಶಸ್ತ್ರಧಾರಿಣಿ, ಶತ್ರುಮರ್ದಿನಿ, ವೀರೇಂದ್ರಪೃಷ್ಠವಿಹಾರಿಣಿಯು - ಬಲ ಭಾಗ ದಲ್ಲಿ ಭಾಗ್ಯರೂಪಿಣಿಯಾದ ಲಕ್ಷ್ಮಿಯು, ಎಡಭಾಗದಲ್ಲಿ ವಿದ್ಯಾವಿಜ್ಞಾನ ಮೂರ್ತಿಮಯಿ ವಾಣಿ, ಜತೆಯಲ್ಲಿ ಬಲರೂಪನಾದ ಕಾರ್ತಿಕೇಯ, ಕಾರ್ಯಸಿದ್ಧಿರೂಪನಾದ ಗಣೇಶ ಇವರುಗಳು ಆ ಕಾಲ ಸ್ರೋತದ ಮಧ್ಯೆ ವಿರಾಜಿಸುತ್ತಿದ್ದಾರೆ. ಇದೇ ಸ್ವರ್ಣಮಯಿ ಭಾರತಿಯ ಪ್ರತಿಮೆ!

ನಾನರಿಯೆ, ನನ್ನ ಕೈಗೆ ಈ ಹೂಗಳು ಎಲ್ಲಿಂದ ಬಂದವು? ನಾನು ಆ ಪ್ರತಿಮೆಗೆ ಪುಷ್ಪಾಂಜಲಿಯನ್ನರ್ಪಿಸಿ, ಸ್ತುತಿಸಿದೆನು - "ಜಯ ಸರ್ವ ಮಂಗಳ ಮಾಂಗಲ್ಯೇ ಶಿವೇ! ನಮ್ಮ ಸರ್ವಾರ್ಥ ಸಾಧಿಕೆ! ಅಸಂಖ್ಯ ಸಂತಾನಕುಲಪಾಲಿಕೆ! ಧರ್ಮ – ಅರ್ಥ – ಸುಖ – ದುಃಖ - ದಾಯಿಕೇ! ನನ್ನ ಪುಷ್ಪಾಂಜಲಿಯನ್ನು ಸ್ವೀಕರಿಸು! ಭಕ್ತಿ, ಪ್ರೀತಿ, ಪ್ರವೃತ್ತಿ, ಶಕ್ತಿ ಮೊದಲಾದ ಪುಷ್ಪಗಳನ್ನು ಕೈಯಲ್ಲಿ ಹಿಡಿದು, ನಿನ್ನ ಚರಣ ತಲದಲ್ಲಿ ಪುಷ್ಪಾಂಜಲಿಯನ್ನರ್ಪಿಸುವೆನು. ನೀನು ಈ ಅನಂತ ಜಲಮಂಡಲವನ್ನು ಬಿಟ್ಟು ಬಂದು ಈ ಜಗತ್ತಿನ ನಿನ್ನ ಮಕ್ಕಳೆದುರಿಗೆ ನಿನ್ನ ವಿಶ್ವವಿಮೋ ಹಿನಿ ರೂಪವನ್ನು ಒಂದು ಸಲ ಪ್ರಕಟಿಸು. ಬಾ, ತಾಯಿ, ಬಾರಮ್ಮಾ! – ನವರಾಗರಂಜಿನಿ, ನವಬಲಧಾರಿಣಿ, ನವದರ್ಪೇದರ್ಪಿಣಿ, ನವಸ್ವಪ್ನದರ್ಶಿನಿ!

ಬಾ ತಾಯಿಾ ! ಮನೆಗೆ ಬಾ ! ನಿನ್ನ ಮಕ್ಕಳೆನಿಸಿದ ನಮ್ಮ ಮೂವತ್ತೆರಡು ಕೋಟಿ ಕಂಠಗಳಿಂದ ಆಕಾಶಮಂಡಲವು ಕಂಪಿಸುವಂತೆ ಘೋಷಿಸುತ್ತೇವೆ - ತಾಯಿಾ, ಅಮ್ಮಾ ಅಂಬಿಕೆ ! ಧಾತ್ರಿ, ಧರಿತ್ರಿ, ಧನ - ಧಾನ್ಯ - ದಾಯಿಕೆ ! ನಗಾಂಕ ಶೋಭಿನಿ ! ನಗೇಂದ್ರ ಬಾಲಿಕೆ ! ಶರತ್ ಸುಂದರಿ ! ಚಾರು ಪೂರ್ಣಚಂದ್ರ–ಬಾಲಿಕೆ!" - ಮತ್ತೆ ನಾವು ಗರ್ಜಿಸುವೆವು–"ಸಿಂಧು ಸೇವಿತೆ! ಸಿಂಧು ಪೂಜಿತೆ! ಸಿಂಧುಮಥನ ಕಾರಿಣಿ! ಶತ್ರುವಧೆಗಾಗಿ ಹತ್ತು ಕೈಗಳಲ್ಲಿ ಹತ್ತುಬಗೆಯ ಶಸ್ತ್ರಗಳನ್ನು ಧರಿಸಿರುವವಳೆ ! ಅನಂತಶ್ರೀ, ಅನಂತಕಾಲ ಸ್ವಾಮಿನಿ ! ಅನಂತಶಕ್ತಿ ಪ್ರದಾಯಿನಿ ! ನಿನ್ನ ಸಂತಾನಕ್ಕೆ ಶಕ್ತಿ ಕೊಡು ! ನಿನ್ನನ್ನು ಯಾವ ಹೆಸರಿನಿಂದ ಕರೆಯೋಣ, ತಾಯಿ ! ನಮ್ಮಾ ೩೩ ಕೋಟಿ ಶಿರಸ್ಸುಗಳನ್ನು ನಿನ್ನ ಪಾದಗಳ ಮೇಲಿಡುವೆವು, ೩೩ ಕೋಟಿ ಕಂಠಗಳಿಂದ ನಿನ್ನ ಹೆಸರನ್ನು ಹೇಳಿ ಹೂಂಕರಿಸುವೆವು! ೩೩ ಕೋಟಿ ಶರೀರಗಳನ್ನು ನಿನಗೆ ಅರ್ಪಿಸುವೆವು! ಆದಾಗದೆಂದರೆ ೬೬ ಕೋಟಿ ಕಣ್ಣುಗಳು ನಿನಗಾಗಿ ಅಳುವವು. ಬಾ ಅಮ್ಮಾ, ಬಾ ತಾಯಿ ! ಮನೆಗೆ ಬಾ, ೩೩ ಕೋಟಿ ಮಕ್ಕಳಿರುವ ನಿನಗೇಕೆ ಚಿಂತೆ ?"

ನೋಡ ನೋಡುತ್ತಿದ್ದಂತೆಯೇ ಆ ಪ್ರತಿಮೆಯು ಅದೇ ಅನಂತಕಾಲ ಸಮುದ್ರದಲ್ಲಿ ಮುಳುಗಿಹೋಯಿತು ! ಮತ್ತೆ ಕಾಣಿಸಲೇ ಇಲ್ಲ. ಅಂಧಕಾರ ಮಯವಾದ ಆಕಾಶದವರೆಗೆ ಆ ತರಂಗ ಪೂರ್ಣ ಜಲರಾಶಿಯು ವ್ಯಾಪಿಸಿ ಕೊಂಡಿತು. ಅದರಲ್ಲಿ ಸಮಗ್ರ ವಿಶ್ವವು ಮುಳುಗಿಹೋಯಿತು! ಆಗ ನಾನು ವ್ಯಾಕುಲಿತನಾಗಿ, ಕಣ್ಣುಗಳಲ್ಲಿ ಕಂಬನಿ ತುಂಬಿಕೊಂಡು ಕೂಗಲಾರಂಭಿ ಸಿದೆನು. - ಏಳು ಅಮ್ಮಾ ! ಈ ಸಲ ನಾವು ಸುಸಂತಾನವೆನಿಸಿಕೊಳ್ಳುವೆವು, ಸತ್ಪಥದಲ್ಲಿ ನಡೆಯುವೆವು ! ನೀನು ದರ್ಪದಿಂದ ನಡೆವಂತೆ ಮಾಡುವೆವು! ಏಳಮ್ಮಾ, ದೇವತೆಗಳಿಗೆ ಅನುಗ್ರಹ ಮಾಡುವವಳೆ ! ಈ ಬಾರಿ ನಾವು ಸ್ವಾರ್ಥವನ್ನು ತ್ಯಜಿಸಿ ಭ್ರಾತೃವತ್ಸಲರಾಗುವೆವು. ಪರರ ಮಂಗಳವನ್ನು ಸಾಧಿಸುವೆವು. ಅಧರ್ಮ, ಆಲಸ್ಯ, ಇಂದ್ರಿಯಾಸಕ್ತಿಗಳನ್ನು ತ್ಯಜಿಸುವೆವು - ಏಳು ತಾಯಿಾ! ನಾನು ಏಕಾಂಗಿಯಾಗಿರುವೆನು. ಅತ್ತು ಅತ್ತು ಕಣ್ಣುಗಳು ಒಡೆಯುವಂತಾಗಿವೆ ! ಏಳು ತಾಯಿಾ, ಏಳು ಭಾರತ ಮಾತೆ !

ತಾಯಿಯು ಏಳಲಿಲ್ಲ, ಏಳುವುದಿಲ್ಲವೇನು !

ಬನ್ನಿ, ಎಲ್ಲರೂ ಬನ್ನಿರಣ್ಣ! ನಾವೆಲ್ಲರೂ ಸೇರಿ ಈ ಅಂಧಕಾರಮಯ ವಾದ ಕಾಲಸಾಗರದಲ್ಲಿ ಮುಳುಗೋಣ. ನಮ್ಮ ೬೬ ಕೋಟಿ ಭುಜಗಳಿಂದ ಮಾತೆಯ ಮೂರ್ತಿಯನ್ನೆತ್ತಿ, ೩೩ ಕೋಟಿ ತಲೆಗಳ ಮೇಲಿಟ್ಟುಕೊಂಡು ಮನೆಗೆ ಹೋಗೋಣ! ಅಂಧಕಾರವಿದ್ದರೆ ಹೆದರಿಕೆ ಏಕೆ? ಮಧ್ಯ ಮಧ್ಯದಲ್ಲಿ ಕಾಣುತ್ತಿರುವ ನಕ್ಷತ್ರಗಳೆ ನಮಗೆ ದಾರಿಯನ್ನು ತೋರಿಸುವವು. ನಡೆಯಿರಿ, ಅಸಂಖ್ಯ ಬಾಹುಗಳಿಂದ ಈ ಕಾಲಸಾಗರವನ್ನು ತಾಡಿಸಿ, ಮಥಿಸಿ, ವ್ಯಸ್ತ ವಾಗಿಮಾಡಿ, ನಾವು ಈಜೋಣ. ಆ ಸುವರ್ಣ ಪ್ರತಿಮೆಯನ್ನು ತಲೆಯ ಮೇಲಿಟ್ಟುಕೊಂಡು ಬರೋಣ. ಭಯವೇಕೆ? ಅದು ಸಾಧ್ಯವಿಲ್ಲವಾದರೆ ಎಲ್ಲರೂ ಮುಳುಗಿಬಿಡೋಣ. ಮಾತೃಹೀನ ಜೀವನದಿಂದ ಪ್ರಯೋಜನ ವೇನು? ಬನ್ನಿ, ಪ್ರತಿಮೆಯನ್ನು ಎತ್ತಿ ತರೋಣ! ವಿಜೃಂಭಣೆಯಿಂದ ಪೂಜೆಮಾಡೋಣ. ಆ ಮಾತೃಪೂಜೆಯ ಕಾಲದಲ್ಲಿ ನಾವು ದ್ವೇಷಕ-ಮೇಕೆಗಳನ್ನು ಸತ್ಕೀರ್ತಿ ಎಂಬ ಖಡ್ಗದಿಂದ ಕತ್ತರಿಸಿ ಬಲಿಕೊಡೋಣ! ಪ್ರಾಚೀನಕಾಲದ ಎಷ್ಟೋ ಐತಿಹಾಸಿಕ ಶಂಖಗಳನ್ನು ಊದಿ ಮಾತೆಯ ಗುಣ ವನ್ನು ಗಾನಮಾಡೋಣ. ಎಲ್ಲ ಬಗೆಯ ರಾಗಗಳನ್ನು ಹಾಡೋಣ, ಆನಂದ ವಿಹ್ವಲರಾಗಿ ಕುಣಿಯೋಣ! ಪೂಜೆಯು ವಿಜೃಂಭಣೆಯಿಂದ ನಡೆಯು ವುದು. ಅನೇಕ ಬ್ರಾಹ್ಮಣರು ಕಡುಬು ಮತ್ತು ಮಿಠಾಯಿಯ ಆಸೆಗಾಗಿ ಮಂತ್ರಗಳನ್ನು ಹೇಳುತ್ತಾರೆ. ದೇಶೀಯರೂ ವಿದೇಶೀಯರೂ ಇದರಲ್ಲಿ ಭಾಗವಹಿಸಿ, ಬಡವರು, ಬಲ್ಲಿದರು, - ಎಲ್ಲರೂ ದೊಡ್ಡವರು ಚಿಕ್ಕವರೆಂಬ ಭೇದವಿಲ್ಲದೆ, ತಾಯಿಯ ಚರಣಗಳಿಗೆರಗೋಣ! ಪ್ರಸಾದವನ್ನು ಹಂಚೋಣ! ದೀನರು, ದುಃಖಿಗಳು ಪ್ರಸಾದದಿಂದ ಹೊಟ್ಟೆ ತುಂಬಿಕೊಳ್ಳಿ! ನರ್ತಕಿಯ ರಾದವರು ನರ್ತಿಸಲಿ, ಗಾಯಕರು ಸುಮಂಗಳವನ್ನು ಹಾಡಲಿ, ಭಕ್ತ ಕೋಟಿಯು ಅಂಬೆ, ಅಂಬಿಕೆ – ಅಂಬಾಲಿಕೆ – ತಾಯಿ, ಅಮ್ಮಾ ಎಂದು ಘೋಷಿಸಲಿ!

ಜಯ ಜಯ ಜಯ ಜಯಾ ಜಗದ್ಧಾತ್ರಿ।
ಜಯ ಜಯ ಜಯ ಶುಭೇ ಶುಭಂಕರಿ॥

★ ★ ★ ★ ★

ಇತಿ,

— ಶ್ರೀ ಕಮಲಾಕಾಂತ ಚಕ್ರವರ್ತಿ.

## ೧೨. ಒಂದು ಗೀತೆ

"ಪ್ರಸನ್ನಳೆ. ನಾನು ಒಂದು ಹಾಡು ಹೇಳುತ್ತೇನೆ, ಕೇಳು."

ಪ್ರಸನ್ನಗೌಳಗಿತ್ತಿಯು—"ನಾನು ಈಗ ಹಾಡು ಕೇಳುವುದಕ್ಕೆ ಸಮಯವಿಲ್ಲ, ಹಾಲು ಕರೆಯುವುದಕ್ಕೆ ಹೊತ್ತು ಆಯಿತು," ಎಂದಳು.

ಕಮಲಾಕಾನ್ತ—"ಬಾ ಬಾರಯ್ಯ ಬಂಧೊ ಬಾ"

ಪ್ರಸನ್ನಳು—"ಛಿ, ಛಿ, ಛೀ! ನಾನು ನಿನ್ನ ಬಂಧುವೇನು?"

ಕಮಲಾಕಾನ್ತ—"ಇದೇನು ವಿಪತ್ತು! ನೀನೇಕೆ ನನ್ನ ಬಂಧುವಾಗಬೇಕು? ನನ್ನ ಹಾಡಿನ ಪದಗಳು - ಬಾ, ಬಾರಯ್ಯ ಬಂಧೊ, ಬಾ, ಅರೆಸೆರಗಲಿ ಕುಳಿತುಕೊ -" ಎಂದು ಇವೆ.

ಸೂರು ಹಿಡಿದು ನಾನು ಕೀರ್ತನೆಯ ಧಾಟಿಯಲ್ಲಿ ಹಾಡಲಾರಂಭಿಸಿದೆ. ಪ್ರಸನ್ನಳು ಹಾಲಿನ ಪಾತ್ರೆಯನ್ನಿಟ್ಟು ಕುಳಿತುಬಿಟ್ಟಳು. ನಾನು ಗೀತೆಯನ್ನು ಮೊದಲಿನಿಂದ ಕೊನೆಯವರೆಗೆ ಹಾಡಿದೆನು.

"ಬಾ ಬಾರಯ್ಯ ಗೆಳೆಯ ಬಾ, ಅರೆಸೆರಗಲಿ ಕೂರೊ,
ಕಣ್ತುಂಬ ನೋಡುವೆ ನಿನ್ನ
ಬಹು ದಿನಗಳಿಂದ ಹೃದಯ ಸರಸಿನಲ್ಲಿ
ಬಯಸಿದ ಧನವನು ಕೊಡಿಸಿತು ವಿಧಿ,
ಮಾಣಿಕ್ಯ ತಾ ಹಾರ ಧರಿಸುವ ಕೊರಳಲಿ,
ಹೂವನು ತಾ ಸಿಂಗರಿಸುವ ಕೇಶವನು
ವಿಧಿಯೆನ್ನ ನಾರಿಯಾಗಿಮಾಡದಿದ್ದರೆ, ನಿನ್ನಂತಹ ಗುಣನಿಧಿಯ
ಹೊತ್ತು ತಿರುಗುತಿದ್ದೆ ಸೀಮೆ ಸೀಮೆ,
ಗೆಳೆಯ, ನಿನ್ನ ನೆನೆದರೆ
ನಾನು ವೃಂದಾವನ ನೋಡಬಯಸುವೆನು

**ಕೆದರಿದ ಕೂದಲ ಕಟ್ಟದಿರುವೆ,**
**ಅಡುಗೆ ಮನೆಗೆ ಹೋದೆನೊ ಗೆಳೆಯ, ನಿನ್ನ ಗುಣ ಹಾಡುವೆ,**
**ಗೆಳೆಯನೆ—ಅಳುತ್ತಿರುವೆ.”**

ಇಲ್ಲಿ ‘ನೋಡುವೆನು’ ಮತ್ತು ‘ವಿಧಿ’ ಎಂಬ ಪದಗಳಲ್ಲಿ ಚಮತ್ಕಾರವಿದೆ. ಆದರೆ ಭಾರತೀಯ ಭಾಷೆಗಳಲ್ಲಿ ಈ ಬಗೆಯ ಮೋಹನ ಮಂತ್ರಗಳನ್ನು ಇನ್ನೂ ಎಷ್ಟೋ ಕೇಳಬಹುದು. ಮನಸ್ಸಿನಲ್ಲಿ ದೊಡ್ಡ ಆಸೆ ಇದೆ. ಮೊದಲಬಾರಿ ಈ ಗಾನವನ್ನು ಕಿವಿತುಂಬ ಕೇಳಿದಾಗ ಮನಸ್ಸಿನಲ್ಲಿ - ನೀಲಾಕಾಶದ ಕೆಳಗೆ ಒಂದು ಸಣ್ಣ ಹಕ್ಕಿಯಾಗಿ ಈ ಹಾಡನ್ನು ಹಾಡಬೇಕು - ಎಂಬ ಆಶೆ ಹುಟ್ಟಿತು. ಮತ್ತೆ ಆಸೆಯಾಯಿತು - ಆ ವಿಚಿತ್ರ ಸೃಷ್ಟಿ ಕುಶಲ ಕವಿಯು ಸೃಷ್ಟಿಸಿರುವ ದೈವೀ ಮುರಲಿಯಲ್ಲಿ, - ಮೇಘದ ಮೇಲೆ ಶಬ್ದ ಶೂನ್ಯ ಮತ್ತು ದೃಶ್ಯಶೂನ್ಯ ವಾಯುಮಂಡಲವಿರುವೆಡೆಯಲ್ಲಿ, - ಎಲ್ಲಿಂದ ಪೃಥ್ವಿಯನ್ನು ನೋಡಲಾಗುವುದಿಲ್ಲವೊ - ಅಲ್ಲಿ ಏಕಾಂಗಿಯಾಗಿ ಕುಳಿತು— ಆ ಮುರಲಿಯಲ್ಲಿ ಈ ಗೀತೆಯನ್ನು ಹಾಡಲೆ ಎನಿಸಿತು. ಈ ಗೀತೆಯನ್ನು ನಾನು ಮರೆತಿಲ್ಲ, ಮರೆಯಲಾಗುವುದೂ ಇಲ್ಲ—

“ಬಾ ಬಾರಯ್ಯ ಗೆಳೆಯ ಬಾ”*

ಜನರ ಮನಸ್ಸಿನಲ್ಲಿ ಏನಿದೆ ಎಂದು ಹೇಳಲಾಗುವುದಿಲ್ಲ! ಆದರೆ, ಕಮಲಾಕಾಂತ ಚಕ್ರವರ್ತಿಯು ಇಂದ್ರಿಯ ಪರಿತೃಪ್ತಿಯಲ್ಲಿ ಏನಾದರೂ ಸುಖ ಉಂಟೆಂದು ತಿಳಿಯಲಾರದವನಾಗಿದ್ದಾನೆ. ಯಾರು ಪಶುಸಂಬಂಧ ಇಂದ್ರಿಯ ತೃಪ್ತಿಗಾಗಿ ಬಂಧು ದರ್ಶನವನ್ನಪೇಕ್ಷಿಸುವರೊ ಅಂತಹವರು ಕಮಲಾಕಾಂತ ಶರ್ಮನ ದಫ್ತರದ ಮುಕ್ತಾವಳಿ ಗೀತೆಯನ್ನು ಓದಬಾರದು. ವಿಲಾಸ ಪ್ರಿಯರ ಬಾಯಿಂದ “ಬಾ, ಬಾ ಬಂಧೊ” ಗೀತವನ್ನು ನಾನು ಕೇಳಲಪೇಕ್ಷಿಸುವುದಿಲ್ಲ.— ನಾನು ತಿಳಿದಮಟ್ಟಿಗೆ ಈ ಗೀತೆಯು ಸೂಚಿಸುವುದು - ಮನುಷ್ಯ ಮನುಷ್ಯನಿಗಾಗಿ ಇದ್ದಾನೆ, ಒಂದು ಹೃದಯ ಇನ್ನೊಂದು ಹೃದಯಕ್ಕಾಗಿ ಇದೆ. ಆ ಹೃದಯದೊಂದಿಗೆ ಬೇರೆ ಹೃದಯ ಸ್ಪರ್ಶವಾಗುವುದು, ಮಿಳಿತವಾಗುವುದು. ಅದೇ ಮನುಷ್ಯ ಜೀವನದ ಸುಖ. ಈ ಜನ್ಮ

---

* ಪಾಠಕರು ಇಡೀ ಗೀತೆಯೊಂದಿಗೆ ಇದನ್ನು ಸೇರಿಸಿ ಹಾಡಿಕೊಳ್ಳಬಹುದು.

ದಲ್ಲಿ ಮನುಷ್ಯ ಹೃದಯವನ್ನು ಪರೀಕ್ಷಿಸಿದರೆ ಅದರಲ್ಲಿ ಏಕಮಾತ್ರ ತೃಷೆ-ಅನ್ಯ ಹೃದಯ ಕಾಮನೆ-ಆಸೆ-ಇದೆ ಎಂದು ಕಾಣುವುದು. ಮನುಷ್ಯ ಹೃದಯ ಯಾವಾಗಲೂ ಬೇರೆ ಹೃದಯವನ್ನು ಕರೆಯುತ್ತಿರುವುದು-"ಬಾ-ಬಾರಯ್ಯ ಬಂಧೊ ಬಾ"-ಎಂದು. ನೀವು ನೌಕರಿ ಮಾಡುವುದು ನಿಮ್ಮ ಹೊಟ್ಟೆಗಾಗಿ. ಆದರೆ, ಪರರ ಅನುರಾಗ ಲಾಭಕ್ಕಾಗಿ, ಜನ ಸಮಾಜದ ಹೃದಯವನ್ನು ನಿಮ್ಮ ಹೃದಯದೊಂದಿಗೆ ಮಿಲನಗೊಳಿಸುವುದಕ್ಕಾಗಿ ನೀವು ಯಶಸ್ಸನ್ನು ಅಪೇಕ್ಷಿಸುತ್ತೀರಿ. ನೀವು ಬೇರೆಯವರ ಹೃದಯದ ಕ್ಲೇಶದ ಅನುಭವವನ್ನು ನಿಮ್ಮ ಹೃದಯದಲ್ಲಿ ಅನುಭವಿಸಲು ಪರೋಪಕಾರ ಮಾಡುತ್ತೀರಿ. ನಿಮ್ಮ ಮನಸ್ಸಿನಲ್ಲಿರುವ ಕಾರ್ಯವು ನೆರವೇರಲಿಲ್ಲವೆಂದು ನೀವು ಕೋಪಿಸಿಕೊಳ್ಳುವಿರಿ. ಹೃದಯದೊಂದಿಗೆ ಹೃದಯವು ಮಿಳಿತವಾಗಲಿಲ್ಲ-ಎಂತಲೆ ಎಲ್ಲೆಲ್ಲಿಯೂ "ಬಾ, ಬಾರಯ್ಯ ಬಂಧೊ!" ಎಂಬ ಧ್ವನಿಯು ಕೇಳಿಸುತ್ತಿದೆ. ಎಲ್ಲ ಕರ್ಮಗಳ ಮೂಲ ಮಂತ್ರ-"ಬಾ, ಬಾರಯ್ಯ ಬಂಧೊ ಬಾ." ಜಡ ಜಗತ್ತಿನ ನಿಯಮವೆ ಆಕರ್ಷಣ-ತನ್ನ ಕಡೆ ಸೆಳೆದುಕೊಳ್ಳುವುದು. ದೊಡ್ಡ ಗ್ರಹವು ಚಿಕ್ಕ ಗ್ರಹವನ್ನು 'ಬಾ, ಬಾ, ಬಂಧೊ' ಎಂದು ಕರೆಯುತ್ತಿದೆ. ಸೌರಪಿಂಡವು (ಸೂರ್ಯ ಗೋಳವು) ಬೃಹತ್ ಗ್ರಹಗಳನ್ನು –'ಬಾ, ಬಾ, ಬಂಧೊ ಬಾ' ಎಂದು ಕರೆಯುತ್ತಿದೆ. ಒಂದು ಜಗತ್ತು ಇನ್ನೊಂದು ಜಗತ್ತನ್ನು 'ಬಾ, ಬಾ ಬಂಧೊ ಬಾ' ಎಂದು ಕೂಗುತ್ತಿದೆ. ಪರಮಾಣುವು ಮತ್ತೊಂದು ಪರಮಾಣುವನ್ನು 'ಬಾ, ಬಾ ಬಂಧೊ, ಬಾ' ಎಂದು ಕರೆಯುತ್ತಿದೆ. ಸಮುಗ್ರ ಜಡ ಪಿಂಡಗಳು, ಗ್ರಹಗಳು, ಉಪಗ್ರಹಗಳು ಧೂಮಕೇತುಗಳು - ಎಲ್ಲವೂ ಈ ಮೋಹನ ಮಂತ್ರದಿಂದ ಬಂಧಿತವಾಗಿ ಸುತ್ತುತ್ತಲಿವೆ. ಪ್ರಕೃತಿಯು ಪುರುಷನನ್ನು 'ಬಾ, ಬಾ ಬಂಧೊ ಬಾ' ಎಂದು ಕರೆಯುತ್ತಿದೆ. ಜಗತ್ತಿನ ಈ ಗಂಭೀರ ಅವಿಶ್ರಾಂತ ಧ್ವನಿಯು-"ಬಾ, ಬಾ ಬಂಧೊ, ಬಾ" ಎಂದು ಕೇಳಿಸುತ್ತಿದೆ. ಕಮಲಾಕಾಂತನ ಬಂಧು ಯಾರಿದ್ದಾರೆ?

"ಅರೆ ಸೆರಗಲಿ ಕೂರೊ,"

ಈ ಹುಲು ಹುಲ್ಲು ಹೊಲಸುಗಳಿಂದ ತುಂಬಿರುವ, ಮುಳ್ಳು ಪೊದೆಗಳಿಂದ ಕರ್ಕಶವಾಗಿರುವ ಸಂಸಾರಾರಣ್ಯದಲ್ಲಿ–ಹೇ ಚಿರವಾಂಛಿತ! ಗೆಳೆಯ!–

ನಿನಗಾವ ಆಸನವನ್ನೀಯಲಿ! ನನ್ನೀ ಹೃದಯಾವರಣದ ಮೇಲೆ ಕುಳಿತುಕೊ. ಕುಶ-ಕಂಟಕಾದಿಗಳಿಂದ ನಿನ್ನನ್ನು ರಕ್ಷಿಸಲು ನನ್ನ ಹೃದಯವನ್ನು ತೆರೆಯುವೆನು, ನನ್ನ ಸೆರಗಿನಲ್ಲಿ ಕುಳಿತುಕೊ. ಯಾವುದು ನನ್ನ ಲಜ್ಜಾರಕ್ಷೆಯಾಗಿದೆಯೊ, ಮಾನರಕ್ಷೆಯಾಗಿದೆಯೊ, ನನಗೆ ಶೋಭೆಯನ್ನೀಯುವುದಾಗಿದೆಯೊ, ಅದರಲ್ಲಿ, -ಹೇಮಿಲಿತ!– ನೀನೂ ಅರ್ಧಭಾಗವನ್ನು ಗ್ರಹಣಮಾಡು, ಅರೆ ಸೆರಗಿನಲ್ಲಿ ಕುಳಿತುಕೊ, ಹೇ ಪರರಹೃದಯ ಸ್ವರೂಪ! ಹೇ ಸುಂದರ! ಹೇ ಮನೋರಂಜನ! ಹೇ ಸುಖದಾ! ಹತ್ತಿರ ಬಾ, ನನ್ನಬಳಿ ನನ್ನ ಶರೀರಕ್ಕೆ ಹತ್ತಿಕೊಂಡಿರುವ ಅರೆ ಸೆರಗಿನಲ್ಲಿ ಕುಳಿತುಕೊಳ್ಳಯ್ಯ! ಹೇ ಕಮಲಾಕಾಂತ! ಹೇ ದುರ್ವಿನೀತ! ಹೇ ಆಜನ್ಮ ವಿವಾಹಶೂನ್ಯ! ಇದು ಶಾಂತಿಪುರದ (ಢಾಕಾ) ಚೀಟಿ ಸೀರೆಯ ಸೆರಗೆಂದು ತಿಳಿದುಕೊಳ್ಳಬೇಡ. ನೀನು ಕುಳಿತುಕೊಳ್ಳುವ ಅರೆ ಸೆರಗನ್ನು ನೇಯುವ ನೇಕಾರನು ಇನ್ನೂ ಹುಟ್ಟಿಲ್ಲ. ಮನಸ್ಸಿನ ನಗ್ನತೆಯು ಜ್ಞಾನವಸ್ತ್ರದಿಂದ ಆವೃತವಾಗಿದೆ. ಅರ್ಧ ವಸ್ತ್ರದಿಂದ ನಿನ್ನ ಹೃದಯವನ್ನು ಮುಚ್ಚಿಕೊಂಡು, ಉಳಿದ ಅರ್ಧದಲ್ಲಿ ವಾಂಛಿತ ಬಂಧುವನ್ನು ಕುಳ್ಳಿರಿಸಿಕೊಳ್ಳಬೇಕು. ನೀನು ಮೂರ್ಖ-ಆದಾಗ್ಯೂ ನಿನಗಿಂತಲೂ ಹೆಚ್ಚು ಮೂರ್ಖರಾರಾದರೂ ಇದ್ದರೆ ಅವರಿಗೆ ಹೇಳು-"ಬಾ ಬಾರಯ್ಯ ಬಂಧೊ ಬಾ" -ಎಂದು.

"ಕಣ್ತುಂಬ ನೋಡುವೆ ನಿನ್ನ!"

ಯಾರಾದರೂ ಎಂದಾದರೂ ನೋಡಿದ್ದಾರೇನು? ನೀವು ಅಪಾರವಾಗಿ ಧನ ಸಂಗ್ರಹ ಮಾಡಿದ್ದೀರಿ. ಆದರೆ ಕಣ್ತುಂಬ ಆತ್ಮ ಧನವನ್ನು ನೋಡಿದ್ದೀರೇನು? ನೀವು ಯಶಸ್ಸನ್ನು ಸಂಪಾದಿಸಲು ಪ್ರಾಣದ ಹಂಗು ತೊರೆದು ಕೆಲಸ ಮಾಡಿದ್ದೀರಿ. ಆದರೆ ನಿಮ್ಮ ಆತ್ಮಯಶೋರಾಶಿಯನ್ನು ನೋಡಿ ನಿಮ್ಮ ಕಣ್ಣು ತೃಪ್ತಿಗೊಂಡಿದೆ ಏನು? ರೂಪ ತೃಷ್ಣೆಯನ್ನು ತೃಪ್ತಿಗೊಳಿಸಲು ನಿಮ್ಮ ಇಡೀ ಜೀವನವನ್ನು ಸವೆಯಿಸಿರುವಿರಿ. ಎಲ್ಲಿ ಹೂ ಅರಳುವುದೋ, ಹಣ್ಣು ತೂಗಲಾಡುತ್ತಿರುವುದೊ, ಎಲ್ಲಿ ಹಕ್ಕಿಗಳು ಹಾರಾಡುತ್ತಿವೆಯೊ, ಮೇಘಗಳು ಸಂಚರಿಸುತ್ತಿವೆಯೊ, ಎಲ್ಲಿ ಗಿರಿಶೃಂಗಗಳು ಕಾಣುತ್ತಿವೆಯೊ, ಹರಿಯುತ್ತಿರುವ ನದಿಗಳಿವೆಯೊ, ನೀರಿನ ಝರಿಗಳಿವೆಯೊ ಅಲ್ಲೆಲ್ಲ ನೀವು ರೂಪವನ್ನು ಹುಡುಕಿಕೊಂಡು ಸುತ್ತಾಡುತ್ತಿರಬಹುದು. ಎಲ್ಲಿ

ಬಾಲಕರು ತಮ್ಮ ಪ್ರಫುಲ್ಲ ಮುಖಮಂಡಲವನ್ನು ಅಲ್ಲಾಡಿಸುತ್ತ ನಗುತ್ತಲಿರುವರೊ, ಎಲ್ಲಿ ಯುವತಿಯು ಲಜ್ಜೆಯಿಂದ ಶಿಥಿಲ, ಶಂಕಿತಗತಿಯಲ್ಲಿ ಹೆಜ್ಜೆಯನ್ನಿಡುತ್ತಿರುವಳೊ, ಎಲ್ಲಿ ಪೂರ್ಣ ಯೌವನದಿಂದ ತುಂಬಿರುವ ಪ್ರೌಢ ಸ್ತ್ರೀಯು, ಮಧ್ಯಾಹ್ನದ ಪದ್ಮ ಪುಷ್ಪಗಳಂತೆ, ಯಾವ ಸಂಕೋಚವೂ ಇಲ್ಲದೆ ತನ್ನ ರೂಪವನ್ನು ಪ್ರಕಾಶಗೊಳಿಸುತ್ತಿರುವಳೊ - ಅಲ್ಲೆಲ್ಲ ನೀವು ರೂಪವನ್ನು ಹುಡುಕುತ್ತ ಅಲೆದಿರಬಹುದು. ಯಾವಾಗಲಾದರೂ ರೂಪವನ್ನು ಕಣ್ತುಂಬ ನೋಡಿದ್ದೀರಾ? ನೀವು ನೋಡಿಲ್ಲವೆ - ಹೂವನ್ನು ನೋಡುತ್ತಿದ್ದಂತೆಯೆ ಅದು ಒಣಗುವುದು. ನೋಡ ನೋಡುತ್ತಿದ್ದಂತೆಯೇ ಹಣ್ಣು ಮಾಗಿಬಿದ್ದು ಕೊಳೆತುಹೋಗುವುದು, ಹಕ್ಕಿ ಹಾರಿಹೋಗುವುದು, ಮೋಡಗಳು ಚದರಿ ಮಾಯವಾಗುವವು, ಗಿರಿಗಳು ಭೂಗರ್ಭದಲ್ಲಡಗಿಬಿಡುವವು, ನದಿಗಳು ಬತ್ತುವವು, ಚಂದ್ರನು ಅಸ್ತನಾಗುವನು, ನಕ್ಷತ್ರಗಳು ಬಚ್ಚಿಟ್ಟುಕೊಳ್ಳುವವು - ಮಗುವಿನ - ಬಾಲಕನ ನಗುವನ್ನು ರೋಗವು ಅಪಹರಿಸುವುದು, ಯುವತಿಯ ಲಜ್ಜೆಯು ಶಾಶ್ವತವಾಗಿರುವುದಿಲ್ಲ, ಪ್ರೌಢೆಯ ಸೌಂದರ್ಯವು ಮಧ್ಯಾಹ್ನವು ಕಳೆದ ಬಳಿಕ ಶುಷ್ಕವಾಗುವುದು–ಎಂಬುದನ್ನು ನೀವು ನೋಡಿಲ್ಲವೆ? - ಈ ಸಂಸಾರದ ದೌರ್ಭಾಗ್ಯ - ಯಾರೂ ಯಾವುದನ್ನೂ ಕಣ್ತುಂಬ ನೋಡಲಾರರು, ಅಥವಾ - ಯಾರೂ ಯಾವುದನ್ನೂ ಕಣ್ತುಂಬ ನೋಡಲಾಗದಿರುವುದೇ ಸಂಸಾರದ ಸೌಭಾಗ್ಯವೇನೊ! ಗತಿಯೆ ಸಂಸಾರದ ಸುಖ, ಚಂಚಲತೆಯೆ ಸಂಸಾರದ ಸೌಂದರ್ಯ, ಕಣ್ಣಿಗೆ ತೃಪ್ತಿ ಇಲ್ಲ. ತೃಪ್ತಿಯಾಗುವಂತಹ ಕಣ್ಣುಗಳನ್ನು ನಾವು ಪಡೆಯಲಿಲ್ಲ. ಪಡೆದಿದ್ದರೆ ಸಂಸಾರವು ದುಃಖಮಯವಾಗುತ್ತಿದ್ದಿಲ್ಲ. ತೃಪ್ತಿರೂಪಿಯಾದ ರಾಕ್ಷಸಿಯು ನಮ್ಮ ಸಮಗ್ರ ಸುಖವನ್ನು ಗ್ರಾಸಮಾಡಿಬಿಡುತ್ತಿತ್ತು. ಯಾವ ಕರ್ತನು ಈ ಪರಿವರ್ತನಶೀಲ ಸಂಸಾರವನ್ನೂ, ಈ ಅತೃಪ್ತನಯನಗಳನ್ನೂ ಸೃಷ್ಟಿಸಿರುವನೊ ಆ ಕರ್ತನ ಮೇಲಿನ ಕರ್ತನನ್ನು - ಕಣ್ತುಂಬ ನೋಡುವ ಆಸೆ - ಹಂಬಲಿಕೆ ಆಗಿದೆ. ಜಗತ್ತು ಪರಿವರ್ತನ ಶೀಲವಾಗಿದೆ, ನಯನಗಳು ಅತೃಪ್ತ. ಆದ್ದರಿಂದ - 'ನಿನ್ನನ್ನು ಕಣ್ತುಂಬ ನೋಡಬೇಕು' - ಎಂಬ ಅಪೇಕ್ಷೆ.

' ಹೇ ರೂಪ! ಹೇ ಬಾಹ್ಯಸೌಂದರ್ಯ! ಹೇ ಅಂತಃಪ್ರಕೃತಿಯೊಂದಿಗೆ ವಿಶಿಷ್ಟ ಸಂಬಂಧವುಳ್ಳವನೆ! ಹತ್ತಿರ ಬಾ, ಕಣ್ತುಂಬ ನಿನ್ನನ್ನು

ನೋಡುವೆನು. ದೂರ ಕುಳಿತರೆ ನೋಡಲಾಗುವುದಿಲ್ಲ. ಏಕೆಂದರೆ ಕೇವಲ ಕಣ್ಣುಗಳಿಂದ ನೋಡುವುದಕ್ಕೆ ಆಗುವುದಿಲ್ಲ. ನೀನು ಹತ್ತಿರ ಬರದೆ, ನಿನ್ನನ್ನು ಸ್ಪರ್ಶಿಸದೆ ಇದ್ದರೆ ಮನದೊಳಗಿನ ವಿದ್ಯುತ್ತು ಪ್ರವಹಿಸುವುದಿಲ್ಲ-ನನ್ನ ಸರ್ವಾಂಗವೂ ನಿನ್ನನ್ನು ನೋಡಬೇಕು. ಆಗ ಒಂದು ಮನದಿಂದ ಮತ್ತೊಂದು ಮನಕ್ಕೆ ವಿದ್ಯುತ್ತು ಹರಿಯುವುದು. ಆಗ ಕಣ್ತುಂಬ ನೋಡಬಹುದು. ಹಾಯ್! ಹೇಗೆ ಕಣ್ಣುಗಳಿಗೆ ತೃಪ್ತಿಯಾಗಬೇಕು? ಕಣ್ಣುಗಳಲ್ಲಿ ಪಲಕಗಳಿವೆ!

"ಬಹು ದಿನಗಳಿಂದ ಹೃದಯ ಸರಸಿನಲ್ಲಿ
ಬಯಸಿದ ಧನವನು ಕೊಡಿಸಿತು ವಿಧಿಯು"

ಕೇವಲ ದುಃಖವನ್ನು ಅಳೆಯುವುದಕ್ಕಾಗಿಯೆ, ವಿಧಾತನು ದಯಾಭಾವದಿಂದ ದಿನವನ್ನು ಸೃಷ್ಟಿಸಿರುವನೆಂದು ನನಗೆ ಆಗಾಗ್ಗೆ ಬೋಧೆಯಾಗುತ್ತಿದೆ. ಇಲ್ಲವಾದರೆ ಕಾಲವನ್ನು ಅಳೆಯುವುದು ಹೇಗೆ? ಕಾಲವು ಅಪರಿಮೇಯ, ಮಾನವ ದುಃಖವೂ ಅಪರಿಮಿತ, ಎರಡು ದಿನ, ಎರಡು ತಿಂಗಳು ಅಥವಾ ಎರಡು ವರುಷ ನಾವು ದುಃಖವನ್ನು ಭೋಗಿಸಿದೆವು ಎಂದು ಈಗ ಹೇಳಬಹುದು. ಹಗಲು, ರಾತ್ರಿಗಳ ಭೇದವಿಲ್ಲದಿದ್ದರೆ, ಕಾಲಪಥವು ಚಿಹ್ನೆ ಶೂನ್ಯವಾಗಿದ್ದಿದ್ದರೆ ನಾವೆಲ್ಲ ಅನಂತಕಾಲ ದುಃಖ ಭೋಗಿಸಿದೆವೆಂದು ಭಾವನೆಯುಂಟಾಗುತ್ತಿರಲಿಲ್ಲವೆ? ಹಾಗಾಗಿದ್ದರೆ ಆಸೆ ನೆಲೆಗೊಳ್ಳಲು ಸ್ಥಾನವೆ ಇರುತ್ತಿರಲಿಲ್ಲ, ಇಷ್ಟು ದಿನಗಳಾದ ಮೇಲೆ ದುಃಖವು ನೀಗುವುದು ಎಂದು ಯಾರೂ ಭಾವಿಸಲಾಗುತ್ತಿರಲಿಲ್ಲ. ಆಗ ವೃಕ್ಷಾದಿ ಶೂನ್ಯವಾದ ವಿಶಾಲವಾದ ಮರುಭೂಮಿಯಲ್ಲಿ ಸಂಚರಿಸುವುದು ಕಷ್ಟವಾಗುವಂತೆ, ಜೀವನ ಪಥದಲ್ಲಿ ಸಾಗುವುದೂ ಕಷ್ಟವಾಗುತ್ತಿತ್ತು, ಜೀವನ ಯಾತ್ರೆ ಅಸಾಧ್ಯ ಯಾತನೆಯಾಗುತ್ತಿತ್ತು. ಅತಏವ ಈ ವಿಶಾಲ ವಿಶ್ವಕೇಂದ್ರನಾದ ಸೂರ್ಯನ ಪಥವು ನಮ್ಮ ದುಃಖದ ಮಾನದಂಡವಾಗಿದೆ. ದಿನಗಳನ್ನು ಎಣಿಸುವುದರಲ್ಲಿ ಸುಖವಿದೆ. ಸುಖವುಂಟಾಗುವ ಕಾರಣದಿಂದ ದುಃಖಿಗಳು ದಿನಗಳ ಲೆಕ್ಕ ಮಾಡುತ್ತಾರೆ. ಅವರಿಗೆ ದಿನಗಣನೆಯೆ ದುಃಖವಿನೋದನ. ಆದರೆ ಬೇರೆ ಬಗೆಯ ದುಃಖಿಗಳಿದ್ದಾರೆ. ಅವರು ದಿನಗಳನ್ನು ಎಣಿಸುವುದಿಲ್ಲ. ದಿನಗಣನೆಯು ಅವರಿಗೆ ದುಃಖ ವಿನೋದನವಲ್ಲ. ಮರೆತು

ಭೂಲೋಕದಲ್ಲಿ ಮನುಷ್ಯ ಜನ್ಮ ತಳೆದ ನಾನು-ಕಮಲಾಕಾಂತ ಚಕ್ರವರ್ತಿ-ಸುಖಹೀನ, ಆಶಾಹೀನ, ಉದ್ದೇಶ್ಯ ಶೂನ್ಯ, ಆಕಾಂಕ್ಷ ಶೂನ್ಯ ! ನಾನು ಏತಕ್ಕಾಗಿ ದಿನಗಳನ್ನು ಎಣಿಸಬೇಕು? ಈ ಸಂಸಾರ ಸಮುದ್ರದಲ್ಲಿ ತೇಲುತ್ತಿರುವ ಹುಲ್ಲು ನಾನು. ಸಂಸಾರದ ಬಿರುಗಾಳಿಯಲ್ಲಿ ಸಿಕ್ಕು ಮೇಲೆ ಹಾರಿ ಹೋಗುತ್ತಿರುವ ಧೂಳಿನ ಕಣ ನಾನು; ಸಂಸಾರಾರಣ್ಯದಲ್ಲಿ ನಾನೊಂದು ನಿಷ್ಫಲ ವೃಕ್ಷ; ಸಂಸಾರಾಕಾಶದಲ್ಲಿ ನಾನು ವಾರಿಶೂನ್ಯ ಮೇಘ - ನಾನೇಕೆ ದಿನಗಳನ್ನೆಣಿಸಲಿ ?

ಎಣಿಸುವೆನು. ನನಗೆ ಒಂದು ದಃಖ, ಒಂದು ಸಂತಾಪ, ಒಂದು ಭರವಸೆ ಇದೆ. ಸನ್ ೧೨೦೩ನೆಯ ಸಾಲಿನಿಂದ ದಿನಗಳೆಣಿಸುತ್ತಿರುವೆನು. ಎಂದು ಭಾರತಭೂಮಿಯ ವಕ್ಷಸ್ಥಳದ ಮೇಲೆ ಯವನ ಅಶ್ವಾರೋಹಿಗಳು ಪದಾರ್ಪಣ ಮಾಡಿದರೊ, ಎಂದು ಭಾರತೀಯರು ಹಿಂದೂ ಧರ್ಮವನ್ನು ಬಿಟ್ಟು ಪರಮತಾವಲಂಬಿಗಳಾಗಲಾರಂಭಿಸಿದರೊ ಅಂದಿನಿಂದ ದಿನಗಳನ್ನು ಎಣಿಸಲಾರಂಭಿಸಿದ್ದೇನೆ. ಅಯ್ಯೋ! ಎಷ್ಟು ಎಣಿಸಲಿ! ದಿನಗಳನ್ನು ಎಣಿಸುತ್ತ ಎಣಿಸುತ್ತ ಮಾಸಗಳು ಕಳೆದವು, ಮಾಸಗಳನ್ನು ಎಣಿಸುತ್ತ ವರುಷಗಳು ಕಳೆದವು, ವರುಷಗಳ ಗಣನೆಯಲ್ಲಿ ಶತಾಬ್ದಿಗಳು ಸರಿದವು. ಶತಾಬ್ದಿಗಳನ್ನು ಏಳುಬಾರಿ ಎಣಿಸಿದ್ದೇನೆ. ಇನ್ನೆಷ್ಟು ಎಣಿಸಲಿ! ಬಹು ದಿನಗಳಿಂದ ವಿಧಿಯು ನನ್ನ ಮನದಲ್ಲಿ ನೆನದ ಧನವನ್ನೆಲ್ಲ ದೊರಕಿಸಿ ಕೊಟ್ಟಿತೆಲ್ಲಿ? ನಾನು ಅಪೇಕ್ಷಿದ್ದು ದೊರಕಿತೆಲ್ಲಿ? ಮನುಷ್ಯತ್ವ ದೊರಕಿತೇನು? ಏಕ ಜಾತೀಯತ್ವ ಎಲ್ಲಿದೆ? ಐಕಮತ್ಯವೆಲ್ಲಿ? ವಿದ್ಯೆ ಎಲ್ಲಿ? ಗೌರವವೆಲ್ಲಿ? ಶ್ರೀ ಹರ್ಷಾದಿಗಳು ಎಲ್ಲಿ? ಭಟ್ಟನಾರಾಯಣನೆಲ್ಲಿ? ಹಲಾಯುಧವೆಲ್ಲಿ? ಲಕ್ಷ್ಮಣ ಸೇನರೆಲ್ಲಿ? ಕಾಳಿದಾಸ, ಬುದ್ಧದೇವ, ಚಂದ್ರಗುಪ್ತ, ವಿಕ್ರಮಾದಿತ್ಯರುಗಳೆಲ್ಲಿ? ನನ್ನ ಮನೋಧನವು ಇನ್ನೂ ಸಿಕ್ಕುವುದಿಲ್ಲವೇನು? ಹಾಯ್ ! ಎಲ್ಲರಿಗೂ ಇಚ್ಛಿಸಿದ್ದು ಸಿಕ್ಕುತ್ತಿದೆ, ಕಮಲಾಕಾಂತನಿಗೆ ಸಿಕ್ಕುವುದಿಲ್ಲವೆ?

"ಮಣಿಯ ತಾ, ಮಾಣಿಕ್ಯವ ತಾ, ಹಾರ ಧರಿಸುವ ಕೊರಳಲಿ |"

ವಿಧಾತನು ಜಗತ್ತನ್ನು ಜಡಪದಾರ್ಥಮಯವಾಗಿ ಮಾಡಿದನೇಕೆ? ರೂಪ ಜಡಪದಾರ್ಥವೇನು? ಎಲ್ಲರೂ ಅಶರೀರಿಗಳು ಆಗಲಿಲ್ಲವೇಕೆ? ಆಗಿದ್ದರೆ

ಹೃದಯದೊಂದಿಗೆ ಹೃದಯವು ಸೇರಿಕೊಳ್ಳುವುದಿಲ್ಲವೇಕೆ? ರೂಪಕ್ಕಾಗಿ ಶರೀರ ಅವಶ್ಯಕತೆ ಇದ್ದಿದ್ದರೆ, ನಿಮ್ಮ ನಮ್ಮ ಶರೀರವನ್ನು ಒಂದೇ ಆಗಿ ಮಾಡಲಿಲ್ಲವೇಕೆ? ಹಾಗಾಗಿದ್ದರೆ ನಿಯೋಗದ ತೊಂದರೆಯೆ ಇರುತ್ತಿರಲಿಲ್ಲ. ಈಗ ಏಕ ಶರೀರಿಗಳಾಗಲಾರೆವೇನು? ನನ್ನ ಶರೀರದಲ್ಲಿ ಇಷ್ಟೊಂದು ಸ್ಥಾನವಿದೆ-ಅದರಲ್ಲಿ ನಿನ್ನನ್ನು ಎಲ್ಲಿಯೂ ಕೂಡಿಸಿಕೊಳ್ಳಲಾರೆನೆ! ನಿನ್ನ ಕಂಠವನ್ನಾಲಂಗಿಸಿ ನನ್ನ ಹೃದಯದಲ್ಲಿ ನಿನ್ನ ತೂಗಿಸಿಕೊಳ್ಳಲಾರೆನೆ ನಾನು? ಅಯ್ಯೊ, ನೀನು "ಮಣಿಯನು ತಾ, | ಮಾಣಿಕ್ಯವ ತಾ | ಹಾರವ ಮಾಡಿ, ಧರಿಸುವ ಕೊರಳಲಿ |"

ಇನ್ನು ಭರತಭೂಮಿ! ನೀನು ಮಣಿ ಅಥವಾ ಮಾಣಿಕ್ಯವೇಕೆ ಆಗ ಲಿಲ್ಲ. ನಿನ್ನನ್ನು ಹಾರವಾಗಿಮಾಡಿ ನಾನು ಕಂಠದಲ್ಲಿ ಧರಿಸಲಿಲ್ಲವೇಕೆ? ನಿನ್ನನ್ನು ಕಂಠದಲ್ಲಿ ಧರಿಸಿದ್ದರೆ ಮುಸಲ್ಮಾನರು ನನ್ನ ಹೃದಯದ ಮೇಲೆ ಪದಾಘಾತ ಮಾಡದಿರುವವರೆಗೆ ಅವರ ಕಾಲಿನ ಧೂಳು ನಿನ್ನನ್ನು ಸ್ಪರ್ಶಿಸು ತ್ತಿರಲಿಲ್ಲ. ನಿನ್ನನ್ನು ಸುವರ್ಣಾಸನದಲ್ಲಿ ಕೂಡಿಸಿ, ಹೃದಯದಲ್ಲಿಟ್ಟು ಕೊಂಡು, ದೇಶ ದೇಶಗಳವರಿಗೆ ತೋರಿಸುತ್ತಿದ್ದೆನು. ಯೂರೋಪು, ಅಮೆರಿಕಾ, ಮಿಶ್ರ, ಚೀಣದವರು ನಿನ್ನನ್ನು ನೋಡಿ ನನ್ನ ಉಜ್ವಲ ಮಣಿ ಎಂದು ತಿಳಿಯುತ್ತಿದ್ದರು!

"ವಿಧಿ ಎನ್ನ ನಾರಿಯಾಗಿ ಮಾಡದಿದ್ದರೆ,
ನಿನ್ನಂತಹ ಗುಣ ನಿಧಿಯ
ಹೊತ್ತು ತಿರುಗುತಿದ್ದೆ, ಸೀಮೆ ಸೀಮೆ |"

ಮೊದಲು ಆವಾಹನೆ-"ಬಾ ಬಾರಯ್ಯ ಬಂಧೊ ಬಾ!"-ಅನಂತರ ಆದರ-"ಬಾ ಅರಿಸೆರಗಲಿ ಕೂರೊ |"-ಬಳಿಕ ಭೋಗ-"ಕಣ್ತುಂಬ ನೋಡುವೆ ನಿನ್ನ!"-ಆಗ ಸುಖ ಭೋಗ ಕಾಲದಲ್ಲಿ ಪೂರ್ವ ದುಃಖ ಸ್ಮೃತಿ-"ಬಹುದಿನ ಗಳಿಂದ ಹೃದಯ ಸರಸಿನಲ್ಲಿ ಬಯಸಿದ ಧನವನಿಂದು ಕೊಡಿಸಿತು ವಿಧಿ |"- ಸುಖವು ಎರಡು ಬಗೆ ಒಂದು ಸಂಪೂರ್ಣ-ಇನ್ನೊಂದು ಅಸಂಪೂರ್ಣ. ಸುಖವೆಂದರೆ-

"ರತನ ಮಾಣಿಕಗಳಿಲ್ಲ। ಕೊರಳಿಗೆ ಹಾರವನು ಹಾಕಲು।"–ಅನಂತರ ಸಂಪೂರ್ಣ ಸುಖ. - "ವಿಧಿ ನಾರಿಯಾಗಿ ಮಾಡದಿದ್ದರೆನ್ನ।

ಗುಣನಿಧಿಯಾದ ನಿನ್ನನ್ನು ಹೊತ್ತು
ದೇಶ ದೇಶ ಸುತ್ತುತಿದ್ದೆನು।"

ಶರೀರದ ಚಂಚಲತೆ, ಮನಸ್ಸಿನ ಅಸ್ಥಿರತೆ-ಇವು ಅಸಹನೀಯ ಸುಖದ ಸಂಪೂರ್ಣ ಲಕ್ಷಣಗಳು. ಈ ಸುಖವನ್ನು ಎಲ್ಲಿಡಬೇಕು, ತೆಗೆದುಕೊಂಡು ಏನುಮಾಡಬೇಕು, ನಾನು ಎಲ್ಲಿಗೆ ಹೋಗಲಿ, ಈ ಸುಖದ ಹೊರೆಯನ್ನು ನಾನು ಎಲ್ಲಿ ಇಳಿಸಲಿ? ಈ ಸುಖದ ಹೊರೆಯನ್ನು ಹೊತ್ತು ನಾನು ದೇಶ ಗಳಲ್ಲಿ ಸುತ್ತುವೆನು. ಈ ಸುಖವು ಒಂದೇ ಸ್ಥಳದಲ್ಲಿ ಹಿಡಿಸದು. ಎಲ್ಲೆಲ್ಲಿ ಪೃಥ್ವಿಯಲ್ಲಿ ಎಡೆಯಿದೆಯೊ ಅಲ್ಲೆಲ್ಲ ಈ ಸುಖದ ಹೊರೆಯನ್ನು ಹೊತ್ತು ಕೊಂಡು ಹೋಗುವೆನು. ಈ ಜಗತ್ ಸಂಸಾರವನ್ನು ಈ ಸುಖದಿಂದ ತುಂಬಿಸುವೆನು. ಸಂಸಾರವನ್ನು ಸುಖ ಸಾಗರದಲ್ಲಿ ತೇಲಿಸುವೆನು. ಒಂದು ಮೇರುವಿನಿಂದ ಇನ್ನೊಂದು ಮೇರುವಿನವರೆಗೆ ಇದರ ಅಲೆಗಳನ್ನೆಬ್ಬಿಸುವೆನು. ನಾನು ಇದರಲ್ಲಿ ಮುಳುಗಿ, ಎದ್ದು, ತೇಲಿ, ಇಳಿದು ಇದರಲ್ಲಿಯೆ ಓಡುವೆನು. ಈ ಸುಖದಲ್ಲಿ ಕಮಲಾಕಾಂತನಿಗೆ ಅಧಿಕಾರವಿಲ್ಲ. ಈ ಸುಖದಲ್ಲಿ-ಭಾರತೀಯ ರಿಗೆ - ಹಿಂದೂಗಳಿಗೆ ಅಧಿಕಾರವಿಲ್ಲ. ಈ ಸುಖದ ಚರ್ಚೆಯಲ್ಲಿ ಕೂಡ ಭಾರತೀಯರಿಗೆ ಅಧಿಕಾರವಿಲ್ಲ. ವಿಧಾತನು ತಮ್ಮನ್ನು ಸ್ತ್ರೀಯರಾಗಿ ಏಕೆ ಮಾಡಿದನೆಂಬುದು ಗೋಪಿಯರ ದುಃಖವಾಗಿತ್ತು. ವಿಧಾತನು ನನ್ನನ್ನು ನಾರಿಯಾಗಿ ಏಕೆ ಮಾಡಲಿಲ್ಲವೆಂದು ನನಗೆ ದುಃಖ. ಹಾಗಾಗಿದ್ದರೆ ಈ ಮುಖವನ್ನು ಮತ್ತಾರಿಗೂ ತೋರಬೇಕಾಗುತ್ತಿರಲಿಲ್ಲ. ಸುಖದ ಚರ್ಚೆ ಯನ್ನುಮಾಡಲು ಭಾರತೀಯರಿಗೆ ಅಧಿಕಾರವಿಲ್ಲ. - ಆದರೆ ಅವರಿಗೆ ದುಃಖದ ವಿಚಾರಗಳಲ್ಲಿ ಅಧಿಕಾರವಿದೆ. ಕಾತರೋಕ್ತಿಯು ಎಷ್ಟೇ ಗಂಭೀರ, ಎಷ್ಟೆ, ಹೃದಯ ವಿದಾರಕವಾಗಿರಲಿ - ಅದು ಭಾರತೀಯರ ಮರ್ಮೋಕ್ತಿ. ಮತ್ತೆ ಕಾತರೋಕ್ತಿ ಎಲ್ಲಿ ಇಲ್ಲ! ಈಗತಾನೆ ಹುಟ್ಟಿದ ಹಕ್ಕಿಯ ಮರಿಯಿಂದ ಮಹಾದೇವನ ಶೃಂಗಧ್ವನಿಯ (ಕೊಂಬಿನ ಸ್ವರದ) ವರೆಗೆ ಎಲ್ಲವೂ ಕಾತ ರೋಕ್ತಿಯೆ! ಸಂಪೂರ್ಣ ಸುಖವುಳ್ಳ ಸುಖಿಗಳು ಸುಖ ಕಾಲದಲ್ಲಿ ಪೂರ್ವ

ದುಃಖ ಸ್ಮರಣೆಯನ್ನು ಮಾಡಿಕೊಂಡು, ಕಾತರೋಕ್ತಿಗಳನ್ನಾಡುವರು. ಹಾಗೆ ಮಾಡದಿದ್ದರೆ ಸುಖದಲ್ಲಿ ಸಂಪೂರ್ಣತೆ ಎಲ್ಲಿರುತ್ತಿತ್ತು? ದುಃಖದ ಸ್ಮರಣೆಯ ಹೊರತು ಸುಖದಲ್ಲಿ ಸಂಪೂರ್ಣತೆ ಇಲ್ಲ. ಸುಖವೂ ದುಃಖ ಮಯ.—

"ಬಂಧೊ ನಿನ್ನ ನೆನಪಾದರೆನಗೆ
ನಾನು ವೃಂದಾವನ ನೋಡಬಯಸುವೆನು
ಕೆದರಿದ ಕೂದಲ ಕಟ್ಟದಿರುವೆನು।"

ಈ ಉಕ್ತಿಯು ಸುಖ ದುಃಖಗಳ ಮಧ್ಯದ ಮೇರೆಯ ಗೆರೆ. ಯಾರಲ್ಲಿ ಹಿಂದಿನ ಸುಖ ಸ್ಮೃತಿಯು ಜಾಗರಿತವಾಗಿ ಆ ಸುಖದ ನಿದರ್ಶನವು ಈಗಲೂ ಗೋಚರಿಸುವುದೊ ಅಂತಹವರು ಈಗಲೂ ಸುಖಿಗಳು. - ಅಂತಹ ಸುಖವು ಸಮೂಲವಾಗಿ ನಾಶವಾಗುವುದಿಲ್ಲ ಅವರ ಬಂಧುಗಳು, ಅವರಿಗೆ ಪ್ರಿಯರಾದ ವರು, ಅವರ ಇಷ್ಟಮಿತ್ರರು ಹೋಗಿಬಿಟ್ಟಿರಬಹುದು, ಆದರೆ ಅವರು 'ವೃಂದಾವನ'ವಾಗಿರುವರು. ಅವರಿಗೆ ಬೇಕಾದಾಗ ಅವರು ತಮ್ಮ ಸುಖ ಭೂಮಿ ವೃಂದಾವನದ ಕಡೆ ನೋಡುವರು. ಯಾರಲ್ಲಿ ಸುಖವು ಸಂಪೂರ್ಣ ವಾಗಿ ನಾಶವಾಗಿದೆಯೊ, ಸುಖದ ಚಿಹ್ನೆಯೂ ಉಳಿದಿಲ್ಲವೊ, ಬಂಧುಗಳೂ ನಷ್ಟವಾಗಿ, ವೃಂದಾವನವೂ ಇಲ್ಲದಂತಾಗಿ, ಕಣ್ಣೆತ್ತಿ ನೋಡಲು ಬೇರೆ ಸ್ಥಾನವಿಲ್ಲದಂತಾಗಿದೆಯೊ ಅಂತಹರೇ ದುಃಖಿಗಳು. - ಅನಂತ ದುಃಖ ಪೂರ್ಣ ದುಃಖಿಗಳು! ವಿಧವೆಯಾದ ಯುವತಿಯು, ಯತ್ನಪೂರ್ವಕ ವಾಗಿ ರಕ್ಷಿಸಿಟ್ಟುಕೊಂಡಿದ್ದ ಮೃತ ಪತಿಯ ಪಾದುಕೆಗಳನ್ನು ಕಳೆದುಕೊಂಡಾಗ ದುಃಖಿಯಾಗಿರುವಂತೆಯೆ, ಇವರೂ ದುಃಖಮಯ ದುಃಖಿಗಳಾಗಿರುವರು.

ನನಗೆ ಈ ಭಾರತ ದೇಶದ ಸುಖದ ಸ್ಮೃತಿ ಇದೆ, ಆದರೆ ಅದರ ಚಿಹ್ನೆ, ಎಲ್ಲಿ?* ದೇವಪಾಲದೇವ, ಲಕ್ಷ್ಮಣಸೇನ, ಗೌರಾಂಗ, ಜಯದೇವ, ಶ್ರೀಹರ್ಷ

---

* ಇಲ್ಲಿ ಮೂಲ ನಿಬಂಧಕಾರರ ಕೇವಲ ವಂಗದೇಶದ ವಿಚಾರ ಲಹರಿಯಲ್ಲಿ, ಪಾಠಕರಿಗೆ ಸುಬೋಧವಾಗಿರಲು ಭಾರತೀಯರೆಲ್ಲರ ವಿಚಾರ ತರಂಗವನ್ನು ಸೇರಿಸ ಲಾಗಿದೆ.

—ದ. ಕೃ. ಭಾ.

ವಿಕ್ರಮ, ಭೋಜ, ಕಾಳಿದಾಸ, ಭವಭೂತಿ, ಚಂದ್ರಗುಪ್ತ, ಅಶೋಕ, ಶಂಕರ, ಬುದ್ಧ, ವಿದ್ಯಾರಣ್ಯ, ದೆಹಲಿ, ಕನೂಜ್, ಭುವನೇಶ್ವರ, ವಿಜಯ ನಗರ ಮೊದಲಾದುವುಗಳ ಸ್ಮೃತಿಯು ತನ್ನಲ್ಲಿದೆ. ಆದರೆ ಅವುಗಳ ಚಿಹ್ನೆ ಗಳೆಲ್ಲಿ? ಸುಖದ ಸ್ಮೃತಿಯುಂಟಾದರೆ ನಾನು ಯಾವ ದಿಕ್ಕಿನಲ್ಲಿ ನೋಡಲಿ? ಆ ಗೌರಾಂಗನೆಲ್ಲಿ? ಆ ದೆಹಲಿ, ಆ ಕನೂಜು, ಆ ವಿಜಯನಗರಗಳೆಲ್ಲಿ? ಅವು ಇಂದು ಕೇವಲ ಯವನಲಾಂಛಿತ ಭಗ್ನಾವಶೇಷಗಳು! ಆರ್ಯ ರಾಜ ಧಾನಿಯ ಚಿಹ್ನೆ ಎಲ್ಲಿದೆ! ಆರ್ಯ ಇತಿಹಾಸವೆಲ್ಲಿ? ಜೀವನ ಚರಿತವೆಲ್ಲಿ? ಕೀರ್ತಿ ಎಲ್ಲಿ? ಕೀರ್ತಿ ಸ್ತಂಭವೆಲ್ಲಿ? ಸಮರ ಕ್ಷೇತ್ರವೆಲ್ಲಿ? ಸುಖವು ನಾಶ ವಾಯಿತು, ಸುಖದ ಚಿಹ್ನೆಯೂ ಹೋಯಿತು, ಬಂಧುಗಳೂ ಹೋದರು! ವೃಂದಾವನವೂ ಹೋಯಿತು. ಇಗ ನಾನು ಯಾವ ದಿಕ್ಕಿನಲ್ಲಿ ನೋಡ ಬೇಕು?

ಈಗ ನೋಡಲು ಒಂದು ಸ್ಮಶಾನ ಭೂಮಿ ಇದೆ-ಇಂದ್ರಪ್ರಸ್ಥ, ಯವನರು ಅದನ್ನಾಕ್ರಮಿಸಿ, ಅಲ್ಲಿಂದಲೆ ತಮ್ಮ ಅಧಿಕಾರವನ್ನು ನಡೆಯಿ ಸುತ್ತ, ಭಾರತಮಾತೆಯ ಮೇಲೆ ತಮ್ಮ ಅಧಿಕಾರಮುದ್ರೆಯನ್ನೊತ್ತಿದರು. ಭಾರತ ಮಾತೆಯ ನೆನಪಾದಾಗ ನಾನು ಆ ಸ್ಮಶಾನ ಭೂಮಿಯಕಡೆ ನೋಡು ವೆನು.* ಅಂದಿನ ಕಲಧೌತವಾಹಿನಿ ಯಮುನಾನದಿಯೆ ಇಂದು ಅಲ್ಲಿ ಕಲಕಲರವದೊಂದಿಗೆ ಹರಿಯುತ್ತಿರುವುದು, ಆ ನದಿಯನ್ನು ನೋಡಿದಾಗ ಜಿಜ್ಞಾಸೆಯುಂಟಾಗುವುದು-"ಯಮುನೆ! ನೀನು ಇದ್ದೀಯೆ; ಆದರೆ ಆ ರಾಜ್ಯಲಕ್ಷ್ಮಿ ಎಲ್ಲಿ? ನೀನು ಯಾವ ಪಾದಗಳನ್ನು ತೊಳೆಯುತ್ತಿದ್ದೆಯೊ ಆ ಮಾತೆ ಎಲ್ಲಿ? ಯಾರನ್ನು ಸುತ್ತಿ ಸುತ್ತಿ ನೀನು ನರ್ತಿಸುತ್ತಿದ್ದೆಯೊ ಆ ಆನಂದಮಯರೂಪಿಣಿ ಎಲ್ಲಿದ್ದಾಳೆ? ನೀನು ಯಾರಿಗೋಸ್ಕರ ಸಿಂಹಳ, ಬಾಲಿ, ಅರಬ, ಸುಮಾತ್ರಾದಿ ವಿದೇಶಗಳಿಂದ ಧನವನ್ನು ತರಿಸುತ್ತಿದ್ದೆಯೊ

---

* ಇಂದು ಅಲ್ಲಿಗೆ ಬರುವ ವಿದೇಶೀಯ ರಾಯಭಾರಿಗಳು ಕೂಡ ಮಹಾತ್ಮ ಗಾಂಧಿಯವರ ಸಮಾಧಿಯ ಬಳಿಯಲ್ಲಿ ತಮ್ಮ ಗೌರವವನ್ನರ್ಪಿಸುವರು.

ಬಂಕಿಮಚಂದ್ರರ ನವದ್ವೀಪದ ಉದಾಹರಣೆಗೆ ಬದಲಾಗಿ ಇಲ್ಲಿ ದೆಹಲಿಯ ಉದಾಹರಣೆ ಕೊಟ್ಟಿದೆ.

ಆ ಧನೇಶ್ವರಿ ಎಲ್ಲಿ? ಯಾರ ರೂಪದ ಛಾಯೆಯನ್ನು ಮಾತ್ರ ಪಡೆದು, ನೀನು ರೂಪಸಿಯಾಗಿ ಶೋಭಿಸುತ್ತಿದ್ದೆಯೊ ಆ ಅನಂತ ಸೌಂದರ್ಯ ಶಾಲಿನಿ ತ್ರಿಭುವನಸುಂದರಿ ಎಲ್ಲಿ? ನೀನು ಯಾರ ಪ್ರಸಾದ ರೂಪ ಪುಷ್ಪ ವನ್ನು ಪಡೆದು ನೀನು ಈ ಸ್ವಚ್ಛ ಹೃದಯದಲ್ಲಿ ಮಾಲೆಯನ್ನು ಧರಿಸು ತ್ತಿದ್ದೆಯೊ ಆ ಪುಷ್ಪಾಭರಣವೆಲ್ಲಿದೆ? ಆ ರೂಪ, ಆ ಐಶ್ವರ್ಯಗಳನ್ನು ನೀನು ತೊಳೆದು ಎಲ್ಲಿಗೆ ಕೊಂಡೊಯ್ದೆ? ವಿಶ್ವಾಸ ಘಾತಿನಿ! ನೀನು ಈಗ ಏಕೆ ಶ್ರವಣ ಮಧುರವಾದ ಕಲಕಲ - ಗಳಗಳ - ನಾದದಿಂದ ಮನಸ್ಸನ್ನು ಪ್ರಸನ್ನ ಗೊಳಿಸಲೆತ್ನಿಸುತ್ತಿರುವಿ? ಆ ರಾಜ್ಯ ಲಕ್ಷ್ಮಿಯು ಯವನ ಭಯದಿಂದ ಭೀತ ಳಾಗಿ, ನಿನ್ನ ಅತಲ ಗರ್ಭದಲ್ಲಿ ಅಡಗಿಕೊಂಡಳು. ಮತ್ತೆ ಈ ಕುಪುತ್ರರಾದ ನಮ್ಮ ಮುಖಗಳನ್ನು ನೋಡಬಾರದೆಂದು ಅವಳು ಮುಳುಗಿಕೊಂಡಿರುವಳು- ಎಂದು ನನಗೆ ತೋರುವುದು. ಮನಸ್ಸಿನಲ್ಲಿಯೆ ನಾನು ಆ ರಾಜ್ಯಲಕ್ಷ್ಮಿಯು ಮುಳುಗಿದ ದಿನವನ್ನು ಜ್ಞಾಪಿಸಿಕೊಂಡು ಅಳುತ್ತಿರುವೆನು. ನನ್ನ ಮನಸ್ಸಿಗೆ ಭಾಸವಾಗುತ್ತಿದೆ–ಆ ಥಳಥಳಿಸುತ್ತಿರುವ ಬರ್ಜಿಗಳನ್ನು ಎತ್ತರವಾಗಿ ಹಿಡಿದು, ಯವನ ಸೇನೆಯ ಅಶ್ವಾರೋಹಿಗಳು ಇಂದ್ರಪ್ರಸ್ಥಕ್ಕೆ ಬರುತ್ತಲಿರುವರು. ತನ್ನ ಕಾಲವು ಪೂರ್ಣವಾಯಿತೆಂದು ಭಾರತದ ಭಾಗ್ಯಲಕ್ಷ್ಮಿಯು ಅಂತರ್ಹಿತ ಳಾಗುತ್ತಿರುವಳು. ಅಕಸ್ಮಾತ್ತಾಗಿ ಆಕಾಶದಲ್ಲಿ ಅಂಧಕಾರವು ವ್ಯಾಪಿಸಿತು. ಅರಮನೆಯ ಕಲಶವು ಭಗ್ನವಾಗಿ ಬೀಳಲಾರಂಭಿಸಿತು! ಪಥಿಕರು ಭೀತ ರಾಗಿ ದಾರಿಯನ್ನು ಬಿಟ್ಟರು! ಸ್ತ್ರೀಯರ ಶರೀರದಿಂದ ಆಭರಣಗಳು ಕಳಚಿ ಬೀಳಲಾರಂಭಿಸಿದವು! ಕುಂಜವನದಲ್ಲಿ ಪಕ್ಷಿಗಣಗಳು ನಿಶ್ಶಬ್ದವಾದವು! ಮನೆಗಳಲ್ಲಿ ಕೇಕಾರವವನ್ನುಂಟುಮಾಡುತ್ತಿದ್ದ ನವಿಲುಗಳ ಕಂಠರವವು ಅರ್ಧ ದಲ್ಲಿಯೆ ನಿಂತುಬಿಟ್ಟಿತು! ದಿನವು ರಾತ್ರಿಯಾಯಿತು. ಅಂಗಡಿಯ ಬೀದಿಯ ದೀಪಗಳು ನಂದಿದವು. ಮಂದಿರಗಳಲ್ಲಿ ವಾದ್ಯಸಮಯದಲ್ಲಿ ಶಂಖಧ್ವನಿ ಯನ್ನು ಬಾಜಿಸಲಿಲ್ಲ. ಪಂಡಿತರು ಮಂತ್ರಗಳನ್ನು ಶುದ್ಧವಾಗಿ ಪಠಿಸಲಾರದೆ ಹೋದರು. ಸಿಂಹಾಸನದ ಮೇಲಿಂದ ಸಾಲಿಗ್ರಾಮ ಶಿಲೆಯು ಉರುಳಿಬಿತ್ತು. ಯುವಕರಿಗೆ ಸಹಸಾ ಬಲಕ್ಷಯವಾಯಿತು. ಯುವತಿಯರು ವೈಧವ್ಯ ಪ್ರಾಪ್ತಿ ಭಯದಿಂದ ಅಳಲಾರಂಭಿಸಿದರು! ಶಿಶುಗಳು ಯಾವ ರೋಗರುಜಿನವೂ ಇಲ್ಲದೆ ಮಾತೆಯರ ತೊಡೆಗಳ ಮೇಲೆ ಮಲಗಿ ಸತ್ತವು! ಎಲ್ಲೆಲ್ಲೂ ಬಹು

ಗಾಢತರವಾದ ಅಂಧಕಾರವು ಮುಸುಕಿತು. ಆಕಾಶ, ಅಟ್ಟಾಲಿಕೆಗಳು, ರಾಜಧಾನಿ, ರಾಜಮಹಲು, ದೇವ ಮಂದಿರುಗಳು, ಅಂಗಡಿಬೀದಿಗಳು, - ಎಲ್ಲ ಅಂಧಕಾರದಲ್ಲಿ ಅಡಗಿಬಿಟ್ಟವು. ಕುಂಜತೀರ, ನದಿಯ ಮರಳದಂಡೆ, ನದಿಯ ಮೇಲಿನ ಅಲೆಗಳು, ಎಲ್ಲವೂ ಆ ಅಂಧಕಾರದಲ್ಲಿ ಅಸ್ಪಷ್ಟ ಆಗುತ್ತ ಆಗುತ್ತ ಲೀನವಾಗಿ ಹೋದವು. ನಾನು ಈಗಲೂ ಅದನ್ನೆಲ್ಲ ನೋಡುತ್ತಿದ್ದೇನೆ! ಆಕಾಶದಲ್ಲಿ ಮೋಡಗಳು ಕವಿಯುತ್ತಿವೆ. ಆ ರಾಜ್ಯಲಕ್ಷ್ಮಿಯು ನದಿಯ ಮೆಟ್ಟಿಲುಗಳಿಂದ ನೀರಿನ ಕಡೆ ಇಳಿಯುತ್ತಿರುವಳು! ಅಂಧಕಾರದಲ್ಲಿ ನಿರ್ವಾಣೋನ್ಮುಖವಾಗಿರುವ ಪ್ರಕಾಶ ಬಿಂದುವಿನಂತೆ, ಕ್ರಮಶಃ ಆ ತೇಜೋರಾಶಿಯು ವಿಲೀನವಾಗುತ್ತಿದೆ. ಆ ಗಂಗಾಜಲದಲ್ಲಿ ಮುಳುಗದಿದ್ದರೆ, ನನ ದೇಶಲಕ್ಷ್ಮಿಯು ಎಲ್ಲಿಗೆ ಹೋದಳು ?

ಇತಿ,

— ಶ್ರೀ ಕಮಲಾಕಾಂತ ಚಕ್ರವರ್ತಿ.

---

## ೧೩. ಬೆಕ್ಕು

ನಾನು ನನ್ನ ಮಲಗುವ ಕೋಣೆಯಲ್ಲಿ ನೂಲು ಮಂಚದ (ಹೊರಸಿನ) ಮೇಲೆ ಕುಳಿತುಕೊಂಡು ಹುಕ್ಕಾ ಸೇದುತ್ತ ತಲೆದೂಗುತ್ತಲಿದ್ದೆ. ಅಲ್ಲಿ ಒಂದು ಸಣ್ಣ ಹಣತೆಯ ದೀಪವು ಮಿಣ ಮಿಣ ಮಿನುಗುತ್ತಿತ್ತು. ಗೋಡೆ ಯಮೇಲೆ ಚಂಚಲವಾದ ಛಾಯೆಯು ಪ್ರೇತದಂತೆ ನರ್ತಿಸುತ್ತಿತ್ತು. ಅಡುಗೆ ಇನ್ನೂ ಆಗಿರಲಿಲ್ಲ. ಆದ್ದರಿಂದ ನಾನು ಕಣ್ಣು ಮುಚ್ಚಿಕೊಂಡು ಹುಕ್ಕ ವನ್ನು ಕೈಲಿ ಹಿಡಿದು ಕೊಂಡು, –

"ನಾನೇ ನೆಪೋಲಿಯನ್ ಬೋನೋಪಾರ್ಟ್ ಆಗಿದ್ದರೆ ವಾಟರ್ಲೂ ಯುದ್ಧದಲ್ಲಿ ನಾನು ಗೆಲ್ಲುತ್ತಿದ್ದೆನೋ, ಇಲ್ಲವೋ ?" ಎಂದು ಯೋಚಿಸುತ್ತಿದ್ದೆ. ಆ ಸಮಯದಲ್ಲಿ "ಮ್ಯಾವ್" ಎಂದು ಸಣ್ಣ ಧ್ವನಿಯು ಕೇಳಿಸಿತು.

ಕಣ್ಣು ತೆಗೆದು ನೋಡಿದೆ. ನನಗೇನೂ ತೋರದಂತಾಯಿತು. ವಾಟರ್ಲೂ ಯುದ್ಧದಲ್ಲಿ ನೆಪೋಲಿಯನ್ನನ್ನು ಸೋಲಿಸಿದ ಡ್ಯೂಕ್ ಆಫ್ ವೆಲಿಂಗ್ಟನ್‌ನೇ ಹಠಾತ್ತಾಗಿ ಬೆಕ್ಕಿನ ರೂಪವನ್ನು ತಳೆದು ನನ್ನ ಹತ್ತಿರ ಅಫೀಮು ಭಿಕ್ಷೆಬೇಡಲು ಬಂದಿದ್ದಾನೆಂದು ಮೊದಲು ತೋರಿತು. ನಾನು ಮೊದಲೇ ಕಲ್ಲಿನಂತೆ ಕಠಿನನಾಗಿ - "ಡ್ಯೂಕ್ ಮಹಾಶಯ, ನಿನಗೆ ಮೊದಲೇ ಉಚಿತವಾದ ಪುರಸ್ಕರವನ್ನು ಮಾಡಲಾಗಿದೆ. ಈಗ ಮತ್ತಾವ ಪುರಸ್ಕಾರ ವನ್ನೂ ಕೊಡಲಾಗುವುದಿಲ್ಲ; ಅತಿ ಆಸೆ ಒಳ್ಳೆಯದಲ್ಲ" ಎಂದು ಹೇಳಬೇ ಕೆಂದು ಮಾಡಿದ್ದೆನು. ಅಷ್ಟರಲ್ಲಿ ಡ್ಯೂಕನು "ಮ್ಯಾವ್" ಎಂದನು.

ಆಗ ಚೆನ್ನಾಗಿ ಕಣ್ಣು ತೆರೆದು ನೋಡಿದೆ. ವೆಲಿಂಗ್ಟನ್ ಇಲ್ಲ! ಒಂದು ಸಣ್ಣ ಬೆಕ್ಕು ಅಲ್ಲಿ ಕೂತಿದೆ. ಗೌಳಗಿತ್ತಿ ಪ್ರಸನ್ನಳು ನನಗಾಗಿ ಹಾಲಿಟ್ಟು ಹೋಗಿದ್ದಳು. ಅದನ್ನು ಬೆಕ್ಕು ನಿಶ್ಶೇಷವಾಗಿ ಕುಡಿದು ಬಿಟ್ಟಿತ್ತು. ಆಗ ನಾನು ವಾಟರ್ಲೂ ರಣರಂಗದಲ್ಲಿ ವ್ಯೂಹರಚನೆಯನ್ನು ಮಾಡುವುದರಲ್ಲಿ ಮಗ್ನನಾಗಿದ್ದುದರಿಂದ ಬೆಕ್ಕನ್ನು ನೋಡಲಿಲ್ಲ. ಈಗ ಆ ಮಾರ್ಜಾಲ ಸುಂದರಿಯು ನೀರು ಬೆರೆಯದ ಹಾಲಿನಿಂದ ತೃಪ್ತಿಹೊಂದಿ, ತನ್ನ ಮನಸ್ಸಿ

ನಲ್ಹಾದ ಸುಖವನ್ನು ಜಗತ್ತಿಗೆ ತೋರಿಸಬೇಕೆಂಬ ಅಭಿಪ್ರಾಯದಿಂದ ಮಧುರವಾದ ಸ್ವರದಲ್ಲಿ "ಮ್ಯಾವ್" ಎನ್ನುತ್ತಿತ್ತು. ಆ ಶಬ್ದದಲ್ಲಿ ವ್ಯಂಗಭಾವವಿತ್ತೋ ಏನೋ ನಾನರಿಯೆ. ಅಥವಾ ಅದು ನನ್ನನ್ನು ನೋಡಿ, - "ಸಂಪಾದಿಸುವವರೊಬ್ಬರು, ತಿನ್ನುವವರು ಬೇರೊಬ್ಬರು" ಎಂದು ಹಾಸ್ಯ ಮಾಡುತ್ತಿತ್ತೋ ಏನೋ? ಅಂತೂ ಆ "ಮ್ಯಾವ್" ಎಂಬ ಶಬ್ದದಿಂದ ತನ್ನ ಮನೋಭಾವವನ್ನು ತಿಳಿಸುವ ಅಭಿಪ್ರಾಯವು ಆ ಬೆಕ್ಕಿಗೆ ಇತ್ತೆಂದು ತೋರುವುದು. ಆ ಬೆಕ್ಕು "ನಿನ್ನ ಹಾಲು ನಾನು ಕುಡಿದುಬಿಟ್ಟೆ - ಈಗ ನೀನು ಏನು ಹೇಳುವೆ?" ಎಂದು ಕೇಳುತ್ತಿತ್ತೆಂದು ತಿಳಿದುಕೊಂಡೆನು.

ನಾನೇನು ಹೇಳಲಿ? ನಾನು ಏನು ಹೇಳಬೇಕೆಂದು ನಿಶ್ಚಯಿಸಲಿಲ್ಲ ಹಾಲು ನಮ್ಮಪ್ಪನ ಮನೆಯದಲ್ಲ. ಹಾಲು ಮಂಗಳೆ ಎಂಬ ಗೋವಿನದು. ಅದನ್ನು ಕರೆದವಳು ಗೌಳಗಿತ್ತಿ ಪ್ರಸನ್ನೆ. ಆದ್ದರಿಂದ ಆ ಹಾಲಿನ ಮೇಲೆ ನನಗಿರುವಷ್ಟು ಅಧಿಕಾರವು ಬೆಕ್ಕಿಗೂ ಇತ್ತು. ಅದಕ್ಕೋಸ್ಕರ ನಾನು ಬೆಕ್ಕಿನ ಮೇಲೆ ಕೋಪಿಸಕೊಳ್ಳಲಿಲ್ಲ. ಆದಾಗ್ಗೂ ಬೆಕ್ಕು ಹಾಲು ಕುಡಿಯಲು ಬಂದರೆ ಅದನ್ನು ಓಡಿಸುವ ಒಂದು ಪದ್ಧತಿಯು ಬಹುಕಾಲದಿಂದ ಬಂದಿದೆ. ಆ ಪ್ರಾಚೀನ ಪದ್ಧತಿಯನ್ನು ಅನುಸರಿಸದೆ ಮನುಷ್ಯ ಕುಲಕ್ಕೆ ಕಲಂಕವನ್ನು ತರುವ ಆಶೆಯುಳ್ಳವನಾಗಿಲ್ಲ ನಾನು. ಯಾರಿಗೆ ಗೊತ್ತು? ಆ ಬೆಕ್ಕು ತನ್ನ ಸ್ವಜಾತಿಯವರಲ್ಲಿ ಕಮಲಾಕಾಂತನು ಹೇಡಿಯೆಂದು ಹೇಳಿಕೊಳ್ಳಬಹುದು. ಆದ್ದರಿಂದ ಪುರುಷರಂತೆ ನಾನು ಕೆಲಸಮಾಡಬೇಕು. ಹೀಗೆಂದು ನಿಶ್ಚಯಸಿ, ಕೈಲಿದ್ದ ಹುಕ್ಕಾವನ್ನು ಕೆಳಗಿಟ್ಟು, ಅಲ್ಲಿ ಇಲ್ಲಿ ಹುಡುಕಿ ಒಂದು ಕಟ್ಟಿಗೆ ತುಂಡನ್ನು ಹಿಡಿದುಕೊಂಡು ಗರ್ವದಿಂದ ಬೆಕ್ಕನ್ನು ಓಡಿಸಲು ಹೋದೆನು.

ಬೆಕ್ಕು ಕಮಲಾಕಾಂತನನ್ನು ಬಲ್ಲದು. ಕಟ್ಟಿಗೆಯನ್ನು ನೋಡಿ ಅದು ವಿಶೇಷ ಭೀತಿಗೊಂಡಿರುವ ಲಕ್ಷಣವನ್ನು ತೋರಲಿಲ್ಲ. ಕೇವಲ ನನ್ನ ಕಡೆ ನೋಡುತ್ತ, ಒಂದು ಸಲ ಅಗಲವಾಗಿ ಬಾಯಿ ತೆರೆದು, ಆಕಳಸಿ, ಸ್ವಲ್ಪ ಹಿಂದಕ್ಕೆ ಸರಿದು ಕುಳಿತುಕೊಂಡು "ಮ್ಯಾವ್" ಎಂದಿತು. ಅದು ಏನೋ ಪ್ರಶ್ನೆಯನ್ನು ಕೇಳಿತೆಂದು, ಕೈಲಿದ್ದ ಕಟ್ಟಿಗೆಯನ್ನು ಬಿಟ್ಟು ಹಾಸಿಗೆಯಲ್ಲಿ ಕುಳಿತು, ಹುಕ್ಕಾದೇವಿಯ ಸೇವೆಗಾರಂಭಿಸಿದೆನು. ಆಗ ನನಗೆ ದಿವ್ಯಕರ್ಣವು ಪ್ರಾಪ್ತವಾಗಿ ಬೆಕ್ಕಿನ ಭಾಷೆಯನ್ನು ತಿಳಿದುಕೊಳ್ಳಲಾರಂಭಿಸಿದೆನು.

ಬೆಕ್ಕು ಹೇಳಲಾರಂಭಿಸಿತು—"ವ್ಯ್ಯಾವ್"! ಸುಮ್ಮನೆ ಹೊಡೆಯ ಲೆತ್ನಿಸುವೆ ಏಕೆ? ಹುಕ್ಕಾ ಸೇದುತ್ತ ಸೇದುತ್ತ ಹಾಗೆಯೇ ಸ್ವಲ್ಪ ಯೋಚನೆ ಮಾಡಿ ನೋಡು. ಈ ಜಗತ್ತಿನಲ್ಲಿ ಹಾಲು, ಮೊಸರು, ಬೆಣ್ಣೆ, ಕೆನೆ, ಮಾನು, ಮಾಂಸ – ಇವುಗಳನ್ನೆಲ್ಲ ಕೇವಲ ನೀವು ತಿನ್ನಬೇಕು. ನಾವು ತಿನ್ನಬಾರದೋ? ನೀವು ಮನುಷ್ಯರು, ನಾವು ಬೆಕ್ಕಿನ ಜಾತಿಗೆ ಸೇರಿದವರು. ನಿಮಗೂ ನಮಗೂ ಭೇದವೇನು? ನಿಮಗೆ ಹಸಿವೆ ಬಾಯಾರಿಕೆಗಳಾಗುವವು - ನಮಗಾಗು ವುದಿಲ್ಲವೆ? ನೀವು ತಿನ್ನುವಾಗ ನಾವು ಅಡ್ಡಿಮಾಡುವೆವೆ? ಹಾಗಾದರೆ ನಾವು ತಿನ್ನುವಾಗ ನೀವು ಯಾವ ಶಾಸ್ತ್ರಾಧಾರದಿಂದ ನಮ್ಮನ್ನು ಕಟ್ಟಿಗೆಯನ್ನೆತ್ತಿ ಹೊಡೆಯಲು ಬರುವಿರೆಂದು ನಮಗೆ ಗೊತ್ತಾಗಿಲ್ಲ. ನೀವು ನಮ್ಮಿಂದ ಸ್ವಲ್ಪ ಉಪದೇಶ ಹೊಂದಬೇಕು. (ಪದವೃದ್ಧಿಯಿಂದ) ವಿಜ್ಞರಾದ ಚತುಷ್ಪಾದಿ ಗಳಿಂದ ಶಿಕ್ಷಣವನ್ನು ಪಡೆದ ಹೊರತು ನಿಮ್ಮ ಮಾನವರ ವಿಜ್ಞಾನೋನ್ನತಿಗೆ ಬೇರೆ ಉಪಾಯವಿಲ್ಲ. ನಿಮ್ಮಾ ವಿದ್ಯಾಲಯಗಳಲ್ಲಿ ಅಷ್ಟು ದೀರ್ಘಕಾಲ ಓದಿದ ಬಳಿಕ ನೀನು ನನ್ನ ಈ ಮಾತುಗಳನ್ನು ತಿಳಿದುಕೊಳ್ಳಲಾರಂಭಿಸಿರುವೆ ಎಂದು ಕಂಡುಬರುವುದು.

"ಮಂಚದ ಮೇಲೆ ಮಲಗಿರುವ ಮನುಷ್ಯನೆ! ಹೇಳು- ಧರ್ಮ ವೆಂದರೇನು? ಪರೋಪಕಾರವೆ ಪರಮ ಧರ್ಮ. ನಾನು ಈ ಹಾಲನ್ನು ಕುಡಿದುದರಿಂದ ಪರೋಪಕಾರ ಸಿದ್ಧಿಯಾಯಿತು. ಆದುದರಿಂದ ನೀನು ಆ ಪರಮ ಧರ್ಮದ ಫಲಭೋಗಿಯಾದೆ, ನಾನು ಕಳ್ಳತನವನ್ನೆ ಮಾಡಿರಲಿ, ಏನೇ ಮಾಡಿರಲಿ, ನಿನ್ನಾ ಧರ್ಮ ಸಂಚಯಕ್ಕೆ ನಾನು ಮೂಲಕಾರಣ ನಾದೆನು. ಆದ್ದರಿಂದ ನನ್ನನ್ನು ಹೊಡೆಯದೆ, ಹೊಗಳಬೇಕು. ನಾವು ನಿಮ್ಮ ಜಾತಿಯವರ ಧರ್ಮಕ್ಕೆ ಸಹಾಯಕರು.

"ನಾವು ಕಳ್ಳ ಜಾತಿಯವರು ನಿಜ. ಆದರೆ ನಾವು ಏಕೆ ಕಳ್ಳತನ ಮಾಡ ಲಾರಂಭಿಸಿದೆವು? ತಿನ್ನುವುದಕ್ಕೆ ಸಿಕ್ಕಿದರೆ ಯಾರು ಕಳ್ಳತನ ಮಾಡುವರು? ನೋಡು, - ನಿಮ್ಮಲ್ಲಿ ಕಳ್ಳರೆಂದ ಕೂಡಲೆ ಹೆದರುವ ಪ್ರಮಾಣಿಕರೆನಿಸಿ ಕೊಂಡಿರುವ ಸಾಧುಗಳು, ಅನೇಕ ಜನ ಕಳ್ಳರಿಗಿಂತ ಅಧಾರ್ಮಿಕರಾಗಿರು ವರು. ಅವರಿಗೆ ಕಳ್ಳತನ ಮಾಡುವ ಅವಶ್ಯಕತೆಯಿಲ್ಲವೆಂದು ಅವರು ಕಳ್ಳ ತನ ಮಾಡುತ್ತಿಲ್ಲ. ಆದರೆ ಅವರಲ್ಲಿ ಅವಶ್ಯಕತೆಗಿಂತಲೂ ಅಧಿಕವಾಗಿ

ಧನವಿದ್ದರೂ ಅವರು ಕಳ್ಳರ ಕಡೆ ಕಣ್ಣೆತ್ತಿ ನೋಡುವುದಿಲ್ಲ. ಆದ್ದರಿಂದ ಕಳ್ಳರು ಕದಿಯುತ್ತಾರೆ. ಕಳ್ಳನು ಅಧರ್ಮ ಮಾಡುವುದಿಲ್ಲ. ಕಳ್ಳತನಮಾಡುವ ಕಳ್ಳನ ಅಧರ್ಮವು ಲೋಭಿಯಾದ ಧನಿಕನಿಗೆ ಸೇರಿದುದು. ಕಳ್ಳನು ಅಪರಾಧಿಯೆಂದು ಅವನನ್ನು ಶಿಕ್ಷಿಸುವರು. ಆದರೆ ಕಳ್ಳನಿಗಿಂತಲೂ ನೂರು ಪಾಲು ಹೆಚ್ಚಾಗಿ ಅಪರಾಧಿಯಾಗಿರುವ ಆ ಲೋಭಿ ಧನಿಕನನ್ನು ನೀವು ಶಿಕ್ಷಿಸುವುದಿಲ್ಲವೇಕೆ?

"ನೋಡು, ನಾನು ಗೋಡೆಯಿಂದ ಗೋಡೆಗೆ 'ಮ್ಯಾವ್ - ಮ್ಯಾವ್' ಎಂದು ಶಬ್ದ ಮಾಡುತ್ತ ಹೋಗುತ್ತಿರುವೆನು. ಆದಾಗ್ಗೂ ನನ್ನ ಕಡೆ ಯಾರೂ ಒಂದು ರೊಟ್ಟಿಯ ತುಂಡನ್ನು ಕೂಡ ಬಿಸಾಕುವುದಿಲ್ಲ. ಜನರು ತಮಗೆ ಹೆಚ್ಚಾದುದನ್ನು ನಾಯಿಗೆ ಕೊಡುವರು, ಚರಂಡಿಯಲ್ಲಿ ಬಿಸಾಡುವರು, ಆದರೆ ನಮ್ಮನ್ನು ಕರೆದು ಕೊಡುವುದಿಲ್ಲ. ನಿಮಗೆ ಹೊಟ್ಟೆ ತುಂಬಿದೆ, ನಮ್ಮ ಹೊಟ್ಟೆಯಲ್ಲಿರುವ ಹಸಿವು ನಿಮಗೆ ಹೇಗೆ ತಿಳಿಯಬೇಕು? ಅಯ್ಯೊ! ದರಿದ್ರರಿಗೆ ಸಹಾನುಭೂತಿ ತೋರಿದರೆ ನಿಮ್ಮ ಗೌರವಕ್ಕೆ ಕುಂದು ಬರುವುದೇನು? ದರಿದ್ರರ ವ್ಯಥೆಯಿಂದ ವ್ಯಥಿತನಾಗುವುದು ಲಜ್ಜಾಸ್ಪದ ವೆಂಬುದರಲ್ಲಿ ಸಂದೇಹವಿಲ್ಲ. ಒಬ್ಬ ಕುರುಡನಿಗೂ ಒಂದು ಹಿಡಿ ಭಿಕ್ಷೆಯನು ನೀಡದವರಿಗೆ, ಯಾವನಾದರೊಬ್ಬ ರಾಜನಿಗೆ ಸಂಕಟವೆಂದರೆ ರಾತ್ರಿ ಅವರು ನಿದ್ದೆಮಾಡಲಾರರು.–ಎಲ್ಲರೂ ಪರರ ವ್ಯಥೆಯಲ್ಲಿ ವ್ಯಥಿತರಾಗುವುದು ಸಮ್ಮತವಾದ ವಿಚಾರ. ಆದರೆ ಸಾಮಾನ್ಯರ ದುಃಖದಲ್ಲಿ ದುಃಖಿಯಾಗುವುದೇ! ಛೀ! ಯಾರು ಆಗುವರು?

"ನೋಡು ಯಾವನಾದರೊಬ್ಬ ವೇದಾಂತ ಶಿರೋಮಣಿ, ಅಥವಾ ಮತ್ತೊಬ್ಬ ನ್ಯಾಯಾಲಂಕಾರನು ಬಂದು ನಿನ್ನ ಹಾಲನ್ನು ಕುಡಿದು ಹೋಗಿದ್ದರೆ ಆಗ ನೀನು ಕಟ್ಟಿಗೆ ತೆಗೆದುಕೊಂಡು ಅವನನ್ನು ಹೊಡೆಯುವುದಕ್ಕೆ ಹೋಗುತ್ತಿದ್ದೆಯೋ? ಅದಕ್ಕೆ ಬದಲಾಗಿ, ಕೈ ಜೋಡಿಸಿ - "ಏನು ಇನ್ನು ಸ್ವಲ್ಪ ತಂದು ಕೊಡಲೊ?" ಎಂದು ಕೇಳುತ್ತಿದ್ದೆ. ಮತ್ತೆ ನನ್ನನ್ನು ಹೊಡೆಯಲು ಕಟ್ಟಿಗೆ ಏಕೆ? ನೀನು ಹೇಳಬಹುದು - "ಅವರು ದೊಡ್ಡ ಪಂಡಿತರು, ಬಹು ಮಾನ್ಯರು" ಎಂದು. ಒಳ್ಳೆಯದು ಪಂಡಿತರು ಅಥವಾ ಮಾನ್ಯರಾದ ಮಾತ್ರಕ್ಕೆ ಅವರಿಗೆ ನಮಗಿಂತಲೂ ಹೆಚ್ಚು ಹಸಿವಾಗುವುದೊ? ಅದು

ನಿಜವಲ್ಲ. ಆವಶ್ಯಕತೆ ಇಲ್ಲದವರಿಗೆ ಕೊಡುವುದು ಮನುಷ್ಯ ಜಾತಿಯ ರೋಗ. ದರಿದ್ರನ ಹಸಿವನ್ನಾರೂ ತಿಳಿಯಲಾರರು. ಯಾರು ಬೇಡವೆಂದು ನಿರಾಕರಿಸುತ್ತಿರುವರೋ ಅಂತಹರಿಗೇ ಭೋಜನದ ಏರ್ಪಾಡನ್ನುಮಾಡಿ! ಯಾವನು ಹಸಿವನ್ನು ತಡೆಯಲಾರದೆ, ನೀವು ಕರೆಯದಿದ್ದರೂ ಬಂದು ಅನ್ನ ವನ್ನು ತಿಂದು ಹೋಗುವನೊ ಅಂತಹನನ್ನು ಕಳ್ಳನೆಂದು ಶಿಕ್ಷಿಸಿರಿ. - ಛಿ! ಛಿ! ನರಜನ್ಮವೆ!

"ನೋಡು, ನಮ್ಮ ಅವಸ್ಥೆಯನ್ನು ನೋಡು, ನಾವು ಮನೆಯಿಂದ ಮನೆಗೆ, ಗೋಡೆಯಿಂದ ಗೋಡೆಗೆ, ಅಂಗಳದಿಂದ ಅಂಗಳಕ್ಕೆ ಮ್ಯಾವ್ - ಮ್ಯಾವ್ ಎಂದು ತಿರುಗುತ್ತಿರುವೆವು. ಯಾರೂ ನಮಗೊಂದು ರೊಟ್ಟಿ ತುಂಡನ್ನು ಬಿಸಾಕುವುದಿಲ್ಲ. ಆದರೆ ಯಾವುದಾದರೂ ಬೆಕ್ಕು ನಿಮ್ಮ ಪ್ರೀತಿಗೆ ಪಾತ್ರವಾಗಿದ್ದರೆ - ಆ ಗೃಹ ಮಾರ್ಜಾಲವು - ಮುದುಕನ ಹೆಂಡತಿಯಾದ ಯುವತಿಯ ಅಣ್ಣನಂತೆ ಅಥವಾ ಮೂರ್ಖನಾದ ಧನಿಕನ ಹತ್ತಿರವಿರುವ ಚದರಂಗದ ಆಟಗಾರನಂತೆ - ಪುಷ್ಟಿಗೊಂಡಿರುವುದು. ಅದರ ಮೈತುಂಬ ಕೂದಲುಗಳು ತುಂಬಿರುವವು. ಅದರ ರೂಪವನ್ನು ನೋಡಿ ಅನೇಕರು ಮಾರ್ಜಾಲ ಕವಿಗಳಾಗಿಬಿಡುವರು.

"ಮತ್ತೆ ನಮ್ಮ ಅವಸ್ಥೆಯನ್ನು ನೋಡು, ಆಹಾರವಿಲ್ಲದೆ ಹೊಟ್ಟೆಯು ಬೆನ್ನಿಗೆ ಅಂಟಿದೆ, ಎಲಬುಗಳು - ಮುಂದೆ ಚಾಚಿಕೊಂಡಿವೆ. ನಾಲಿಗೆ ಹೊರಗೆ ಬರುತ್ತಿದೆ, ಬಾಲವು ಕೆಳಗೆ ಬೀಳುತ್ತಿದೆ. ಯಾವಾಗಲೂ ಹಸಿವಿನಿಂದ ಬಳಲುತ್ತ ಮ್ಯಾವ್ - ಮ್ಯಾವ್ ಎಂದು ಕೂಗುತ್ತಿರುವೆವು. ತಿನ್ನುವುದಕ್ಕೆ ಏನೂ ಸಿಕ್ಕಿಲ್ಲ. ನಮ್ಮ ಕಪ್ಪು ಚರ್ಮವನ್ನು ನೋಡಿ ತಿರಸ್ಕರಿಸಬೇಡಿ. ಈ ಜಗತ್ತಿನ ಮತ್ಸ್ಯಮಾಂಸಗಳಲ್ಲಿ ನಮಗೂ ಅಧಿಕಾರವಿದೆ. ತಿನ್ನುವುದಕ್ಕೆ ಅಧಿಕಾರವಿದೆ. ತಿನ್ನುವುದಕ್ಕೆ ಕೊಡಿ, ಇಲ್ಲದಿದ್ದರೆ ಕಳ್ಳತನ ಮಾಡುವೆವು. ನಮ್ಮ ಕರಿಚರ್ಮ, ಒಣಗಿದ ಬಾಯಿ, ಕ್ಷೀಣವೂ ಕರುಣಾಪೂರ್ಣವೂ ಆದ ನಮ್ಮ "ಮ್ಯಾವ್ - ಮ್ಯಾವ್", ಸ್ವರ - ಇವುಗಳಿಂದಲೂ ನಿಮಗೆ ದುಃಖ ವಾಗುವುದಿಲ್ಲವೆ? ದಯೆಬರುವುದಿಲ್ಲವೆ? ಕಳ್ಳರಿಗೆ ಶಿಕ್ಷೆ ಇದೆ, ನಿರ್ದಯ ತ್ವಕ್ಕೆ ಶಿಕ್ಷೆ ಇಲ್ಲವೊ? ದರಿದ್ರರ ಆಹಾರ ಸಂಗ್ರಹ ಕಾರ್ಯಕ್ಕೆ ಶಿಕ್ಷೆ ಇದೆ ಧನಿಕರ ಕಾರ್ಪಣ್ಯಕ್ಕೆ ಶಿಕ್ಷೆ ಇಲ್ಲವೊ? ಕಮಲಾಕಾಂತ, ನೀನು ದೂರದರ್ಶಿ,

ತಿಳಿವಳಿಕೆಯುಳ್ಳವನು, ಅಫೀಮು ಸೇವಕನು; ಧನಿಕರ ದೋಷದಿಂದಲೆ ದರಿದ್ರನು ಚೋರನಾಗುವನೆಂದು ನಿನಗೂ ತಿಳಿಸಬೇಕೊ? ಐನೂರು ಜನ ದರಿದ್ರರನ್ನು ವಂಚಿಸಿ, ಆ ಐನೂರು ಜನರ ಆಹಾರವನ್ನು ತನ್ನಲ್ಲಿ ಸಂಗ್ರಹಿಸಿಟ್ಟುಕೊಂಡಿರಲು ಯಾವನಿಗೆ ಅಧಿಕಾರವಿದೆ? ಒಂದು-ಸಂಗ್ರಹಿಸಿಟ್ಟುಕೊಂಡರೂ ಇಟ್ಟುಕೊಳ್ಳಲಿ, ಅದನ್ನು ದರಿದ್ರರಿಗೆ ಬೇಕಾದಾಗ ತಿನ್ನುವುದಕ್ಕೆ ಏಕೆ ಕೊಡಬಾರದು? ಕೊಡದಿದ್ದರೆ ದರಿದ್ರರು ಅವಶ್ಯಕವಾಗಿ ಅದನ್ನು ಕದಿಯಲೇಬೇಕಾಗುವುದು. ಏಕೆಂದರೆ ಹಸಿವಿನಿಂದ ಸಾಯುವುದಕ್ಕಾಗಿ ಯಾರೂ ಈ ಪೃಥ್ವಿಗೆ ಬಂದಿಲ್ಲ."

ನನಗೆ ಇನ್ನು ಸಹಿಸಲಾಗಲಿಲ್ಲ. ನಾನು ಹೇಳಿದೆ-"ನಿಲ್ಲು! ನಿಲ್ಲು! ಮಾರ್ಜಾಲ ಪಂಡಿತ! ನೀನು ಹೇಳುವುದೆಲ್ಲ ಬಹಳ ಸೋಷಿಯಲಿಸ್ಟಿಕ್ (Socialistic) ಆಗಿದೆ. ಅದರಿಂದ ಸಮಾಜವು ತಲೆಕೆಳಕಾಗಬಹುದು. ಅವರವರ ಶಕ್ತಿಗನುಸಾರವಾಗಿ ಅವರು ಧನಸಂಗ್ರಹಮಾಡಿ, ಚೋರರ ಹಾವಳಿಯಿಂದ ಅವರು ಸುಖವಾಗಿ ಅದನ್ನು ಭೋಗಿಸಲಾಗದೆ ಹೋಗಿದ್ದರೆ, ಧನ ಸಂಗ್ರಹದ ಪ್ರಯತ್ನವನ್ನೇ ಯಾರೂ ಮಾಡುತ್ತಿರಲಿಲ್ಲ. ಅದರಿಂದ ಸಮಾಜದ ಆರ್ಥಿಕ ಉನ್ನತಿಗೆ ಅಥವಾ ಧನವೃದ್ಧಿಗೆ ಕುಂದುಕವುಂಟಾಗುತ್ತಿತ್ತು."

ಬೆಕ್ಕು ಹೇಳಿತು—"ಧನವೃದ್ಧಿಯಾಗದಿದ್ದರೆ ನಮಗೇನು? ಸಮಾಜದ ಧನವೃದ್ಧಿ ಎಂದರೆ ಧನಿಕರ ಧನವೃದ್ಧಿ ಎಂದರ್ಥ. ಧನಿಕನಿಗೆ ಧನವೃದ್ಧಿಯಾಗದಿದ್ದರೆ ದರಿದ್ರನಿಗಾದ ನಷ್ಟವೇನು?"

ನಾನು ತಿಳಿವಳಿಕೆ ಹೇಳಿದೆ—"ಸಾಮಾಜಿಕ ಧನವೃದ್ಧಿಯಾಗದೆ ಸಮಾಜೋನ್ನತಿ ಆಗುವುದಿಲ್ಲ" ಎಂದು. ಬೆಕ್ಕು ಕೋಪದಿಂದ ಹೇಳಿತು. "ನನಗೆ ತಿನ್ನುವುದಕ್ಕೆ ಸಿಕ್ಕದಿದ್ದರೆ ನಿಮ್ಮ ಸಮಾಜದ ಉನ್ನತಿಯನ್ನು ಕಟ್ಟಿಕೊಂಡು ನಾನೇನುಮಾಡಲಿ!"

ಬೆಕ್ಕಿಗೆ ತಿಳಿಯ ಹೇಳುವುದು ಕಠಿಣವಾಯಿತು. ವಿಚಾರಕರೂ ನೈಯ್ಯಾಯಿಕರೂ ಆದವರಿಗೆ ಕೆಲವು ಸಮಯದಲ್ಲಿ ಯಾವುದೂ ಏನೂ ತಿಳಿಯುವುದಿಲ್ಲ. ಈ ಬೆಕ್ಕಾದರೋ ಸುವಿಚಾರಕವಾಗಿದೆ. ಆದರ ತರ್ಕವೂ

ವಿಶೇಷ ಪ್ರಬಲವಾಗಿದೆ. ಆದ್ದರಿಂದ ನನ್ನ ಮಾತನ್ನು ತಿಳಿದುಕೊಳ್ಳದಿರಲು ಅದಕ್ಕೆ ಅಧಿಕಾರವಿದೆ. ನಾನು ಸಮಾಧಾನದಿಂದ-"ಸಮಾಜದ ಉನ್ನತಿಯಿಂದ ದರಿದ್ರರಿಗೆ ಪ್ರಯೋಜನವಾಗದಿದ್ದರೂ, ಧನಿಕರಿಗಾದರೂ ವಿಶೇಷ ಪ್ರಯೋಜನವಾಗುವುದು. ಆದ್ದರಿಂದ ಚೋರರನ್ನು ಶಿಕ್ಷಿಸುವುದು ನ್ಯಾಯವಾಗುವುದು" ಎಂದು ಹೇಳಿದೆ.

ಆಗ ಬೆಕ್ಕು ಮತ್ತೆ ಹೇಳಿತು—"ನೀವು ಕಳ್ಳನಿಗೆ ಮರಣದಂಡನೆಯನ್ನು ವಿಧಿಸಿರಿ. ಅದರಿಂದಲೂ ನಮಗೆ ದುಃಖವಾಗುವುದಿಲ್ಲ. ಆದರೆ ಅದರೊಂದಿಗೆ ಇನ್ನೊಂದು ನಿಯಮವನ್ನು ಮಾಡಿಡಬೇಕು. ಕಳ್ಳನಿಗೆ ಶಿಕ್ಷೆಯನ್ನು ವಿಧಿಸುವ ನ್ಯಾಯಾಧೀಶನು, ಮೂರು ದಿನ ಮುಂಚೆಯೇ ಉಪಾಸ ಮಾಡಬೇಕು. ಆಗ ನ್ಯಾಯಾಧೀಶನು ಕಳ್ಳತನದಿಂದಲಾದರೂ ತಿಂಡಿತಿನ್ನಲು ಇಚ್ಛಿಸದಿದ್ದರೆ ಆಗ ಅವನು ಸಂತೋಷದಿಂದ ಕಳ್ಳನನ್ನು ಗಲ್ಲುಮರಕ್ಕೇರಿಸಲಿ! ನನ್ನನ್ನು ಹೊಡೆಯಲು ಕಟ್ಟಿಗೆ ತೆಗೆದುಕೊಂಡು ಬಂದ ನೀನು ಇವತ್ತಿನಿಂದ ಮೂರು ದಿನ ಉಪವಾಸಮಾಡು. ಆ ಮಧ್ಯೆ ನೀನು ನಸೀರಾಮು ಬಾಬುವಿನ ಅಡುಗೆ ಮನೆಯಲ್ಲಿ ಸಿಕ್ಕಿ ಬೀಳದಿದ್ದರೆ, ನನ್ನನ್ನು ಬೇಕಾದಷ್ಟು ಹೊಡಿ, ನಾನು ಉಸಿರೆತ್ತುವುದಿಲ್ಲ!

ವಿಚಾರದಲ್ಲಿ ಪರಾಸಕ್ತರಾದಾಗ ಗಂಭೀರಭಾವದಿಂದ ಉಪದೇಶ ಮಾಡಲೆತ್ನಿಸಬೇಕೆಂದು ಪ್ರಾಜ್ಞರಾದವರು ಹೇಳುವರು. ನಾನೂ ಆ ಪ್ರಥಾನುಸಾರವಾಗಿ ಹೇಳಲಾರಂಭಿಸಿದೆ-"ಬೆಕ್ಕೇ! ನೋಡು. ನಿನ್ನ ಈ ಮಾತುಗಳೆಲ್ಲ ನೀತಿ ವಿರುದ್ಧವಾಗಿದೆ. ಇವುಗಳನ್ನು ಚರ್ಚಿಸುವುದು ಕೂಡ ಪಾಪವು. ನೀನು ಈ ಕೆಟ್ಟ ಆಲೋಚನೆಗಳನ್ನೆಲ್ಲ ಬಿಟ್ಟು ಧರ್ಮಾಚರಣೆಯಲ್ಲಿ ಮನಸ್ಸಿಡು. ನಿನಗೆ ಬೇಕಾದರೆ ಓದುವುದಕ್ಕೆ "ನ್ಯೂಮನ್" "ಪಾರ್ಕರ್" ಮಹಾಶಯರ ಗ್ರಂಥಗಳನ್ನು ಕೊಡುತ್ತೇನೆ. ಮತ್ತೆ ಕಮಲಾಕಾಂತನ ದಫ್ತರವನ್ನು ಓದುವುದರಿಂದಲೂ ನಿನಗೆ ಕಿಂಚಿತ್ ಲಾಭವಾಗುವುದು. ಅದರಿಂದ ನಿನಗೆ ಮತ್ತೇನು ಗೊತ್ತಾಗದಿದ್ದರೂ ಅಫೀಮಿನ ಅಸೀಮ ಮಹಿಮೆಯು ಚೆನ್ನಾಗಿ ತಿಳಿಯುವುದು. ಈಗ ಸ್ವಸ್ಥಾನಕ್ಕೆ ಹೋಗು. ಪ್ರಸನ್ನಳು ನಾಳೆ "ಖೋವಾ" ತಂದುಕೊಡುವೆನೆಂದು ಹೇಳಿದ್ದಾಳೆ. ಮುಖ ತೊಳೆದುಕೊಳ್ಳುವ ಸಮಯಕ್ಕೆ ಸರಿಯಾಗಿ ಇಲ್ಲಿಗೆ ನೀನು ಬಾ, ಇಬ್ಬರೂ

ಅದನ್ನು ಹಂಚಿಕೊಂಡು ತಿನ್ನೋಣ. ಇಂದು ಇನ್ನಾರ ಪಾತ್ರೆಯನ್ನೂ ನೆಕ್ಕ ಬೇಡ. ಮತ್ತೆ ಬಹಳ ಹಸಿವಾದರೆ ಇಲ್ಲಿಗೆ ಬಂದುಬಿಡು. ನಾನು ಅಫೀಮಿನ ಒಂದೆರಡು ಗುಳಿಗೆಗಳನ್ನು ಕೊಡುವೆನು."

ಬೆಕ್ಕು ಹೇಳಿತು—"ಅಫೀಮಿನಿಂದ ನನಗೆ ಪ್ರಯೋಜನವಿಲ್ಲ. ಇನ್ನು ಬೇರೆಯರ ಪಾತ್ರೆಯನ್ನು ನೆಕ್ಕುವ ವಿಚಾರ. ಹಸಿವಾದಾಗ ತೋರಿದಂತೆ ಮಾಡುವೆನು - ಮ್ಯಾವ್ - ಮ್ಯಾವ್ - ಮ್ಯಾವ್."

ಬೆಕ್ಕು ಹೊರಟುಹೋಯಿತು. ಒಂದು ಪತಿತ ಆತ್ಮವನ್ನು ಅಂಧಕಾರದಿಂದ ಪ್ರಕಾಶಕ್ಕೆ ತಂದೆನೆಂದು ಭಾವಿಸಿ ಕಮಲಾಕಾಂತನಿಗೆ ವಿಶೇಷ ಆನಂದವಾಯಿತು.

ಇತಿ,

—ಶ್ರೀ ಕಮಲಾಕಾಂತ ಚಕ್ರವರ್ತಿ.

---

## ೧೪. ಒನಕೆ

ನಾನು ಏನು ಯೋಚನೆ ಮಾಡುತ್ತಿದ್ದೇನೆ?— ಈ ಪ್ರಪಂಚದಲ್ಲಿ ಒನಕೆ ಇಲ್ಲದೆ ಹೋಗಿದ್ದರೆ ಆಗ ನಾನು ಏನು ತಿನ್ನಬೇಕಾಗಿತ್ತು? ಪಕ್ಷಿಗಳಂತೆ ಒಂದು ಗಳದ ಮೇಲೆ ಕೂತುಕೊಂಡು, ಧಾನ್ಯವನ್ನು ತಿನ್ನುತ್ತಿದ್ದೆನೆ? ಅಥವಾ ಕಿವಿಗಳನ್ನೂ ಬಾಲವನ್ನೂ ಅಲ್ಲಾಡಿಸುತ್ತ, ಗಜೇಂದ್ರಗಾಮಿನಿಯಾದ ಗೋವಿನಂತೆ ಕಣಜದಲ್ಲಿ ಬಾಯಿ ಇಕ್ಕುತ್ತಿದ್ದೆನೆ? ನಿಜವಾಗಿ ನಾನು ಮಾಡುತ್ತಿರಲಿಲ್ಲ. ಹಾಗೆ ಮಾಡಿದ್ದರೆ ಯುವಕನೂ ಕೃಷ್ಣಕಾಯನೂ ವಸ್ತ್ರ ಶೂನ್ಯನೂ ಆದ ರೈತನು ಬಂದು, ಆಗ ನನ್ನ ಬೆನ್ನಿನ ಮೇಲೆ ದೊಣ್ಣೆ ಪ್ರಹಾರ ಮಾಡುತ್ತಿದ್ದನು. ನಾನು ಮೇಲುಸಿರುಬಿಡುತ್ತ ಬಾಲ ಕೊಂಬು ಗಳನ್ನಲ್ಲಾಡಿಸುತ್ತ ಓಡಿಹೋಗುತ್ತಿದ್ದೆನು. ಆರ್ಯಸಭ್ಯತೆಯ ಅನಂತ ಮಹಿಮೆಗಳ ಕಾರಣದಿಂದ ಆ ಭಯವಿಲ್ಲ. - ಒನಕೆ ಇದೆ - ಭತ್ತವನ್ನು ಕುಟ್ಟಿ ದರೆ ಅಕ್ಕಿಯಾಗುವುದು. ನಾನು ಈ ಪರೋಪಕಾರನಿರತವಾದ ಒನಕೆಯು, ಆರ್ಯ ಸಭ್ಯತೆಯ ಒಂದು ವಿಶೇಷ ಫಲವೆಂದು ಭಾವಿಸಿರುವೆನು. ಇದರ ಮುಂದೆ ಆರ್ಯಸಾಹಿತ್ಯ, ಆರ್ಯದರ್ಶನಗಳನ್ನು ನಾನು ಲಕ್ಷಿಸುವುದಿಲ್ಲ. ರಾಮಾಯಣ, ಕುಮಾರಾಸಂಭವ, ಪಾಣಿನಿ ವ್ಯಾಕರಣ ಮತ್ತು ಪತಂಜಲಿ ಭಾಷ್ಯಾದಿಗಳಲ್ಲಿ ಯಾವುದೂ ಭತ್ತದಿಂದ ಅಕ್ಕಿಯನ್ನು ಮಾಡುವುದಿಲ್ಲ. ಒನಕೆಯೇ ಆರ್ಯಸಭ್ಯತೆಯ ಮುಖವನ್ನು ಉಜ್ವಲಗೊಳಿಸುವ ಪುತ್ರನಾಗಿ ರುವುದು. ಅದೇ ಶ್ರಾದ್ಧಾಧಿಕಾರಿ. ನಿತ್ಯವೂ ಪಿಂಡದಾನವನ್ನು ಮಾಡುವುದು. ಏನು, ಎಲ್ಲಿ ಭತ್ತವನ್ನು ಕುಟ್ಟುವುದೋ ಅಲ್ಲಿ ಮಾತ್ರವೆ? ಸಮಾಜದಲ್ಲಿ' ಸಾಹಿತ್ಯದಲ್ಲಿ, ಧರ್ಮಸಂಸ್ಕಾರದಲ್ಲಿ, ರಾಜಸಭೆಯಲ್ಲಿ-ಮತ್ತೆ ಎಲ್ಲಿಯಾದರೂ ಒನಕೆಯು ಆರ್ಯಸಭ್ಯತೆಯ ಮುಖವನ್ನು ಉಜ್ವಲಗೊಳಿಸುವ ಪುತ್ರ - ಶ್ರಾದ್ಧಕ್ಕೆ ಅಧಿಕಾರಿ - ಆಗಿಲ್ಲವೆ? ಅದು ನಿತ್ಯವೂ ಪಿಂಡದಾನ ಮಾಡು ತ್ತಿಲ್ಲವೆ? - ಇಷ್ಟಾದರೂ ಆರ್ಯಸಭ್ಯತೆಗೆ ಇನ್ನೂ ಮುಕ್ತಿ ಲಾಭವಾಗದಿರು ವುದು ದುಃಖಾಸ್ಪದವಾದ ಸಂಗತಿಯಾಗಿದೆ. ಆದರೆ ಯಾವುದಾದರೊಂದು

ಒನಕೆಯು ಶೀಘ್ರದಲ್ಲಿಯೇ ಅದರ 'ಗಯಾ' ಶ್ರಾದ್ಧ ಮಾಡಬಹುದೆಂದು ಭರವಸೆ ಇದೆ.

ಒನಕೆಯ ಈ ಅಪರಮಿತ ಮಹಾತ್ಮೆಯ ಕಾರಣವನ್ನು ಕಂಡು ಹಿಡಿಯಲು ನಾನು ಬಹು ಉತ್ಸಾಹವುಳ್ಳವನಾಗಿದ್ದೇನೆ. ಇದು ಇಪ್ಪತ್ತನೆಯ ಶತಮಾನ; ವೈಜ್ಞಾನಿಕ ಸಮಯ. ಆದ್ದರಿಂದ ಕಾರಣದ ಅನುಸಂಧಾನವನ್ನು ಮಾಡಲೇಬೇಕು. ಒನಕೆಗೆ ಈ ಕಾರ್ಯದಕ್ಷತೆ ಎಲ್ಲಿಂದ ಬಂದೀತು? ಈ ಪರೋಪಕಾರದ ಬುದ್ಧಿ ಎಲ್ಲಿಂದ ಬಂದಿತು? ಈ Public spirit (ಸಾರ್ವಜನಿಕ ಸೇವೆಗಾಗಿ ಉತ್ಸಾಹ)! 'ನಾವಸ್ತುನಾ ವಸ್ತುಸಿದ್ಧಿಃ' ಎಂದು ನಮ್ಮ ಶಾಸ್ತ್ರವು ಸಾರುವುದು. ಅವಸ್ತುವಿನಿಂದ ವಸ್ತು ಸಿದ್ಧಿಯಾಗುವುದಿಲ್ಲ. ಕಾರಣವಿಲ್ಲದೆ ಈ ಗುಣಗಳು ಅದರಲ್ಲಿ ಹೇಗೆ ಹುಟ್ಟಿದವು? ಅನುಸಂಧಾನವಾಗಿ ನಾನು (ಕೊಟ್ನ ಕುಟ್ಟುವ) ಸ್ಥಳಕ್ಕೆ ಹೋದೆನು.

ಅಲ್ಲಿ ನೋಡಿದೆ, ಒನಕೆ ಹಳ್ಳದಲ್ಲಿ (ಒರಳಿನಲ್ಲಿ) ಬೀಳುತ್ತಿದೆ, ಅದು ಮಧ್ಯದ ಒಂದು ಹನಿಯನ್ನೂ ಕುಡಿದಿಲ್ಲ. ಆದರೂ ಮತ್ತೆ ಮತ್ತೆ ಹಳ್ಳದಲ್ಲಿ (ಒರಳಲ್ಲಿ) ಬೀಳುತ್ತದೆ, ಏಳುತ್ತದೆ, ವಿಶ್ರಾಂತಿಯೇ ಇಲ್ಲ. ಮತ್ತೆ ಮತ್ತೆ ಹಳ್ಳದಲ್ಲಿ ಬೀಳುವುದೇ ಇಷ್ಟು ಮಹಾತ್ಮೆಯ ಕಾರಣವಾಗಿರಬಹುದೆಂದು ಭಾವಿಸಿದೆನು. ಅದು ಹಳ್ಳದಲ್ಲಿ ಬೀಳುವುದರಿಂದಲೇ ಈ ಪರೋಪಕಾರ ಬುದ್ಧಿ ಬಂದುದು? ಅದರಿಂದಲೇ ಈ Public spirit (ಪಬ್ಲಿಕ್ ಸ್ಪಿರಿಟ್)! - ಇಲ್ಲ. ಎಂದಿಗೂ ಅದು ಕಾರಣವಾಗಲಾರದು. ಏಕೆಂದರೆ ನಮ್ಮಲ್ಲಿ ದೊಡ್ಡಮನುಷ್ಯರೊಬ್ಬರು ಎರಡು ಹೊತ್ತೂ ಮೋರಿಯಲ್ಲಿ ಬಿದ್ದಿರುವರು. ಅವರಲ್ಲಿ ಈ Public spirit ಲೇಶಮಾತ್ರವೂ ಇಲ್ಲವಲ್ಲ. ಸಾರಾಯಿ ಅಂಗಡಿಯ ಹೊರಗೆ ಅವರ ಪರೋಪಕಾರವನ್ನೇ ನಾನು ನೋಡಿಲ್ಲ. ಮತ್ತೆ ಸಂಗತಿಯನ್ನು ಮುಚ್ಚಿಟ್ಟು ಫಲವೇನು? ನಾನು - ಸ್ವಯಂ ಶ್ರೀ ಕಮಲಾಕಾಂತ ಚಕ್ರವರ್ತಿ - ಒಂದು ದಿನ ಹಳ್ಳದಲ್ಲಿ ಬಿದ್ದೆ. ದ್ರಾಕ್ಷಾರಸದ ವಿಕಾರ ವಿಶೇಷದಿಂದ ನನಗೆ ಆ ಗರ್ತಲೋಕ ಪ್ರಾಪ್ತಿಯಾಗಲಿಲ್ಲ. ಅದಕ್ಕೆ ಕಾರಣವು ಬೇರೆ ಆಗಿತ್ತು. ಗೋಪಾಂಗನೆಯೂ ಕುಲಕಲಂಕಿನಿಯೂ ಆದ ಗೌಳಗಿತ್ತಿ ಪ್ರಸನ್ನೆಯು ಒಂದು ದಿನ ತನ್ನ ಮಂಗಳಾ ಎಂಬ ಹಸುವನ್ನು ಬಿಚ್ಚಿಬಿಟ್ಟಳು. ಬಿಚ್ಚಿದ ಕೂಡಲೆ ಮಂಗಳೆಯು ಬಾಲ

ವನ್ನೆತ್ತಿಕೊಂಡು, ಕೊಂಬುಗಳನ್ನಾಡಿಸುತ್ತ ಓಡಲಾರಂಭಿಸಿತು. ಅದು ಏಕೆ ಓಡಲಾರಂಭಿಸಿತೆಂಬುದರ ಕಾರಣವು ನನಗೆ ತಿಳಿಯಲಿಲ್ಲ. ಸ್ತ್ರೀ ಜಾತಿ ಮತ್ತು ಗೋ ಜಾತಿಯ ಮನಸ್ಸನ್ನರಿಯಬಲ್ಲವರಾರು? ಆದರೆ ಎದುರಿಗಿದ್ದ ನಾನು ಅದರ ಕೊಂಬುಗಳೆರಡಕ್ಕೂ ಗುರಿಯಾಗಿದ್ದೆನೆಂದು ತಿಳಿದೆನು. ಆಗ ಪಂಚೆಯನ್ನು ಸೊಂಟದಲ್ಲಿ ಸರಿಯಾಗಿ ಬಿಗಿದು, ದರ್ಪದಿಂದ ಇನ್ನೊಂದು ಪಂಚೆಯನ್ನು ಸೊಂಟಕ್ಕೆ ಸುತ್ತಿ ಊರ್ಧ್ವಶ್ವಾಸದಿಂದ ಓಡಲಾರಂಭಿಸಿದೆ. ನನ್ನ ಹಿಂದೆಯೇ ಆ ಘಟಸ್ಥನಿಯಾದ ಭಯಾನಕ ರಾಕ್ಷಸಿಯೂ (ಗೋವೂ) ಓಡಿಬರುತ್ತಿದ್ದಳು. ನಾನು ವೇಗವಾಗಿ ಓಡಿದಷ್ಟೂ ಅದೂ ವೇಗವಾಗಿ ಓಡುತ್ತಿತ್ತು. ಅದರ ಪರಿಣಾಮವಾಗಿ ಏಳುತ್ತ ಬೀಳುತ್ತ ಓಡುತ್ತ, ಚಂದ್ರ ಸೂರ್ಯ ಗ್ರಹ ನಕ್ಷತ್ರಗಳಂತೆ ಸುತ್ತುತ್ತ ಕೊನೆಗೆ ನನಗೆ ಗರ್ತಲೋಕವು (ಹಳ್ಳವು) ಪ್ರಾಪ್ತಿಯಾಯಿತು!– ಕೆದರಿದ ಕೇಶಪಾಶ, ಮುಖದಲ್ಲಿ ಶ್ವಾಸ ವಿಲ್ಲದಂತಾಗಿದೆ-ಅಯ್ಯೋ, ಆಗ ನನ್ನ ಹೃದಯಾಕಾಶದಲ್ಲಿ Public spirit ರೂಪವಾದ ಪೂರ್ಣಚಂದ್ರನ ಉದಯವಾಗಲಿಲ್ಲವೇಕೆ? ಆಗಲಿಲ್ಲ ವೇಕೆ-ಆಯಿತು! ಆಗ ಈ ಪೃಥ್ವಿಯು ಗೋಶೂನ್ಯವಾಗಿ ತೆಂಗು, ತಾಳೆ ಖರ್ಜೂರ ಮೊದಲಾದ ವೃಕ್ಷಗಳಿಂದಲೇ ಹಾಲು ದೊರೆಯುವಂತಾದರೆ, ಆಗ ಈ ಹಾಲಿನಿಂದ ಪೋಷಿತವಾಗುವ ಭಾರತೀಯರಿಗೆ ವಿಶೇಷ ಉಪಕಾರ ವಾಗುವುದೆಂದು ನಾನು ಸಿದ್ಧಾಂತಮಾಡಿಕೊಂಡೆನು. ಆಗ ಇವರು ಕೊಂಬಿನ ಭಯವಿಲ್ಲದೆ ಹಾಲು ಕುಡಿಯಬಹುದು. ಆ ದಿನ ಆ ಹಳ್ಳದಲ್ಲಿ ಬಿದ್ದ ಕಾರಣದಿಂದ ನನ್ನ ಪರಹಿತ ಬುದ್ಧಿಯು ಪ್ರಬಲವಾಗಿ, ಇನ್ನೊಂದು ಸಮಯ ದಲ್ಲಿ, ನಾನು ಗೌಳಗಿತ್ತಿ ಶ್ಯಾಮೆಗೆ ಇಂತೆಂದೆನು-"ಆಯಿ, ದಧಿ-ಕ್ಷೀರ-ನವನೀತ ಪರಿವೇಷ್ಟಿತೇ! ಗೋಪಕನ್ಯೆ! ನೀನು ನಿನ್ನ ಎಮ್ಮೆ ಹಸುಗಳನ್ನು ಮಾರಿಬಿಡು. ಅದಕ್ಕೆ ಹಾಕುವ ಹುಲ್ಲು, ಹೊಟ್ಟು, ತೌಡು ಮೊದಲಾದ ಆಹಾರವನ್ನು ನೀನೇ ತಿಂದುಬಿಡು. ಆಗ ನೀನೂ ಘಟಸ್ತನಳಾಗಿ ಅನೇಕ ದುಗ್ಧಪೋಷ್ಯರನ್ನು ಪರಿಪಾಲಿಸಬಹುದು. ಆಗ ಯಾರೂ ಏಟು ತಿನ್ನ ಬೇಕಾಗುವುದಿಲ್ಲ."-ಇದಕ್ಕೆ ಪ್ರತ್ಯುತ್ತರವಾಗಿ ಪ್ರಸನ್ನಳು ಹಠಾತ್ತಾಗಿ ಪೊರಕೆ ಯನ್ನು ಕೈಯಲ್ಲಿ ಹಿಡಿದಳು! ಆ ದಿನವೆ ನಾನು ನನ್ನ ಪರಹಿತ ವ್ರತವನ್ನು ಪರಿತ್ಯಜಿಸಬೇಕಾಯಿತು.

ಆದ್ದರಿಂದ ಪರಹಿತೇಚ್ಛೆ, ದೇಶವಾತ್ಸಲ್ಯದ ಸಾಮಾನ್ಯ ಉತ್ಸಾಹ, ಅರ್ಥಾತ್ Public spirit, ವಿಶೇಷತಃ ಕಾರ್ಯದಕ್ಷತೆ ಇವುಗಳೆಲ್ಲ ಹಳ್ಳದಲ್ಲಿ ಬೀಳುವುದರಿಂದ ಬರುತ್ತವೆಯೊ ಇಲ್ಲವೊ ಎಂಬುದನ್ನು ನೀವೇ ಹೇಳಿರಿ. ಬರುವುದಿಲ್ಲವಾದರೆ ಒನಕೆಗೆ ಆ ಕಾರ್ಯದಕ್ಷತೆಯೂ ಮಹಾ ಬಲವೂ ಎಲ್ಲಿಂದ ಬಂದಿತು? ನಾನು ಈ ಕೂಟತರ್ಕದ ಮೀಮಾಂಸಕ್ಕಾಗಿ ಸಂದೇಹಚಿತ್ತನಾಗಿ ಚಿಂತಿಸುತ್ತಿದ್ದೆನು. ಆ ಸಮಯದಲ್ಲಿ ಮಧುರ ಕಂಠದಿಂದ "ಚಕ್ರವರ್ತಿ ಮಹಾಶಯ! ಬಾಯಿತೆರೆದು ಏನು ಯೋಚನೆ ಮಾಡುತ್ತಿದ್ದೀಯೆ? ಒನಕೆಯನ್ನು ಎಂದೂ ನೋಡಿಲ್ಲವೆ?" ಎಂದದ್ದು ಕೇಳಿಸಿತು.

ನಾನು ಕಣ್ಣೆತ್ತಿ ನೋಡಿದೆ. ತರಂಗಿಣಿ, ಮಾತಂಗಿನಿ ಎಂಬ ಭಗಿನಿಯರಿಬ್ಬರು ಒನಕೆ ಯಾತವನ್ನು ತುಳಿಯುತ್ತಿದ್ದಾರೆ. ಈವರೆಗೆ ಆಕಡೆ ನೋಡಿರಲಿಲ್ಲ. ಆನೆಯನ್ನು ನೋಡುವುದಕ್ಕೆ ಹೋದ ಒಬ್ಬ ಕುರುಡನು ಕೇವಲ ಅದರ ಸೊಂಡಿಲನ್ನು ನೋಡಿ ಬಂದನಂತೆ. ನಾನೂ ಒನಕೆ ನೋಡುವುದಕ್ಕೆ ಹೋಗಿ, ಒನಕೆಯ ಸೊಂಡಿಲನ್ನು ಮಾತ್ರ ನೋಡುತ್ತಿದ್ದೆನು. ಹಿಂದೆ ಇಬ್ಬರು ಮಹಿಳೆಯರ ಶ್ರೀ ಚರಣಗಳು ಒನಕೆಯ ಬೆನ್ನಿನ (ಯಾತದ) ಮೇಲೆ ಧಪಾ, ಧಪಾ ಎಂದು ಬೀಳುತ್ತಿದ್ದವು. ನಾನು ಒನಕೆಯನ್ನು ನೋಡಿದೆನೇ ಹೊರತು ಅದನ್ನು ನೋಡಿರಲಿಲ್ಲ. ನೋಡಿದ ಕೂಡಲೆ ಯಾರೊ ನನ್ನ ಕಣ್ಣ ಮುಂದಿದ್ದ ಪರದೆಯನ್ನು ತೆರೆದಂತಾಯಿತು!

ನನ್ನಲ್ಲಿ ದಿವ್ಯಜ್ಞಾನವು ಉದಯಿಸಿತು.— ಕಾರ್ಯಕಾರಣ ಸಂಬಂಧ ಪರಂಪರೆಯು, ನನ್ನ ಕಣ್ಣೆದುರಿನಲ್ಲಿ, ಪ್ರಖರವಾದ ಸೂರ್ಯ ಪ್ರಕಾಶದಲ್ಲಿ ಪ್ರಕಟವಾಯಿತು. ಇದೇ ಒನಕೆಯ ಬಲ, ಒನಕೆಯ ಮಹಾತ್ಮೆಯ ಮೂಲ ಕಾರಣ! ಹೇ ರಮಣೀ ಪಾದಪದ್ಮಗಳೆ! ಧಪಾಧಪೆಂದು ಆ ಪಾದಪದ್ಮಗಳು ಬೆನ್ನಿನ ಮೇಲೆ ತಾಡನಮಾಡುತ್ತಲಿವೆ, ಮತ್ತೆ ಒನಕೆಯು ಧಾನ್ಯವನ್ನು ಕುಟ್ಟಿ ಅಕ್ಕಿಮಾಡುತ್ತಿದೆ! ಏಳುತ್ತಿದೆ, ಬೀಳುತ್ತಿದೆ, ಥಕ್—ಥಕ್, ಕಚ್, ಕಚ್ ಎಂದು ಶಬ್ದ ಮಾಡುತ್ತಿದೆ! ಮತ್ತೆ ಪರೋಪಕಾರ ಮಾಡುತ್ತಿದೆ! ಅಯ್ಯೋ, ಒನಕೆ! ಆ ಕಾಲುಗಳಲ್ಲಿ ಅಷ್ಟು ಗುಣವಿದೆ! ಅವು ನಿನ್ನ ಬೆನ್ನಿನ ಮೇಲೆ ಬಿದ್ದು ನೀನು ಮೂವತ್ತುಮೂರು ಕೋಟಿ ಭಾರತೀಯರಿಗೆ ಅನ್ನವನ್ನು ಕೊಡುತ್ತಿರುವೆ - ಮತ್ತೆ ದೇವತೆಗಳ ಭೋಗವು ಬೇಕೆ! ಬನ್ನಿರಿ,

ಸುಂದರಿಯರ ಶ್ರೀ ಚರಣಗಳೆ! ನೀವು ಒನಕೆಯ (ಯಾತದ) ಬೆನ್ನಿನ ಮೇಲೆ ತಾಂಡವನೃತ್ಯಮಾಡಿರಿ! ನಾನು ಕೃತಜ್ಞತೆಯ ಪಾಶದಲ್ಲಿ ಬಂಧಿಸಿ ನಿಮ್ಮನ್ನು - ಅಯ್ಯೋ! ಏನುಮಾಡಲಿ? - ತಾಳಗಳಾಗಿ ಧರಿಸುವೆನು. ಇನ್ನು ಬಂಧುಗಳಾದ ಒನಕೆಗಳೆ! ನಿಮ್ಮ ವಿದ್ಯಾಬುದ್ಧಿಗಳ ವಿಚಾರವನ್ನರಿತೆನು. ಬೆನ್ನಿನ ಮೇಲೆ ರಮಣೀ ಪಾದಪದ್ಮವು ಉರ್ಫ್‌ಸ್ತ್ರೀಯರ ಕಾಲಿನ ಪೆಟ್ಟು ಬಿದ್ದಾಗ ನೀವು ಧಾನ್ಯವನ್ನು ಕುಟ್ಟುವಿರಿ. ಇಲ್ಲವಾದರೆ ನೀವು ಕೇವಲ ಕಟ್ಟಿಗೆಯಾಗಿರುವಿರಿ, ಜಡವಾಗಿರುವಿರಿ; ಹಳ್ಳದಲ್ಲಿ ಸೊಂಡಿಲನ್ನು (ಮುಖವನ್ನು) ಇಟ್ಟುಕೊಂಡು, ಬಾಲ (ಬೆನ್ನು) ಎತ್ತಿಕೊಂಡು ಕೊಟ್ಟಣದ ಮನೆಯಲ್ಲಿ ಬಿದ್ದಿರುವಿರಿ. ಕೇವಲ ಹಳ್ಳದಲ್ಲಿ (ಒರಳಲ್ಲಿ) ಬಿದ್ದಿರುವುದೇ ನಿಮ್ಮ ವಿದ್ಯೆ, ಬಾಯಿತುಂಬ ಧಾನ್ಯ ಸಿಕ್ಕುವುದೇ ನಿಮ್ಮ ಆನಂದ. ಕೇವಲ ಆ ರಂಗಿತ ಪಾದಪದ್ಮಗಳೆ ನಿಮಗೆ ಪುರಸ್ಕಾರವಾಗಿರುವುವು. ನಿಮ್ಮಲ್ಲಿ ಒಂದು ವಿಶೇಷ ಗುಣವಿದೆಯೆಂದು ಜನರು ಹೇಳುವರು. ಮನೆಯಲ್ಲಿಯೇ ಇದ್ದು ಮಧ್ಯೆ ಮಧ್ಯೆ ನೀವು ಮೊಸಳೆಗಳಾಗುವಿರೇನು? ಬಂಧುಗಳಾದ ಒನಕೆಗಳೆ, ಇನ್ನೊಂದು ಮಾತು ಕೇಳುತ್ತೇನೆ. ಮಧ್ಯೆ ಮಧ್ಯೆ ನೀವು ಸ್ವರ್ಗವನ್ನೂ ಪ್ರವೇಶಿಸುವಿರೆಂದು ಕೇಳಿದ್ದೇನೆ. ಅಲ್ಲಿ ಹೋದಾಗಲೂ ಭತ್ತವನ್ನು ಕುಟ್ಟಬೇಕಾಗುವುದೇನು? ದೇವತೆಗಳೆಲ್ಲ ಅಮೃತವನ್ನು ಕುಡಿಯುವರು. ಪಾರಿಜಾತ ಲೋಕದಲ್ಲಿ ಅಪ್ಸರೆಯರೊಂದಿಗೆ ಕ್ರೀಡಿಸುವರು, ಮೋಡಗಳನ್ನಡರಿ, ಮಿಂಚಿನ ಬೆಳಕಿನಲ್ಲಿ ರತಿ ಮತ್ತು ಕಾಮದೇವನೊಂದಿಗೆ ಕಣ್ಣುಮುಚ್ಚಾಲೆ ಆಟವಾಡುವರು. ಆವರೆಗೆ ನೀವು 'ಘಚರ್ - ಘಚರ್' ಎಂದು ಧಾನ್ಯವನ್ನು ಕುಟ್ಟುತ್ತಿರುವಿರಾ? ಬಂಧುಗಳೆ, ನಿಮ್ಮ ಸಾಹಸವು ಧನ್ಯ - ಧನ್ಯವಾದುದು.

ಒನಕೆಗಳು ಆವ ಉತ್ತರವನ್ನೂ ಕೊಡಲಿಲ್ಲ, ಕೇವಲ ಭತ್ತವನ್ನು ಕುಟ್ಟುತ್ತಿದ್ದವು ನಾನು ಕೋಪದಿಂದ ಅಲ್ಲಿಂದ ಹೋದೆನು.- ನೆಟ್ಟಗೆ 'ಕಮಲಾಶ್ರಮಕ್ಕೆ.' ಕಮಲಾಶ್ರಮ ಯಾವುದು ನಿಮಗೆ ಗೊತ್ತಿಲ್ಲವೆ? - ನಸೀರಾಮ ಬಾಬುವು ಈಗ ಭತ್ತವನ್ನು ಕುಟ್ಟುವುದಕ್ಕೆ ಹೋಗಿದ್ದಾನೆ. ಒಂದು ಹರಕಲು ಮುರುಕಲು ಚೋಟುದ್ದ ಮನೆಯನ್ನು ಬಿಟ್ಟು ಈಗ ಸ್ವರ್ಗಕೆ ಹೋಗಿದ್ದಾನೆ, ಉತ್ತರಾಧಿಕಾರಿಗಳಾಗಿ ಅವನ ವಿಯೋಗ ವ್ಯಥೆಯನ್ನು ಸಹಿಸಲು ಈಗ ಯಾರೂ ಈ ಲೋಕದಲ್ಲಿ ಉಳಿದಿಲ್ಲ. ಆ ಗುಡಿಸಲನ್ನು

ಯಾರೂ ಆಶಿಸಿಲ್ಲ, ಅದು ಅಂಥಾ ಸ್ಥಿತಿಯಲ್ಲಿದೆ. ಅದನ್ನೆ ನಾನು ಕಮಲಾಶ್ರಮವಾಗಿ ಮಾರ್ಪಡಿಸಿಕೊಂಡೆನು. ಕೇವಲ ಕಮಲಾಕಾಂತನ ಆಶ್ರಮವಲ್ಲ, - ಸಾಕ್ಷಾತ್ ಕಮಲದ ಆಶ್ರಮ. ನಾನು ಅಲ್ಲಿಯೆ ಒಂದು ವಿಶಾಲವಾದ ಕಾಲುಮಣೆಯ ಮೇಲೆ ಬಿದ್ದುಕೊಂಡು ಅಫೀಮಿನ ಮಾತ್ರೆಯನ್ನು ಏರಿಸಿದೆನು. ಆಗ ಕಣ್ಣುಗಳು ಮುಚ್ಚಿದವು, - ಜ್ಞಾನ ನೇತ್ರವು ತೆರೆಯಿತು - ಆಗ ನೋಡಿದೆ. - ಈ ಪ್ರಪಂಚವೆಲ್ಲ ಒಂದು ಕೊಟ್ಟಣದ ಮನೆಯಾಗಿದೆ. ದೊಡ್ಡ ದೊಡ್ಡ ಕಟ್ಟಡಗಳು, ಬೈಠಕಖಾನೆಗಳು, ಅರಮನೆಗಳು - ಎಲ್ಲವೂ ಕೊಟ್ಟಣದ ಮನೆಗಳಾಗಿವೆ. ಅವುಗಳಲ್ಲಿ ದೊಡ್ಡ ದೊಡ್ಡ ಒನಕೆಗಳು ಒರಳಲ್ಲಿ ಮುಖಗಳನ್ನಿಟ್ಟುಕೊಂಡು, ಕೆಲವು ನಿಂತಿವೆ, ಕೆಲವು ಬಿದ್ದಿವೆ, ಕೆಲವೆಡೆಗಳಲ್ಲಿ ಜಮೀನುದಾರ ರೂಪದಿಂದಿರುವ ಒನಕೆಗಳು ರೈತರ ಹೃತ್ಪಿಂಡವನ್ನು ಒರಳಲ್ಲಿ ಕುಟ್ಟಿ, ಅದರಿಂದ ಹೊಸದಾಗಿ ಗೊತ್ತಾದ ರೂಪದಲ್ಲಿ ಅಕ್ಕಿಯನ್ನು ತೆಗೆದು ಸುಖವಾಗಿ ಬೇಯಿಸಿ ಅನ್ನವನ್ನು ತಿನ್ನುತ್ತಿವೆ. ಕೆಲವೆಡೆಗಳಲ್ಲಿ ಕಾನೂನುಕಾರರು ಒನಕೆಗಳ ರೂಪವನ್ನು ತಾಳಿ ಮಿನಿಟು-ರಿಪೋರ್ಟುಗಳ ರಾಶಿಯನ್ನು ಒರಳಲ್ಲಿ ಕುಟ್ಟಿ, ಅದರಿಂದ ಹೊಸ ಹೊಸ ಕಾನೂನು - ಕಾಯಿದೆಗಳನ್ನು ತೆಗೆಯುತ್ತಾರೆ. ವಿಚಾರಕ ರೂಪದಿಂದಿರುವ ಒನಕೆಗಳು ಆ ಕಾನೂನು - ಕಾಯಿದೆಗಳನ್ನು ಒರಳಲ್ಲಿ ಕುಟ್ಟಿ, ದಾರಿದ್ರ್ಯ, ಕಾರಾವಾಸ – ಧನಿಕನ ಧನಾಂತ್ಯ, ಸಾಧುಗಳ ದೇಹಾಂತಗಳನ್ನು ಮಾಡುತ್ತಿದ್ದಾರೆ. ಬಾಬು ರೂಪದ ಒನಕೆಗಳು ಬಾಟಲಿ - ರೂಪದ ಒರಳುಗಳಿಂದ ಪಿತೃಧನವನ್ನು ಪಾನಮಾಡಿ, ಪ್ಲೀಹ (ಸ್ಪ್ಲೀನ್), ಯಕೃತ್ (ಲಿವರ್)ಗಳನ್ನು ಉಂಟುಮಾಡಿಕೊಳ್ಳುತ್ತಿರುವರು. ಅವರ ಗೃಹಿಣಿಯರೆಂಬ ಒನಕೆಗಳು ಏಕಾದಶಿ ಮೊದಲಾದ ವ್ರತಗಳ ನೆಪದಿಂದ ಅಂಗಡಿ ಸಾಮಾನುಗಳನ್ನು ಕುಟ್ಟಿ–ಅನಾಹಾರ ಮಾಡುತ್ತಿರುವರು ! ಎಲ್ಲಕ್ಕಿಂತಲೂ ಭಯಾನಕವಾದುದೆಂದರೆ - ಲೇಖಕರೆಂಬ ಒನಕೆಗಳು ಸಾಕ್ಷಾತ್ ತಾಯಿಯಾದ ಸರಸ್ವತಿಯ ಶಿರಸ್ಸನ್ನು ಮುದ್ರಣಾಲಯದ ಒರಳಲ್ಲಿ ಹಾಕಿ ಹೊರತೆಗೆಯುತ್ತಿರುವರು– ಸ್ಕೂಲ್ ಬುಕ್ಸ್‌ಗಳನ್ನು !!

ನೋಡುತ್ತ ನೋಡುತ್ತ ನಾನೂ ಒಂದು ಒನಕೆಯಾಗಿರುವೆನೆಂದು ತೋರಿತು. ಕಮಲಾಶ್ರಮದಲ್ಲಿ ಕಾಲುಚಾಚಿ ಮಲಗಿಕೊಂಡಿದ್ದೇನೆ.

ನಿಷಾ ಎಂಬ ಒರಳಲ್ಲಿ ಮನಸ್ಸಿನ ದುಃಖವೆಂಬ ಧಾನ್ಯವನ್ನು ಹಾಕಿ, ಕುಟ್ಟಿ "ದಫ್ತರ"ವೆಂಬ ಅಕ್ಕಿಯನ್ನು ತೆಗೆಯುತ್ತಿದ್ದೇನೆ. ಆಗ ಮನಸ್ಸಿನಲ್ಲಿ ಅಹಂಕಾರವು ಹುಟ್ಟಿತು, ಇಂಥಾ ಅಕ್ಕಿಯನ್ನು ಯಾವ ಒನಕೆಯೂ ಮಾಡುವುದಿಲ್ಲವೆಂದು. ಆಗ ಆಸೆಯಾಯಿತು - ಈ ಅಕ್ಕಿಯು ಮನುಷ್ಯ ಲೋಕದಲ್ಲಿ ಉಪಯುಕ್ತವಾಗಿಲ್ಲ, ನಾನು ಸ್ವರ್ಗಲೋಕಕ್ಕೆ ಹೋಗಿ ಧ್ಯಾನವನ್ನು ಕುಟ್ಟಬೇಕು ಎಂದು. ಮನೋರಥವನ್ನೇರಿ ಕೂಡಲೆ ಸ್ವರ್ಗಕ್ಕೆ ಹೋದೆ. ಸ್ವರ್ಗದಲ್ಲಿ ದೇವರಾಜನಿಗೆ ವಂದಿಸಿ "ಹೇ ದೇವೇಂದ್ರ! ನಾನು – ಶ್ರೀ ಕಮಲಾಕಾಂತ ಚಕ್ರವರ್ತಿ ಎಂಬ ಒನಕೆ, ಸ್ವರ್ಗದಲ್ಲಿ ಭತ್ತವನ್ನು ಕುಟ್ಟಬೇಕು" ಎಂದು ಹೇಳಿದೆ.

ದೇವೇಂದ್ರ – "ಅಡ್ಡಿಯೇನು? ಅದಕ್ಕೆ ಪುರಸ್ಕಾರವೇನುಬೇಕು?"

ನಾನು – "ಊರ್ವಶಿ, ಮೇನಕಾ, ರಂಭಾ"

ದೇವರಾಜ – "ಊರ್ವಶಿ, ಮೇನಕೆಯರನ್ನು ಹೊಂದಲಾರೆ. ನೀನು ಹೇಳಿದ ಮೂರನೆಯ ಹೆಸರಿನದು ಮರ್ತ್ಯಲೋಕದಲ್ಲಿ ಆಣೆಗೆ ಎಂಟೆಂಟರಂತೆ ಸಿಕ್ಕುವುದು."

ನಾನು ಮುಖ ಗಂಟಿಕ್ಕಿ ಹೇಳಿದೆ – "ಏನು ದೇವ! ಅಷ್ಟು ರಂಭೆಯರೆ? ಈಗ ಮನುಷ್ಯರಿಗೆ ಅವು ಲಭಿಸವು. ಈ ಕಾಲದಲ್ಲಿ ಅವುಗಳು ದೇವತೆಗಳ ಕೆಲಸಕ್ಕೆ ಉಪಯೋಗವಾಗುತ್ತಿವೆ."

ಇಂದ್ರನು ಸಂತುಷ್ಟನಾಗಿ ನನಗೆ ಒಂದು ಸೇರು ಅಮೃತವನ್ನೂ ಒಂದು ಘಂಟೆ ಊರ್ವಶಿಯ ಸಂಗೀತವನ್ನೂ ಪಾರಿತೋಷಕವಾಗಿ ಕೊಟ್ಟನು. ಅಷ್ಟರಲ್ಲಿ ಎಚ್ಚೆತ್ತು ನೋಡಿದರೆ, ಪಕ್ಕದಲ್ಲಿ ಮಡಕೆಯಲ್ಲಿ ಒಂದು ಸೇರು ಹಾಲನ್ನಿಟ್ಟುಕೊಂಡು ಪ್ರಸನ್ನ ಗೌಳಗಿತ್ತಿಯು ಅರಚುತ್ತಿದ್ದಾಳೆ - "ನಿಷಾಖೋರ, ನಿರ್ಲಜ್ಜ, ತಿಂಡಿಪೋತ" ಇತ್ಯಾದಿ ಇತ್ಯಾದಿ. ನಾನು ಆ ಊರ್ವಶಿಗೆ ಹೇಳಿದೆ. "ಒಂದು ಘಂಟೆ ಕಾಲ ಆಗಿಹೋಯಿತು, ಇನ್ನು ನಿಲ್ಲಿಸು" ಎಂದು.

ಇತಿ,

– ಶ್ರೀ ಕಮಲಾಕಾಂತ ಚಕ್ರವರ್ತಿ.

# ಕಮಲಾಕಾಂತನ ಪತ್ರಗಳು

## ಪ್ರಥಮ ಸಂಖ್ಯೆ

## ೧. ಏನು ಬರೆಯಲಿ?

ಪೂಜ್ಯಪಾದ

ಶ್ರೀಯುಕ್ತ ವಂಗದರ್ಶನ– ಸಂಪಾದಕ ಮಹಾಶಯರ

ಶ್ರೀ ಚರಣಕಮಲಗಳಲ್ಲಿ.

ನನ್ನ ಹೆಸರು ಶ್ರೀ ಕಮಲಾಕಾಂತ ಚಕ್ರವರ್ತಿ. ನನ್ನ ಮುಂಚಿನ ವಾಸಸ್ಥಳ ಶ್ರೀ ಶ್ರೀ ನಸೀಧಾಮ (ನಸೀರಾಮ ಬಾಬು ಮನೆ). ತಮಗೆ ನಾನು ನಮಸ್ಕಾರ ಮಾಡುತ್ತಿದ್ದೇನೆ. ತಮ್ಮೊಂದಿಗೆ ನನ್ನ ನಿಕಟ ಪರಿಚಯ, ಅಥವಾ ಸಮಕ್ಷಮ ಭೇಟಿ ಸಂಬಂಧಗಳಿಲ್ಲ. ಆದರೆ ತಮ್ಮ ಸಹಜ ಗುಣ ಗಳಿಂದಲೆ ನನ್ನ ವಿಶೇಷ ಪರಿಚಯವನ್ನು ಪಡೆದಿದ್ದೀರಿ ಎಂಬುದನ್ನು ನಾನು ಕಂಡುಕೊಂಡಿದ್ದೇನೆ. ಭೀಷ್ಮದೇವ ಖೋಷನವೀಶನು ಅಪ್ರಮಾಣಿಕ ಮನುಷ್ಯನೆಂದು ಮೊದಲೇ ನಾನು ತಿಳಿದುಕೊಂಡಿದ್ದೆನು. ನನ್ನ ದಪ್ತರದ ಗಂಟನ್ನು ಆತನ ಹತ್ತಿರ ಇಟ್ಟು ತೀರ್ಥಯಾತ್ರೆ ಮಾಡಿಕೊಂಡುಬರಲು ಹೊರಟುಹೋದೆನು. ಅದೇ ಸಮಯವೆಂದು ತಿಳಿದು, ಆತನು ಆ ದಪ್ತರ ವನ್ನು ತಮಗೆ ಮಾರಿಬಿಟ್ಟನು. ವಿಕ್ರಯದ ಮಾತನ್ನು ತಾವು ಸ್ವೀಕರಿಸ ದಿರಬಹುದು. ಆದರೆ ನನಗೆ ಗೊತ್ತು, ಭೀಷ್ಮದೇವ ಠಾಕೂರನು ಬೆಲೆ ಇಲ್ಲದೆ ಸಾಲಿಗ್ರಾಮದ ಮೇಲೆ ಒಂದು ತುಳಸಿ ದಳವನ್ನು ಕೂಡ ಇಡು ವುದಿಲ್ಲ. ಹೀಗಿರುವಾಗ ಬೆಲೆಯಿಲ್ಲದೆ ಶ್ರೀ ಕಮಲಾಕಾಂತ ಪ್ರಣೀತ ದಪ್ತರವನ್ನು ಆತನು ನಿಮಗೆ ಕೊಟ್ಟಿರುವ ಸಂಭವವಿಲ್ಲ. ಈ ಮೋಸ ಕೃತ್ಯದ ವಿಚಾರವು ನನಗೆ ಮೊದಲು ತಿಳಿಯಲಿಲ್ಲ. ದೈವವಶಾತ್ ಒಂದು ದಿನ ಒಂದು ಜತೆ ಜೋಡನ್ನು ಕೊಂಡು ಕೊಂಡಾಗ ಈ ವಿಷಯವು ನನಗೆ ತಿಳಿಯಿತು. ಪಾದರಕ್ಷೆಯ ಜತೆಯನ್ನು ಒಂದು ವರ್ತಮಾನ ಪತ್ರಿಕೆಯ ತುಂಡಿನಲ್ಲಿ ಕಟ್ಟಲಾಗಿತ್ತು. ಅದನ್ನು ನೋಡಿ ಯೋಚಿಸಲಾರಂಭಿಸಿದೆ,–

"ಶ್ರೀಮತ್ ಕಮಲಾಕಾಂತ ಶರ್ಮನ ಚರಣ ಯುಗಲಗಳು ಧರಿಸತಕ್ಕ ಪಾದುಕೆಗಳನ್ನು ಅಲಂಕರಿಸುವಷ್ಟು ಸೌಭಾಗ್ಯವು ಯಾರಲ್ಲಿ ಉದಯವಾಗಿದೆ! ಅವನು ಲೇಖನಿಯನ್ನು ಹಿಡಿದುದು ಸಾರ್ಥಕವಾಯಿತು ಎಂದು ಮನಸ್ಸಿನಲ್ಲಿಯೆ ಭಾವಿಸಿದೆ! ಅವನು ರಾತ್ರಿ ತೈಲವನ್ನುರಿಸಿದ್ದು ಸಾರ್ಥಕ! ಯಾರೊ ಮೂರ್ಖರು ಓದುವುದಕ್ಕಾಗಿ ಹೋಗದೆ ಅವನ ಲೇಖನವು ಸಾಧುಗಳ ಚರಣಗಳೊಂದಿಗೆ ಸಂಬಂಧವನ್ನು ಬೆಳೆಸಿದೆ- ಲೇಖಕನ ಈ ರಚನೆಯು ವಿಶೇಷತಃ ಲೇಖಕನಿಗೆ ಗೌರವದಾಯಕವಾದುದು." ಹೀಗೆ ಭಾವಿಸಿ, ಕುತೂಹಲದಿಂದ ನಾನು ಈ ಪತ್ರಿಕೆ ಯಾವುದೆಂದು ನೋಡಲಾರಂಭಿಸಿದೆ. ಓದಿದೆ, ಮೇಲೆ "ವಂಗದರ್ಶನ" ಎಂದು ಇತ್ತು. ಒಳಗೆ 'ಕಮಲಾಕಾಂತನ ದಪ್ತರ' ಎಂದು ಇತ್ತು. ಆಗ ಇದು ನನ್ನ ಪೂರ್ವ ಜನ್ಮಾರ್ಜಿತ ಸುಕೃತದ ಫಲವೆಂದು ನಾನು ತಿಳಿದೆ!

ಮತ್ತೊಂದು ವಿಷಯ ತಿಳಿಯಲು ಕುತೂಹಲವುಂಟಾಯಿತು. 'ವಂಗದರ್ಶನ'ವೆಂಬುದು ಎಂತಹ ವಸ್ತು ಎಂಬುದನ್ನು ತಿಳಿಯುವ ಇಚ್ಛೆಯಾಯಿತು. ಆಗ ಒಬ್ಬ ಸ್ನೇಹಿತನನ್ನು ಕೇಳಿದೆ-"ವಂಗದರ್ಶನ ಎಂದರೇನು?" ಹೇಳಬಲ್ಲೆಯಾ?–ಅವನು ಸ್ವಲ್ಪ ಹೊತ್ತು ಯೋಚಿಸಿ– "ಬಂಗಾಳ ಪ್ರಾಂತ್ಯವನ್ನು ನೋಡುವುದೇ ವಂಗದರ್ಶನ ಎಂದು ಕಾಣುವುದು" ಎಂದು ಉತ್ತರಕೊಟ್ಟನು. ನಾನು ಅವನ ಪಾಂಡಿತ್ಯವನ್ನು ವಿಶೇಷವಾಗಿ ಹೊಗಳಿದೆನು. ಮತ್ತೆ ನಿರುಪಾಯನಾಗಿ ಬೇರೊಬ್ಬ ಗೆಳೆಯನಿಗೆ ಇದೇ ಪ್ರಶ್ನೆ ಹಾಕಿದೆ. ಅವನು ಹೀಗೆ ಹೇಳಿದ-"ಇಲ್ಲಿ 'ಶ'ಕಾರದ ಮೇಲೆ ಇರುವ ರೇಫವು ಮುದ್ರಣ ದೋಷವೆಂದು ಕಾಣುವುದು. ಈ ಪದ 'ವಂಗದಶನ' ಎಂದರೆ "ಬಂಗಾಳದ ಹಲ್ಲು" ಎಂದಿರಬೇಕು."–ಅವನಿಗೆ ಒಂದು ಪಾಠಶಾಲೆಯನ್ನು ತೆರೆಯಲು ಸಲಹೆಕೊಟ್ಟು, ಮತ್ತೊಬ್ಬ ಸುಶಿಕ್ಷಿತ ವ್ಯಕ್ತಿಯನ್ನು ಪ್ರಶ್ನಿಸಿದೆನು. ಅವನು ಹೀಗೆಂದ–"ವಂಗ ಎಂದರೆ ಪೂರ್ವ ಬಂಗಾಳ–ಅದನ್ನು ನೋಡುವುದು ವಂಗದರ್ಶನ ಎಂದರೆ ಇಂಗ್ಲೀಷಿನಲ್ಲಿ A guide to Eastern Bengal ಎಂದಾಗುವುದು." ಹೀಗೆ ಬಹು ಬಗೆಯ ಅನುಸಂಧಾನವನ್ನುಮಾಡಿ, ಕೊನೆಗೆ 'ವಂಗದರ್ಶನ' ಎಂಬುದು ಒಂದು ಮಾಸಪತ್ರಿಕೆ, ಅದರಲ್ಲಿ ಕಮಲಾಕಾಂತ ಶರ್ಮನ ಮಾಸಿಕ ಶ್ರಾದ್ಧವಾಗುತ್ತಿದೆ,

ಎಂದು ತಿಳಿದುಕೊಂಡೆನು. ಈಗ ಯಾವನೊ ಧನುರ್ಧರನು ನನ್ನ ದಪ್ತರ ವನ್ನು ತನ್ನ ರಚನೆ ಎಂದು ಪ್ರಚಾರಮಾಡಿಕೊಳ್ಳುತ್ತಿದ್ದಾನೆ ಎಂದು ಕೇಳಿದೆನು. ಇನ್ನೂ ಏನೇನಾಗುವುದೊ !

ಅತಏವ ಹೇ ವಂಗದರ್ಶನ ಸಂಪಾದಕ ಮಹಾಶಯ ! ನಾನು - ಕಮಲಾಕಾಂತ ಶರ್ಮ ಈ ಜಗತ್ತಿನಲ್ಲಿ ಇನ್ನೂ ಸಜೀವನಾಗಿದ್ದೇನೆ, ಮತ್ತೆ ತಮ್ಮಂಥವರಿಗೆ ತೊಂದರೆಯಾದರೂ ಇನ್ನೂ ಕೆಲವುದಿನ ಜೀವಿಸಿರಬೇಕೆಂಬ ಇಚ್ಛೆಯಿದೆ ನನಗೆ ಎಂದು ನಿಮಗೆ ತಿಳಿದಿರಬೇಕು.

ಈ ಸಮಯದಲ್ಲಿ ನಾನು ಈ ಪತ್ರವನ್ನೇಕೆ ಬರೆಯುತ್ತಿರುವೆನೆಂದು ತಾವು ತಿಳಿಯಬೇಕು. ಮೇಲೆ ನನ್ನ ನಿವಾಸ "ಶ್ರೀ ಶ್ರೀ ನಸೀಧಾಮ" ಎಂದು ಬರೆದಿದ್ದೇನೆ. ಆ ನಸೀ ಬಾಬುವು ಈಗ ಶ್ರೀ ಶ್ರೀ ಈಶ್ವರನಲ್ಲಿ ಲೀನವಾಗಿರುವರು. ಅವರ ಸತ್ಕರ್ಮಗಳಿಂದ ಅವರು ಸರ್ವಾಶ್ರಯನಾದ ಶ್ರೀಪಾದಪದ್ಮ ಸಾನ್ನಿಧ್ಯ ಸೇರಿರುವರೆಂಬ ಭರವಸೆ ನನಗಿದೆ. ಆದರೆ ನಿಜವಾಗಿ ಕೊನೆಗೆ ಅವರ ಗತಿ ಏನಾಯಿತೆಂಬ ವಿಚಾರ ನನಗೆ ಸ್ವಲ್ಪವೂ ತಿಳಿಯದು. ಅವರು ಈಗ ಇಹಲೋಕದಲ್ಲಿ ಇಲ್ಲವೆಂದು ಮಾತ್ರ ನನಗೆ ಗೊತ್ತು. ಆದ್ದರಿಂದ ನನಗೂ ಈಗ ಆಶ್ರಯವಿಲ್ಲ. ಈಗ ಅಫೀಮಿನ ವಿಚಾರ ದಲ್ಲಿ ಸ್ವಲ್ಪ ಗಡಿಬಿಡಿ, ಗಲಾಟೆಯಾಗಿದೆ. ತಾವು ಅದರ ವಿಚಾರದಲ್ಲಿ ಏನಾದರೂ ಸರಿಯಾದ ಏರ್ಪಾಟು ಮಾಡಬಲ್ಲಿರಾ ? ನನ್ನ ದಪ್ತರ ಲೇಖನ ಗಳಿಗಾಗಿ ನೀವು ಘೋಷನವೀಶ ಬಾಬುವಿಗೆ ಎಷ್ಟು ಹಣ ಕೊಟ್ಟಿರುವಿರೊ ನನಗೆ ತಿಳಿಯದು. ಆದರೆ ನನಗೆ ಒಂದು ಮಣ ಅಫೀಮನ್ನು ಕಳುಹಿಸ ಬೇಕು. - (ನಾನು ಅಫೀಮು ಹೆಚ್ಚಾಗಿ ಸೇವಿಸುವವನು) - ನಾನು ಪ್ರತಿ ತಿಂಗಳೂ ನಿಮ್ಮ ಮಾಸಪತ್ರಿಕೆಗೆ ಲೇಖನವನ್ನು ಬರೆದು ಕಳಿಸುವೆನು. ನಿಮಗೆ ಶುಭವಾಗಲಿ! ಈ ವಿಚಾರದಲ್ಲಿ ನೀವು ಹಿಂದು - ಮುಂದಾಲೋಚಿಸ ಕೂಡದು. ಅನುಮಾನಪಟ್ಟುಕೊಳ್ಳಕೂಡದು. ಆದರೆ ನಿಮ್ಮೊಂದಿಗೆ ನನ್ನ ಈ ಪ್ರಬಂಧ ಸಂಬಂಧವನ್ನು ಪಕ್ಕಾ ಬಂದೋಬಸ್ತು ಮಾಡಿಕೊಳ್ಳುವ ಮುಂಚೆ ನಾನು ಕೆಲವು ವಿಷಯಗಳನ್ನು ತಿಳಿದುಕೊಳ್ಳಲಪೇಕ್ಷಿಸುವೆನು. ಈ ಕಮಲಾಕಾಂತನ ಲೇಖನಿಯು ನಿಮ್ಮ ಇಚ್ಛಾನುಸಾರವಾಗಿ ಎಲ್ಲ ಬಗೆಯ, ರೀತಿಯ ಲೇಖನಗಳನ್ನು ಬರೆಯಬಲ್ಲದು. - ನಿಮಗೆ ಯಾವ ವಿಷಯಬೇಕು?

ನಾಟಕ-ನಾವೆಲ್ಲುಗಳು ಬೇಕೆ? ಪಾಲಿಟಿಕ್ಸ್‌ನ ಅಗತ್ಯವಿದೆಯೆ? ಯಾವುದಾದರೂ ಐತಿಹಾಸಿಕ ಸಂಶೋಧನೆಯ ವಿಚಾರ ಕಳುಹಲೆ? ಅಥವಾ ಸಂಕ್ಷಿಪ್ತ ಸಮಾಲೋಚನೆಗಳನ್ನು ಬರೆಯಲೆ? ವಿಜ್ಞಾನ ಶಾಸ್ತ್ರವಿಚಾರದಲ್ಲಿ ಆಸಕ್ತಿ ಇದೆಯೆ ಅಥವಾ ಭೌಗೋಲಿಕ ತತ್ವರಸದಲ್ಲಿ ನಿಮಗೆ ಅಭಿರುಚಿ ಇದೆಯೆ? ನಿಮಗೆ ಲೇಖನಗಳು ಗುರು ವಿಷಯದ್ದಾಗಿರಬೇಕೊ ಲಘು ವಿಷಯದ್ದಾಗಿರಬೇಕೊ ಎಂಬುದನ್ನು ತಿಳಿಯಲು ಕೇಳುತ್ತಿರುವೆನು. ನನ್ನ ಲೇಖನದ ಬೆಲೆಯನ್ನು ನೀವು ಗಜದ ಕಟ್ಟಿಗೆಯಿಂದ ಅಳೆದುಕೊಡುವಿರೊ, ಮನಸ್ಸಿನಲ್ಲಿಯೆ ತೂಗಿ ಕೊಡುವಿರೊ? ನಿಮಗೆ ಗುರು ವಿಷಯದಲ್ಲೆ ಅಭಿರುಚಿ ಇದ್ದರೆ, ಅದರಲ್ಲಿ ಯಾವ ಬಗೆಯ ಅಲಂಕಾರ-ಅಥವಾ ಚಮತ್ಕಾರವಿರಬೇಕೆಂಬುದನ್ನು ತಿಳಿಸಬೇಕು. ನಿಮಗೆ 'ಕೊಟೇಷನ್'ಗಳಲ್ಲಿ ಹೆಚ್ಚು ಪ್ರೀತಿಯೊ ಅಥವಾ 'ಫುಟ್ ನೋಟ್ಸ್'ಗಳಲ್ಲಿ ಅನುರಾಗವಿರುವುದೊ? ಅಥವಾ 'ಫುಟ್ ನೋಟ್'ಗಳ ಅವಶ್ಯಕತೆ ಹೆಚ್ಚಾಗಿದ್ದರೆ ಅವನ್ನು ಯಾವ ಭಾಷೆಯಲ್ಲಿ ಉದ್ಧೃತಗೊಳಿಸಬೇಕು? ಯೂರೋಪ್ ಮತ್ತು ಏಷ್ಯಾ ಖಂಡಗಳಲ್ಲಿ ಎಲ್ಲ ಭಾಷೆಗಳ ಕೊಟೇಶನ್‌ಗಳನ್ನು ನಾನು ಸಂಗ್ರಹಿಸಿಟ್ಟಿರುವೆನು. ಆಫ್ರಿಕಾ ಮತ್ತು ಅಮೆರಿಕಾ ಖಂಡಗಳ ಕೆಲವು ಭಾಷೆಗಳ ಹೆಸರು ನನಗೆ ಇನ್ನೂ ದೊರಕಿಲ್ಲ. ಆದರೆ ನಾನು ಶೀಘ್ರವಾಗಿ ಆ ಭಾಷೆಗಳ ಕೊಟೇಶನ್‌ಗಳನ್ನು ಸಂಗ್ರಹಿಸುವೆನಾದ್ದರಿಂದ ನೀವು ಚಿಂತಿಸಕೂಡದು.

ಗುರು ವಿಷಯದ ಲೇಖನಗಳೆ ನಿಮಗೆ ಹೆಚ್ಚು ಸಂತೋಷವನ್ನುಂಟುಮಾಡುವುದಾದರೆ, ನೀವು ಯಾವ ಬಗೆಯ ಗುರು ವಿಷಯಗಳನ್ನು ಅಪೇಕ್ಷಿಸುತ್ತೀರಿ? ತಿಳಿಸಿ. ಈ ವಿಚಾರದಲ್ಲಿ ನಾನು ಸ್ವಯಂ ಆಗಿ ಏನಾದರೂ ಮಾಡಲಿ, ಮಾಡದಿರಲಿ, ನನಗೆ ಒಬ್ಬ ದೊಡ್ಡ ಸಹಾಯಕನು ಸಿಕ್ಕಿದ್ದಾನೆ. ಭೀಷ್ಮದೇವ ಖೋಷನವೀಶರ ಪುತ್ರ, 'ಯುಟಿಲಿಟಿ' ಪದಕ್ಕೆ ಆಶ್ಚರ್ಯಕರವಾದ ವ್ಯಾಖ್ಯಾನ ಮಾಡಿದವನು.* ನೀವು ಅವನನ್ನು ಮರೆತಿರಲಾರಿರಿ. ಈಗ ಅವನು ವಿದ್ಯಾವಂತನಾಗಿರುವನು. ಎಂ. ಎ. ಪಾಸುಮಾಡಿ, ವಿದ್ಯೆಯ ಪಾಶವನ್ನು ಕಂಠಕ್ಕೆ ಹಾಕಿಕೊಂಡಿರುವನು. ಗುರು ವಿಷಯಗಳಲ್ಲಿ ಅವನು

---

* ಯು-ಟಿಲ್-ಈಟ್-ಐ=ಯುಟಿಲಿಟಿ.

ಪೂರ್ಣಪಾರಂಗತ. ನಿಮಗೆ ಶಾಲೆಯ ಪಠ್ಯಪುಸ್ತಕಗಳು ಬೇಕೆ? ಅವನು ವರ್ಣಪರಿಚಯ ಮೊದಲ್ಗೊಂಡು ರೋಮ್ ದೇಶದ ಇತಿಹಾಸದವರೆಗೆ ಬೇಕಾದ ವಿಷಯಗಳನ್ನು ಬರೆಯುಬಲ್ಲನು. ನ್ಯಾಚುರಲ್ ಹಿಸ್ಟರಿಯನ್ನು ಅವನು ಮುಗಿಸಿದ್ದಾನೆ. ಹಳೆಯ 'ಪೆನೀ ಮ್ಯಾಗಜೀನ್'ಗಳಿಂದ ಅವನು ಅನೇಕ ಲೇಖನಗಳನ್ನು ಭಾಷಾಂತರಿಸಿಟ್ಟುಕೊಂಡಿದ್ದಾನೆ. ಮತ್ತೆ ಗೋಲ್ಡ್ ಸ್ಮಿಥ್‌ನು ಬರೆದಿರುವ 'ಎನಿಮೇಟೆಡ್ ನೇಚರ್'ನ ಸಾರಾಂಶವನ್ನು ಸಂಗ್ರಹಿಸಿಟ್ಟಿರುವನು. ಇವುಗಳೆಲ್ಲ ಬೇಕೇನು? ಎಲ್ಲಕ್ಕೂ ಹೆಚ್ಚು ಗುರುತರ ವಿಷಯಗಳು ಅಂಕಗಣಿತ ಮತ್ತು ಜ್ಯಾಮಿತಿಗಳು. ಅವುಗಳಲ್ಲಿಯೂ ಅವನ ಪಾಂಡಿತ್ಯ ಕಡಿಮೆಯಾಗಿಲ್ಲ. ಜ್ಯಾಮಿತಿ ಮತ್ತು ತ್ರಿಕೋಣಗಳು ಹಾಳಾಗಲಿ, ಚತುಷ್ಕೋಣಮಿತಿಯಲ್ಲಿಯೂ ಅವನು ಅಧಿಕಾರಪೂರ್ಣನು. ದೈವ ವಿದ್ಯಾಬಲದಿಂದ ಅವನು ತನ್ನ ತಂದೆ ಕಟ್ಟಿಸಿದ ಚತುಷ್ಕೋಣದ ಸರೋವರವನ್ನೂ ಅಳೆದನು. ಆ ಕಾರ್ಯಕ್ಕಾಗಿ ಜನರು ಅವನನ್ನು ಹೊಗಳಿ, 'ಧನ್ಯ, ಧನ್ಯ!' ಎಂದು ಧನ್ಯವಾದವನ್ನಿತ್ತರು. ಅವನ ಐತಿಹಾಸಿಕ ಕೀರ್ತಿಯನ್ನು ಎಷ್ಟು ಹೇಳಲಿ? ಅವನು ಚಿತ್ತೋರಿನ ರಾಜಾ ಆಲ್‌ಫ್ರೆಡ್ ದಿ ಗ್ರೇಟನ ಒಂದು ಜೀವನ ಚರಿತ್ರೆಯನ್ನು ಹತ್ತು ಹಾಳೆಗಳಲ್ಲಿ ಬರೆದಿಟ್ಟಿರುವನು, ಮತ್ತು ಬಂಗಾಳಿ ಸಾಹಿತ್ಯ ಸಮಾಲೋಚನೆ ವಿಷಯದ ಒಂದು ಗ್ರಂಥವನ್ನು ಮಹಾಭಾರತದಿಂದ ಸಂಗ್ರಹಿಸಿಟ್ಟಿರುವನು. ಅದರಲ್ಲಿ 'ಕಾಮ್ಟ್' ಮತ್ತು ಹರ್ಬರ್ಟ್ ಸ್ಪೆನ್ಸರರ ಮತವನ್ನು ಖಂಡಿಸಿರುವನು! ಮತ್ತು ಪೃಥ್ವಿಯು ಮಧ್ಯಾಕರ್ಷಣ ಬಲದಿಂದ ನಿಂತಿದೆ ಎಂಬ ಡಾರ್ವಿನ್ ಸಾಹೇಬನ ವಾದಕ್ಕೆ ಪ್ರತಿವಾದವನ್ನೂ ಅವನು ಅದರಲ್ಲಿ ಬರೆದಿದ್ದಾನೆ! ಆ ಗ್ರಂಥದಲ್ಲಿ ಮಾಲತೀ ಮಾಧವ ನಾಟಕದಿಂದಲೂ ೪-೫ ಶ್ಲೋಕಗಳನ್ನು ಉದ್ಧೃತಗೊಳಿಸಲಾಗಿದೆ. ಈ ಕಾರಣಗಳಿಂದ ಅದು ದೊಡ್ಡ ಬಹು ಭಾರಿ ರಕಮುಗಳ ಗುರು ವಿಷಯಕ ಗ್ರಂಥವಾಗಿಬಿಟ್ಟದೆ. ಸಮಾಲೋಚನೆಯ ಕಾಲದಲ್ಲಿ ನೀವು ಇದನ್ನು ಭಾರತ ಭಾಷೆಯಲ್ಲಿ ಅದ್ವಿತೀಯ ಗ್ರಂಥವಿದು ಎಂದು ಹೊಗಳುವಿರಿ ಎಂಬ ಭರವಸೆ ಇದೆ.

ಗುರು ವಿಷಯವನ್ನು ಬಿಟ್ಟು ಲಘು ವಿಷಯದಲ್ಲಿ ನಿಮಗೆ ಅಭಿರುಚಿ ಇಲ್ಲವೆಂದು ನಂಬುತ್ತೇನೆ. ಏಕೆಂದರೆ ಲಘು ವಿಷಯಗಳನ್ನು ಸಿದ್ಧಗೊಳಿಸು

ವುದರಲ್ಲಿ ಕೆಲವು ತೊಂದರೆಗಳಿವೆ. ಘೋಷನವೀಶ ಪುತ್ರನು ಒಂದು ನಾಟಕ ಸಾಮಗ್ರಿ ತಯಾರಿಸಿದ್ದಾನೆ. ಅದರ ನಾಯಕೆಯ ಹೆಸರು ಚಂದ್ರಕಲಾ, ಅಥವಾ ಶಶಿರಂಭಾ ಎಂದಿಡಬೇಕೆಂದು ನಿಶ್ಚಯಿಸಿದ್ದಾನೆ. ಅವಳ ತಂದೆ ವಿಜಯಪುರದ ರಾಜ ಭೀಮಸಿಂಹ. ನಾಯಕ ಮತ್ತೊಬ್ಬ ಸಿಂಹ ಇನ್ನೊಂದು ಅಂಕದಲ್ಲಿ ಶಶಿರಂಭೆಯು ನಾಯಕನ ಎದೆಯಲ್ಲಿ ಚೂರಿಯನಿರಿದು, ತಾನು "ಹಾಯ್, ಹತೋಸ್ಮಿ" ಎಂದು ಕೂಗಿ ಬಿದ್ದು ಸಾಯಬೇಕು ಎಂದು ನಿಶ್ಚಯಿಸಿದ್ದಾನೆ. ಆದರೆ ನಾಟಕದ ಆದ್ಯ ಮತ್ತು ಮಧ್ಯಭಾಗ ಹೇಗಿರಬೇಕು, ಮತ್ತೆ ಬೇರೆ "ನಾಟಕೋಲ್ಲಿಖಿತ ವ್ಯಕ್ತಿಗಣ"ಗಳನ್ನು ಯಾವ ರೂಪದಲ್ಲಿ ತರಬೇಕು ಎಂಬುದನ್ನು ಇನ್ನೂ ನಿಶ್ಚಯಿಸಿಲ್ಲ. ಕೊನೆಯ ಅಂಕದಲ್ಲಿ ಚೂರಿಯನ್ನು ಇರಿಯುವ ಸೀನ್‌ನಲ್ಲಿ ಸ್ವಲ್ಪಭಾಗ ಬರೆದಿದ್ದಾನೆ. ನಾನು ಶಪಥಪೂರ್ವಕವಾಗಿ ಹೇಳುತ್ತೇನೆ-ಅವನು ೨೦ ಪಂಕ್ತಿಗಳನ್ನು ಬರೆದು ಮುಗಿಸಿದ್ದಾನೆ. ಅದರಲ್ಲಿ ಎಂಟು ಕಡೆ "ಹಾ, ಸಖಿ!" ಮತ್ತೆ ಹದಿಮೂರು ಕಡೆ "ಹಲೊ! ಏನಾಯಿತು!" ಎಂಬ ಮಾತುಗಳನ್ನು ಸೇರಿಸಿದ್ದಾನೆ. ಕೊನೆಗೆ ಒಂದು ಗೀತೆಯನ್ನೂ ಕೊಟ್ಟಿದ್ದಾನೆ-ನಾಯಿಕೆಯು-ಚೂರಿಯನ್ನು ಕೈಯಲ್ಲಿ ಹಿಡಿದು, ಹಾಡುತ್ತಾಳೆ. ಆದರೆ ನಾಟಕದ ಉಳಿದ ಭಾಗಗಳನ್ನು ಇನ್ನೂ ಬರೆಯಲಾಗಿಲ್ಲ ಎಂದು ವ್ಯಸನವಾಗುತ್ತದೆ.

ನಿಮಗೆ ನಾವೆಲ್ಲುಗಳು ಬೇಕಾಗಿದ್ದರೆ, ನಾವು ಎಂದರೆ ಘೋಷನವೀಶ ಕಂಪೆನಿಯವರು ಅದಕ್ಕೂ ಹಿಂಜರಿಯುವುದಿಲ್ಲ. ನಾವು ಉತ್ತಮವಾದ ನಾವೆಲ್ಲುಗಳನ್ನು ಬರೆಯಬಲ್ಲೆವು. ಕೆಲಸಕ್ಕೆ ಬಾರದ ನಾವೆಲ್ಲುಗಳನ್ನು ಬರೆಯದೆ, "ಡಾನ್ ಕ್ವಿಕ್ಸಾಟ್" ಅಥವಾ 'ಜಿಲ್ಲಬಾ'ದ ಪರಿಶಿಷ್ಟ ಭಾಗವನ್ನು ಬರೆಯಬೇಕೆಂದು ಇಚ್ಛೆ ಇತ್ತು. ಆದರೆ ದೌರ್ಭಾಗ್ಯದಿಂದ ನಮ್ಮಿಬ್ಬರಲ್ಲಾರೂ ಆ ಪುಸ್ತಕಗಳನ್ನು ಇದುವರೆಗೆ ಓದಿಲ್ಲ, ಈಗ ಮೆಕಾಲೆ ಸಾಹೇಬನ ಎಸ್ಸೆಯ (ಪ್ರಬಂಧದ) ಪರಿಶಿಷ್ಟಭಾಗವನ್ನು ಬರೆದು ಕಳಿಸಿದರೆ ನಿಮ್ಮ ಕೆಲಸ ಸಾಗುವುದಿಲ್ಲವೆ? ಅದು ಕೂಡ ನಾವೆಲ್!

ಕಾವ್ಯವು ಬೇಕಾಗಿದ್ದರೆ ಅದು ಮಿತಾಕ್ಷರಿಯಲ್ಲಿರಬೇಕೊ ಅಮಿತಾಕ್ಷರಿಯಲ್ಲೊ? ಮಿತಾಕ್ಷರದಲ್ಲಿ ಸದ್ಯಕ್ಕೆ ಅದು ನಮ್ಮಲ್ಲಿಲ್ಲ. ಬೇರೆ ಕಡೆ ದೊರೆಯುವಂತೆಯೂ ಇಲ್ಲ. ಅಮಿತಾಕ್ಷರ ಕವಿತೆಗಳನ್ನು ನಿಮಗೆ ಬೇಕಾ

ದಷ್ಟು ಕಳಿಸಬಹುದು. ಪ್ರಕೃತ ಖೋಷನವೀಶಸುತನು ಜೀಮೂತ ನಾದವಧ ಎಂಬ ಒಂದು ಕಾವ್ಯದ ಪ್ರಥಮ ಖಂಡವನ್ನು ಬರಿದಿಟ್ಟಿದ್ದಾನೆ. ಇದು ಮೇಘನಾದವಧೆಗೆ ಸಮಾನವಾಗಿದೆ - ಕೇವಲ ನಾಲ್ಕು ಹೆಸರುಗಳು ಮಾತ್ರ ಬದಲಾಗಿವೆ. ಇದು ಬೇಕೆ ?

ಇನ್ನು ಲಘು ಗುರು ವಿಷಯಗಳನ್ನು ಬಿಟ್ಟು, ಖೋಷನವೀಶ ರಚನೆ ಗಳೂ ಬೇಡವಾಗಿ, ನಿಮಗೆ ಕೇವಲ ಕಮಲಾಕಾಂತನ ಶೈಲಿಯೆ ರುಚಿಸುವು ದಾದರೆ ತಿಳಿಸಿ. ನಾನು ಬರೆದಿರುವ ಕೆಲವು ಹಳೆಯ ಕೆಲವು ರದ್ದಿ ಲೇಖನ ಗಳಿವೆ. ಅವುಗಳನ್ನು ಕಳಿಸುತ್ತೇನೆ. ಅದಕ್ಕೆ ಪ್ರತಿಯಾಗಿ ಒಂದು ಮಣ ಅಫೀಮನ್ನು ತೆಗೆದುಕೊಳ್ಳುವೆನು. - ಅದರಲ್ಲಿ ಎಳ್ಳಷ್ಟು ಬಿಡುವುದಿಲ್ಲ !

ಅದಕ್ಕೆ ನಿಮ್ಮ ರಾಜಿ ಇದೆಯೆ ? ನಿಮಗೆ ರಾಜಿ ಇರಲಿ, ಇಲ್ಲದಿರಲಿ' ನಾನಂತೂ ರಾಜಿಯಾಗಿದ್ದೇನೆ.

ಇತಿ,

— ಶ್ರೀ ಕಮಲಾಕಾಂತ ಚಕ್ರವರ್ತಿ.

---

# ೨. ಪಾಲಿಟಿಕ್ಸ್

"ಶ್ರೀ ಚರಣೇಷು: - ಅಫೀಮು ಬಂದು ಸೇರಿತು. ಬೇಕಾದಷ್ಟು ಅಫೀಮು ಕಳಿಸಿದ್ದೀರಿ - ಶ್ರೀ ಚರಣ ಕಮಲಗಳಲ್ಲಿ - ತಮ್ಮ ಶ್ರೀ ಚರಣ ಕಮಲಯುಗಲಗಳಲ್ಲಿ ವಿನಂತಿ. - ಇನ್ನೂ ಸ್ವಲ್ಪ ಹೆಚ್ಚು ಅಫೀಮು ಕಳಿಸಿ.

ಆದರೆ ಶ್ರೀ ಚರಣಕಮಲ ಯುಗಲಗಳಿಂದ ಕಮಲಾಕಾಂತನಿಗೆ ಇಂಥಾ ಕಠಿಣವಾದ ಆಜ್ಞೆಯನ್ನು ಏಕೆ ವಿಧಿಸಲಾಯಿತೊ ತಿಳಿಯದಾಗಿದೆ. "ಈಗ ಕೋರ್ಟುಗಳ ಭಯದಿಂದ ಜನರು ಪಾಲಿಟಿಕ್ಸ್ ಮೇಲೆ ಬರೆಯುವುದು ಕಡಿಮೆಯಾಗಿದೆ, ನೀವು ಪಾಲಿಟಿಕ್ಸ್ ಮೇಲೆ ಏನಾದರೂ ಝೂಡಿಸಿ ಬರೆದರೆ ಒಳ್ಳೆಯದು" ಎಂದು ಬರೆದಿದ್ದೀರಿ. ಏಕೆ ಮಹಾಶಯ? ಪಾಲಿಟಿಕ್ಸ್ ರೂಪದ ಕಲ್ಲಿನಿಂದ ನನ್ನ ತಲೆಗೆ ಹೊಡೆಯಲು ನಾನು ಮಾಡಿದ ತಪ್ಪಾದರೂ ಏನು? ಕಮಲಾಕಾಂತನು ಕ್ಷುದ್ರ ಜೀವಿ ಬ್ರಾಹ್ಮಣ. ಪಾಲಿಟಿಕ್ಸ್ ಬರೆಯಲು ಅವನಿಗೇಕೆ ಅಪ್ಪಣೆ ಮಾಡಿದಿರಿ? ಕಮಲಾಕಾಂತನು ಸ್ವಾರ್ಥಪರನಲ್ಲ. ಅಫೀಮನ್ನುಬಿಟ್ಟು ನನಗೆ ಬೇರೆ ಯಾವ ಸ್ವಾರ್ಥವೂ ಇಲ್ಲ. ನನ್ನ ಮೇಲೆ ಪಾಲಿಟಿಕ್ಸ್‌ನ ಹೊರೆ ಏಕೆ ಹೇರಿದಿರಿ? ನಾನು ರಾಜನೆ, ವಿಲಾಸ ಜೀವಿಯೆ, ಜೂಜುಗಾರನೆ, ಭಿಕ್ಷುಕನೆ, ಪತ್ರಸಂಪಾದಕನೆ, - ನೀನು ಪಾಲಿಟಿಕ್ಸ್ ಬರೆದು ಕಳಿಸು, ಎಂದು ಹೇಳುವುದಕ್ಕೆ? ನೀವು ನನ್ನ ದಪ್ತರವನ್ನು ಓದಿದ್ದೀರಿ. ಅದರಲ್ಲಿ ಎಲ್ಲಿಯಾದರೂ ನನ್ನ ಸ್ಥೂಲಬುದ್ಧಿಯ ಚಿಹ್ನೆಯನ್ನು ಕಂಡು ನನಗೆ ಪಾಲಿಟಿಕ್ಸ್ ಬರಿ ಅಂತ ಹೇಳಿದಿರೇನು? ಅಫೀಮಿಗಾಗಿ ನಾನು ನಿಮ್ಮ ಮನಸ್ಸನ್ನು ಉಲ್ಲಾಸಗೊಳಿಸಿದ್ದೇನೆ. ಆದರೆ ಅಫೀಮಿಗಾಗಿ ಪಾಲಿಟಿಕ್ಸ್ ಬರೆಯುವಷ್ಟು ಸ್ವಾರ್ಥಪರ ಚಾಟುಕಾರ ಲೇಖಕನಾಗಿಲ್ಲ ಇನ್ನೂ ನಾನು. ನಿಮ್ಮ ಸಂಪಾದಕತೆಗೆ ಧಿಕ್ಕಾರವಿರಲಿ! ನಿಮ್ಮ ಅಫೀಮಿಗೆ ಧಿಕ್ಕಾರ! ಕಮಲಾಕಾಂತ ಶರ್ಮನು ಉಚ್ಚಶ್ರೇಣಿಯ ಕವಿ, ಕಮಲಾಕಾಂತ ಕ್ಷುದ್ರ ಜೀವಿ ಪಾಲಿಟಿಶಿಯನ್ ಅಲ್ಲ ಎಂದು ನಿಮಗಿನ್ನೂ ತಿಳಿದಿಲ್ಲ!

ನಿಮ್ಮ ಈ ಆದೇಶ ಪತ್ರದಿಂದ ಮನಸ್ಸಿನಲ್ಲಿ ಬಹಳ ಉದಾಸೀನತೆ ಯುಂಟಾಗಿ, ನಾನು ಒಂದು ಉರುಳಿ ಬಿದ್ದಿದ್ದ ಮರದ ಮೇಲೆ ಕುಳಿತು, ವಂಗದರ್ಶನ ಸಂಪಾದಕರ ಈ ಬುದ್ಧಿ ವೈಪರೀತ್ಯವನ್ನು ಕುರಿತು ಆಲೋಚಿ ಸುತ್ತಿದ್ದೆನು. ಏನು ಮಾಡಲಿ. ಕೂತಹಾಗೆಯೆ ಒಂದು ಪಾವಿನಷ್ಟು ಅಫೀಮಿನ ಉಂಡೆಯು ಹೇಗೊ ಗಂಟಲಿನಿಂದ ಒಳಕ್ಕೆ ಇಳಿದು ಹೋಯಿತು. ಎದುರಿಗೆ ಗಾಣಿಗ ಕಲ್ಲಪ್ಪನ ಮನೆ. ಮನೆಯ ಅಂಗಳದಲ್ಲಿ ಎರಡು ಮೂರು ಎತ್ತುಗಳನ್ನು ಕಟ್ಟಿದ್ದಾರೆ. ಅವುಗಳ ಮುಂದೆ ಮಣ್ಣಿನಲ್ಲಿ ಹೂಳಿದ್ದ ಮಣ್ಣಿನ ಬಾನೆಯಲ್ಲಿ ಕಲ್ಲಪ್ಪ ಪತ್ನಿಯು ಹಾಕಿದ್ದ ಕಲಗಚ್ಚಿನಲ್ಲಿದ್ದ ತೌಡು ಹಿಂಡಿಗಳನ್ನು ಗೋಗಣವು ಕಣ್ಣು ಮುಚ್ಚಿಕೊಂಡು ಸುಖವಾಗಿ ಸವಿದು, ಉಲ್ಲಾಸದಿಂದ ಮೆಲುಕಾಡುತ್ತಿವೆ. ಇಲ್ಲಿ ಪಾಲಿಟಿಕ್ಸ್ ಏನೂ ಇರಲಿಲ್ಲ. ನನ್ನ ಮನಸ್ಸು ಬೇರೆ ಕಡೆ ಹೋಯಿತು. ಈ ಕಲಗಚ್ಚಿನ ಬಾನೆಯಲ್ಲಿ ಅಲ್ಲಿದ್ದ ಗೋಗಣವು ಪಾಲಿಟಿಕ್ಸ್ ವಿಕಾರ ಶೂನ್ಯವಾದ ಅಕೃ ತ್ರಿಮ ಸುಖವನ್ನು ಸವಿಯುತ್ತಿದ್ದಿತು. ನೋಡಿ ಮನಸ್ಸಿಗೆ ತೃಪ್ತಿಯಾಯಿತು. ಅನಂತರ ಅಫೀಮಿನ ಪ್ರಸಾದದಿಂದ ಪ್ರಸನ್ನಚಿತ್ತನಾಗಿ ಜನತೆಯ ಈ ಪಾಲಿ ಟಿಕ್ಸ್ ಪ್ರಿಯತೆಯ ಸಂಬಂಧವಾಗಿ ಚಿಂತಿಸಲಾರಂಭಿಸಿದೆನು. ಆಗ 'ವಿದ್ಯಾ ಸುಂದರ ಯಾತ್ರೆ'ಯ ಒಂದು ಪದವು ನೆನಪಾಯಿತು—

ಮೂಕನಿಗೆ ಬಯಕೆ ಮಾತಾಡಬೇಕೆಂದು
ಹೆಳವಗೆ ಬಯಕೆ ಓಡಬೇಕೆಂದು
ನಿಮಗೆ ಬಯಕೆ ವಿದ್ಯಾವಂತರಾಗಬೇಕೆಂದು
ಬಯಕೆಯು ಬರುವುದು ಬಲವಾಗಿ— ಇತ್ಯಾದಿ.

ನಮಗೆ ಪಾಲಿಟಿಕ್ಸ್‌ನ ಬಯಕೆ. ವಾರವಾರಕ್ಕೆ, ದಿನದಿನಕ್ಕೆ ಪಾಲಿಟಿಕ್ಸ್ ಬೇಕು ನಮ್ಮವರಿಗೆ. ಆದರೆ, ಮೂಕನ ಮಾತಾಡುವ ಬಯಕೆ, ಹೆಳವನ ಓಡುವ ಇಚ್ಛೆ, ಕುರುಡನ ಚಿತ್ರದರ್ಶನ ಲಾಲಸೆ, ಹಿಂದು ವಿಧವೆಯ ಪತಿಪ್ರಣಯಕಾಂಕ್ಷೆ ಅಥವಾ ನನ್ನ ಮನಸ್ಸಿನಲ್ಲಿ ಆದರಣೀಯ ಗೃಹಿಣಿಯ ಆದರದ ಆಸೆ- ಇವುಗಳೆಲ್ಲ ಹಾಸ್ಯಾಸ್ಪದವಾದವು. ಇವುಗಳಲ್ಲಿ ಆವುದೂ ಫಲಿಸದು. ಭಾಯಿಾ ಪಾಲಿಟಿಕ್ಸ್‌ವಾಲಾಗಳೆ! ಕಮಲಾಕಾಂತ ಚಕ್ರವರ್ತಿ— ನಾನು ನಿಮ್ಮ ಹಿತಕ್ಕಾಗಿ ಹೇಳುತ್ತೇನೆ. ಒಬ್ಬ ಕೂಲಿಗೂ ಅತ್ತೆ ಮನೆಯು

ದೊರೆಯುವ ಸಂಭವವಿದೆ. ಆದರೆ ಯಾವ ಜಾತಿಯು ತನ್ನ ಅಂತಃ ಕಲಹದಲ್ಲಿ ಮೈಮರೆತು ವಿದೇಶೀಯರನ್ನು ಕರೆದು ಅವರಿಗೆ ದೇಶವನ್ನೊಪ್ಪಿಸಿತೊ - ಅದಕ್ಕೆ - ಆ ಜಾತಿಗೆ 'ಪಾಲಿಟಿಕ್ಸ್' ಇಲ್ಲ. "ಜಯ ರಾಧಾಕೃಷ್ಣ! ದೇವರು ನಿಮಗೆ ಭಾಗ್ಯ ನೀಡಲಿ! ನನಗೆ ಹಸಿವಾಗಿದೆ ಸ್ವಲ್ಪ ಭಿಕ್ಷಾ ನೀಡಿ ಅಮ್ಮಾ!"– ಇದೇ ಆ ಜಾತಿಯವರ ಪಾಲಿಟಿಕ್ಸ್. ಇದರ ಹೊರತು ಬೇರೆ ಪಾಲಿಟಿಕ್ಸ್ ಯಾವುದಾದರೂ ಗಿಡದಲ್ಲಿ ಫಲಿಸುತ್ತಿದ್ದರೆ, ಅದರ ಬೀಜವು ಈ ದೇಶದ ಮಣ್ಣಿನಲ್ಲಿ ಮೊಳೆಯುವ ಸಂಭವವಿಲ್ಲ.

ಹೀಗೆ ಭಾವಿಸುತ್ತಿರುವಾಗಲೆ ಎದುರಿಗೆ ನೋಡಿದೆ. ಗಾಣಿಗ ಕಲ್ಲಪ್ಪನ ಮೊಮ್ಮಗ ೧೦ ವರುಷದ ಬಾಲಕ, ಒಂದು ಪಿಂಗಾಣಿ ಪಾತ್ರೆಯಲ್ಲಿ ಅನ್ನ ತಂದು, ಹೊರಗೆ ಚಪ್ಪರದಲ್ಲಿ ಕೂತು ತಿನ್ನಲಾರಂಭಿಸಿದ. ದೂರದಲ್ಲಿದ್ದ ಒಂದು ಶ್ವೇತಕೃಷ್ಣ ಕುಕ್ಕುರ ಅದನ್ನು ಕಂಡಿತು. ನೋಡಿ, ಎದ್ದು, ನಿಂತು, ಕ್ಷುಣ್ಣ ಮನಸ್ಸಿನಿಂದ ನಾಲಿಗೆಯನ್ನು ಒಂದು ಸಲ ಮುಂದಕ್ಕೆ ಚಾಚಿತು. ಶುದ್ಧ ಶುಭ್ರವಾಗಿದ್ದ ಅನ್ನದ ರಾಶಿಯು ಪಿಂಗಾಣಿಯ ಪಾತ್ರೆಯಲ್ಲಿ ಹೂವಿನ ರಾಶಿಯಂತೆ ವಿರಾಜಿಸುತ್ತಿತ್ತು. ನಾಯಿಯ ಹೊಟ್ಟೆ ಬೆನ್ನಿಗೆ ಹತ್ತಿದ್ದುದನ್ನು ಕಂಡೆ. ನಾಯಿಯು ನೆಟ್ಟ ನೋಟದಿಂದ ನೋಡಿ ನೋಡಿ, ನಿಂತು ಸಾಕಾಗಿ ಒಂದು ಸಲ ಮೈ ಮುರಿದು, ಆಕಳಿಸಿತು. ಬಳಿಕ ಸ್ವಲ್ಪ ಹೊತ್ತು ಆಲೋಚಿಸಿ, ಮೆಲ್ಲ ಮೆಲಗೆ ಒಂದೊಂದೇ ಹೆಜ್ಜೆ ಮುಂದಿಡಲಾರಂಭಿಸಿತು. ಒಂದೊಂದು ಸಲ ಅದು ಅನ್ನದಿಂದ ತುಂಬಿರುವ ತೈಲಿಕ ಪುತ್ರನ ಬಾಯನ್ನೆ ನೋಡುತ್ತ ಒಂದೊಂದು ಹೆಜ್ಜೆ ಹಿಂದೆ ಮುಂದೆ ಇಡುತ್ತಿದೆ. ಅಕಸ್ಮಾತ್ತಾಗಿ ಅಫೀಮಿನ - ಪ್ರಸಾದದಿಂದ ದಿವ್ಯದೃಷ್ಟಿ ಲಭಿಸಿ, ನೋಡಲಾರಂಭಿಸಿದೆ! ಇದುವೆ ಪಾಲಿಟಿಕ್ಸ್! ಈ ನಾಯಿ ಪಾಲಿಟಿಶಿಯನ್! ಆಗ ಏಕಾಗ್ರತೆಯಿಂದ ನೋಡಲಾರಂಭಿಸಿದೆ. ನಾಯಿಯು ಪಕ್ಕಾ ಪೊಲಿಟಿಕಲ್ ಚಾಲನ್ನು ಚಲಾಯಿಸಲಾರಂಭಿಸಿದೆ! ಕಲ್ಲಪ್ಪನ ಪುತ್ರನು ಒಳ್ಳೆಯವನು. ಏನೂ ಹೇಳುವುದಿಲ್ಲ ಎಂದು ನಾಯಿ ತಿಳಿದುಕೊಂಡಿತು. ನಾಯಿಯು ಅವನ ಹತ್ತಿರ ಹೋಗಿ ಸ್ವಸ್ತಿಕಾಸನವನ್ನು ಹಾಕಿ ಕೂತಿತು, ಮೆಲ್ಲ ಮೆಲ್ಲಗೆ ಬಾಲವನ್ನಲ್ಲಾಡಿಸಲಾರಂಭಿಸಿತು. ಮತ್ತೆ ಬಾಲಕನ ಮುಖವನ್ನು ನೋಡುತ್ತ, ಹ್ಯಾಂ ಹ್ಯಾಂ ಎಂದು ಉಸಿರುಬಿಡಲಾರಂಭಿಸಿತು. ಅದರ ಕ್ಷೀಣ ಶರೀರ,

ತೆಳ್ಳಗಾದ ಹೊಟ್ಟೆ, ಕಾತರ ದೃಷ್ಟಿ, ದೀರ್ಘವಾಗಿ ಬಿಡುತ್ತಿದ್ದ ಉಸಿರು- ಇವುಗಳು ಕಲ್ಲಪ್ಪ ಪುತ್ರನಲ್ಲಿ ದಯೆ ಹುಟ್ಟಿಸಿತು. ನಾಯಿಯ ಪೊಲಿಟಿಕಲ್ ಎಜಿಟೇಶನ್ ಸಫಲವಾಯಿತು. - ಆ ತೈಲಿಕ ಪುತ್ರನು ಚೆನ್ನಾಗಿ ಮಸಾಲೆ ಹಚ್ಚಿದ್ದ ಮಾಂಸದಲ್ಲಿ ಎಲುಬಿನ ತುಂಡನ್ನು ಚೆನ್ನಾಗಿ ನೆಕ್ಕಿ ಹಲ್ಲಿನಿಂದ ಹೀರಿಕೊಂಡಾದ ಬಳಿಕ, ನಾಯಿಯ ಕಡೆ ಎಸೆದನು. ನಾಯಿಯು ಆಗ್ರಹ ಸಹಿತ ಆನಂದೋನ್ಮತ್ತತೆಯಿಂದ ಚರ್ವಣ, ಲೋಹನ, ಚೂಷಣಾದಿ ಗಳನ್ನುಮಾಡಿ, ಅದನ್ನು ರಕ್ತಗತಮಾಡಿಕೊಳ್ಳುವುದರಲ್ಲಿ ಪ್ರವೃತ್ತವಾಯಿತು. ಆನಂದದಿಂದ ಅದರ ಕಣ್ಣುಗಳು ಮುಚ್ಚಿಕೊಂಡವು. ಆ ಎಲುಬಿನ ರಸವನ್ನು ಚೆನ್ನಾಗಿ ಹೀರಿ ಸವಿದ ಬಳಿಕ ಆ ಸುಚತುರ ಪಾಲಿಟಿಶಿಯನ್ ಮನಸ್ಸಿನಲ್ಲಿ ಇನ್ನೊಂದು ತುಂಡು ಎಲುಬು ಸಿಕ್ಕಿದರೆ ಒಳ್ಳೆಯದು ಎಂಬ ಭಾವನೆ ಮೂಡಿತು. ಈ ಭಾವನೆ ಬಂದ ಕೂಡಲೆ ಆ ಪಾಲಿಟಿಶಿಯನ್ ಮತ್ತೆ ಆ ಬಾಲಕನ ಮುಖವನ್ನು ದೀನಭಾವದಿಂದ ನೋಡಲಾರಂಭಿಸಿತು. ತನ್ನ ಮನಸ್ಸಿಗೆ ಬಂದಂತೆ ಬೆಲ್ಲ ಹುಳಿ ಅನ್ನ ಎಲ್ಲ ಕಲಸಿಕೊಂಡು, ಹೆಚ್ಚು ಶಬ್ದ ಮಾಡುತ್ತ ಊಟ ಮಾಡುತ್ತಿದ್ದಾನೆ. ನಾಯಿಯ ಕಡೆ ತಿರುಗಿಕೂಡ ನೋಡ ಲಿಲ್ಲ. ಆಗ ನಾಯಿಯು ಒಂದು "ಬೋಲ್ಡ್ ಮೂವ್ (bold move ವೀರತ್ವದ ಚಿಹ್ನೆ)ಯನ್ನು ಧರಿಸಿತು. ಮೊದಲೆ ಪಾಲಿಟಿಶಿಯನ್ ಜಾತಿ! ಹಾಗೆ ಮಾಡದೆ ಇರಲಾಗುವುದೆ? ಆ ರಾಜನೀತಿವಿದ •ತನ್ನ ಸಾಹಸದಲ್ಲಿ ನಂಬಿಕೆಯಿಟ್ಟು, ಇನ್ನೂ ಒಂದು ಹೆಜ್ಜೆ ಮುಂದೆ ಸರಿದು ಕೂತುಕೊಂಡಿತು. ಇನ್ನೊಂದು ಸಲ ಆಕಳಿಸಿತು. ಆದರೂ ತೈಲಿಕ ಪುತ್ರನು ತಲೆ ಎತ್ತಿ ಅದರ ಕಡೆ ನೋಡಲಿಲ್ಲ. ಆಗ ನಾಯಿಯು ಮೆಲ್ಲಗೆ ಗುರುಗುರು ಶಬ್ದಮಾಡ ಲಾರಂಭಿಸಿತು. ಪ್ರಾಯಶಃ ಅದು - "ಹೇ ರಾಜಾಧಿರಾಜ ತೈಲಿಕ ತನಯ! ಈ ಕಂಗಾಲನ ಹೊಟ್ಟೆ ಇನ್ನೂ ತುಂಬಿಲ್ಲ" ಎಂದು ಹೇಳುತ್ತಿತ್ತೆಂದು ಕಾಣುತ್ತೆ. ಅದು ಗುರುಗುಟ್ಟಿದ್ದನ್ನು ನೋಡಿ ಕಲ್ಲಪ್ಪನ ಹುಡುಗನು ಅದರ ಕಡೆ ತಿರುಗಿ ನೋಡಿದ. ಆತನ ತಟ್ಟೆಯಲ್ಲಿ ಎಲುಬಿನ ತುಂಡು ಉಳಿದಿರಲಿಲ್ಲ. ಒಂದು ಮುಟಿಗೆ ಅನ್ನವನ್ನು ಅದರ ಕಡೆ ಎಸೆದ. ದೇವರಾಜ ಪುರಂದರನು ನಂದನಕಾನನದಲ್ಲಿ ಕುಳಿತು ಸುಖವಾಗಿ ಸುಧಾಪಾನ ಮಾಡುವಂತೆ, ಕಾರ್ಡಿನಲ್ ಊಲ್‌ಸೆ ಅಥವಾ ಕಾರ್ಡಿನಲ್ ಜೆರೆಜ್‌ನು ಕಾರ್ಡಿನಲ್

ಟೋಪಿಯನ್ನು ಧರಿಸಿ ಸುಖವಾಗಿರುವಂತೆ, ಆ ನಾಯಿಯೂ ಸುಖವಾಗಿ ಆ ಅನ್ನದ ಮುಟಿಗೆಯನ್ನು ತಿನ್ನಲಾರಂಭಿಸಿತು. ಅದೇ ಸಮಯದಲ್ಲಿ ಕಲ್ಲಪ್ಪನ ಗೃಹಿಣಿಯು ಬಾಗಿಲಿನಿಂದ ಹೊರಗೆ ಬಂದಳು. ತನ್ನ ಮಗುವಿನ ಹತ್ತಿರ ಬಂದು ನಾಯಿಯು ಕಚಪಚ ಅನ್ನ ತಿನ್ನುತ್ತ ಕುಳಿತಿರುವುದನ್ನು ನೋಡಿ, ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು ಒಂದು ಇಟ್ಟಿಗೆ ತುಂಡಿನಿಂದ ಅದಕ್ಕೆ ಹೊಡೆದಳು. ಆ ಪೆಟ್ಟಿತಿಂದ ರಾಜನೀತಿಜ್ಞ ನಾಯಿಯು ಬಾಲ ಮುದುರಿಕೊಂಡು ಬಗೆ ಬಗೆಯ ರಾಗ ರಾಗಿಣಿ ಆಲಾಪನೆ ಮಾಡುತ್ತ ಸ್ಫೂರ್ತಿಯಿಂದ ಓಡಿಹೋಯಿತು.

ಅದೇ ಸಮಯದಲ್ಲಿ ಇನ್ನೊಂದು ಘಟನೆಯು ಅವಳ ದೃಷ್ಟಿಗೆ ಗೋಚರವಾಯಿತು. ಆ ಕ್ಷೀಣ ಜೀವಿ ನಾಯಿಯು ತನ್ನ ಹೊಟ್ಟೆ ಹೊರೆದುಕೊಳ್ಳಲು ಬಹು ಬಗೆಯ ಕೌಶಲ್ಯವನ್ನು ತೋರುತ್ತಿದ್ದಾಗ, ಅತ್ತ ಒಂದು ದೊಡ್ಡ ಕೊಬ್ಬಿದ ಗೂಳಿಯು ಬಂದು ಗಾಣಿಗನ ಎತ್ತಿನ ಗೋದಲಿಯಲ್ಲಿ ಬಾಯಿ ಹಾಕಿ, ಆ ಹಿಂಡಿ - ಹುಲ್ಲು - ಕಲಗಚ್ಚನ್ನು ಸವಿಯಲಾರಂಭಿಸಿತ್ತು. ಆ ಹೋರಿಯ ಭಯಂಕರವಾದ ಕೊಂಬುಗಳನ್ನೂ ಭಾರೀ ಶರೀರವನ್ನೂ ನೋಡಿ, ಪಾಪ, ಆ ಗಾಣದ ಎತ್ತುಗಳು ತಮ್ಮ ಬಾಯನ್ನು ಹೊರಗೆ ಸರಿಸಿಕೊಂಡು ಮೌನದಿಂದ ನಿಂತು ಕಾತರ ದೃಷ್ಟಿಯಿಂದ ಆ ಗೂಳಿಯ ಆಹಾರ ಚರ್ವಣ ನೈಪುಣ್ಯವನ್ನು ನೋಡುತ್ತಲಿದ್ದವು! ನಾಯಿಯನ್ನು ಹೊಡೆದೋಡಿಸಿ, ಕಲ್ಲಪ್ಪ ಗೃಹಿಣಿಯು ಈ ಕಳ್ಳತನವನ್ನು ನೋಡಿ, ಒಂದು ಬಿದಿರು ಕೋಲನ್ನು ತೆಗೆದುಕೊಂಡು, ಇನ್ನೇನು - ಆ ಹೋರಿಯನ್ನು ಕೊಂದು ಗೋಲೋಕಕ್ಕೆ ಕಳಿಸಿಬಿಡುವವಳಂತೆ ಅದರ ಕಡೆಗೆ ಓಡಿಬಂದಳು.

ಆದರೆ, ಗೋಲೋಕಕ್ಕೆ ಹೋಗುವ ಮಾತಿರಲಿ - ಆ ಗೂಳಿಯು ಒಂದು ಹೆಜ್ಜೆ ಕೂಡ ಕದಲಲಿಲ್ಲ. ಗಾಣಗಿತ್ತಿಯು ಹತ್ತಿರ ಬಂದ ಕೂಡಲೆ ಹೋರಿಯು ತನ್ನ ಉದ್ದವಾದ ಕೊಂಬುಗಳಿಂದ ಅವಳ ಎದೆಯನ್ನಿರಿಯುವ ಸಂಭವವನ್ನು ಸೂಚಿಸಿತು. ಆಗ ಗಾಣಗಿತ್ತಿಯು ಆ ರಣರಂಗದಿಂದ ಓಡಿ ಮನೆಯೊಳಗೆ ಹೊಕ್ಕಿಕೊಂಡಳು. ಗೂಳಿಯೂ ಗೋದಲಿಯನ್ನೂ ಕಲಗಚ್ಚಿನ ಪಾತ್ರೆಯನ್ನೂ ಚೆನ್ನಾಗಿ ನೆಕ್ಕಿ ಸವಿದು, ಮೈ ತೂಗಾಡಿಸುತ್ತ ಸ್ವಸ್ಥಾನಕ್ಕೆ ಹೊರಟಿತು!

ಅದೂ ಪಾಲಿಟಿಕ್ಸ್ ಎಂದು ನನಗೆ ಭಾಸವಾಯಿತು. 'ಎರಡು ಬಗೆಯ ಪಾಲಿಟಿಕ್ಸ್ ನೋಡಿದೆ. ಒಂದು ಕುಕ್ಕುರ ಜಾತಿಯದು, ಒಂದು ವೃಷ ಜಾತಿಯದು. ಬಿಸ್ಮಾರ್ಕ್ ಮತ್ತು ಗರ್ಶಾಕಫ್ ಇವರು ವೃಷಜಾತಿ' ಪಾಲಿಟಿಷಿಯನ್‌ರು; ಮತ್ತೆ ಊಲ್‌ಸೆಯಿಂದ ಹಿಡಿದು ನಮ್ಮ ಪರಮಾತ್ಮೀಯ ರಾಜಾ ಮುಛಿರಾಮುರಾಯ್, ರಾವ್ ಬಹದ್ದೂರರವರೆಗೆ ಎಲ್ಲರೂ ಕುಕ್ಕುರ ಜಾತಿಯ ಪಾಲಿಟಿಶಿಯನ್‌ರು!—

ಇತಿ,

— ಶ್ರೀ ಕಮಲಾಕಾಂತ ಚಕ್ರವರ್ತಿ.

---

## ೩. ಭಾರತೀಯರ ಮನುಷ್ಯತ್ವ

**ಸಂ**ಪಾದಕ ಮಹಾಶಯ, ಈಗತಾನೆ ತಮಗೊಂದು ಪತ್ರವನ್ನು ಬರೆಯಲು ಅಣಿಯಾಗುತ್ತಿದ್ದೇನೆ. ಆದರೆ ಏನೆಂದು ಪತ್ರ ಬರೆಯಲಿ! ಬರೆಯುವುದಕ್ಕೆ ವಿಘ್ನವನ್ನುಂಟುಮಾಡುವ ಅನೇಕ ಶತ್ರುಗಳು ಇರುವರು. ನಾನಿರುವುದು ಗುಡಿಸಿಲಲ್ಲಿ. ದುರ್ಭಾಗ್ಯವಶದಿಂದ ಅದರ ಬಳಿ ಒಂದೆರಡು ಹೂ ಗಿಡಗಳನ್ನು ಹಾಕಿಕೊಂಡಿರುವೆನು. ಕಮಲಾಕಾಂತನಿಗೆ ಬಂಧು ಮಿತ್ರರಾರೂ ಇಲ್ಲ. ಆದುದರಿಂದ ಕಾಲಾನುಕ್ರಮೇಣ ಈ ಹೂಗಳೇ ನನ್ನ ಗೆಳತಿಯರಾಗುವರೆಂದು ನಂಬಿದ್ದೆನು. ಏಕೆಂದರೆ ಹೆಂಗಸರನ್ನು ಸಂತೋಷಪಡಿಸುವಂತೆ ಇವುಗಳನ್ನು ಸಂತೋಷಪಡಿಸಲು ಒಡವೆ ವಸ್ತುಗಳನ್ನು ಮಾಡಿಸಬೇಕಾಗಿರಲಿಲ್ಲ, ಹಣವನ್ನು ಸಂಗ್ರಹಿಸಿರಬೇಕಾಗಿರಲಿಲ್ಲ. ಅವುಗಳ ಮನಸ್ಸನ್ನೊಲಿಸಲು ಕಿವಿಗಿನಿದಾದ ಮಾತುಗಳನ್ನಾಡಬೇಕಾಗಿಲ್ಲ. ಅವು ತಮ್ಮ ಮನಸ್ಸು ಬಂದಾಗ ತಾವಾಗಿಯೆ ಅರಳಿ ಸುಖವನ್ನುಂಟುಮಾಡುವವು. ಅದರಲ್ಲಿ ಹಾಸ್ಯವಿದೆ, ರೋದನವಿಲ್ಲ, ಪ್ರಸನ್ನತೆಯಿದೆ, ರುಕ್ಷಭಾವವಿಲ್ಲ. ಗೌಳಗಿತ್ತಿ ಶಾಮೆಯು ನನ್ನೊಂದಿಗೆ ಜಗಳವಾಡಿದ್ದರೇನಾಯಿತು? ನಾನು ಈ ಹೂಗಳೊಂದಿಗೆ ಸ್ನೇಹ ಬೆಳೆಸುವೆನು.

ಈಗತಾನೆ ಹೂಗಳು ಅರಳಿದವು. ನಾನು ಆಲೋಚಿಸಿದೆನು, ಸಂಪಾದಕ ಮಹಾಶಯ! - ಇಲ್ಲ, ಆಲೋಚಿಸುವುದಕ್ಕೆ ಮೊದಲು ಮಾಡುವುದರಲ್ಲಿಯೆ, ಹೂಗಳು ಅರಳಿದ್ದನ್ನು ನೋಡಿ ಗುಂಗೀ ಹುಳ, ಜೇನು ಹುಳ ಇವೇ ಮೊದಲಾದ, ರಸವನ್ನು ಹುಡುಕುತ್ತ ಅಲೆದಾಡುವ ರಸಿಕ ದಳವು ಗುಂಪುಗುಂಪಾಗಿ ಬಂದು ನನ್ನ ಬಾಗಿಲನ್ನು ಆಕ್ರಮಿಸಿ, "ಗುನ್ ಗುನ್" "ಭನ್ ಭನ್" "ಘೇ ಘೇಂ" ಎಂದು ಶಬ್ದಮಾಡುತ್ತ ನನ್ನ ಮೈಯುರಿಸಿದವು. ಅವುಗಳನ್ನು ಕುರಿತು ನಾನೆಷ್ಟೋ ಸಮಾಧಾನ ಹೇಳಿದೆನು – "ಸಜ್ಜನರೇ, ಮಹಾಶಯರೆ! ಇದು ಸಭೆಯಲ್ಲ, ಸಮಾಜವಲ್ಲ, ಅಸೋಸಿಏರ್ಷ ಅಲ್ಲ, ಲೀಗ್ ಅಲ್ಲ, ಸೊಸೈಟಿಯಲ್ಲ, ಕ್ಲಬ್ಬೂ ಅಲ್ಲ. ಇದು ಕಮಲಾಕಾಂತ

ಚಕ್ರವರ್ತಿಯ ಗುಡಿಸಲು. ತಾವು ಭನ್ ಭನ್ ಗುನ್ ಗುನ್ ಮಾಡು ವುದಾದರೆ ಅನ್ಯತ್ರ ಹೋಗಬಹುದು. ನಾನು ಈಗ ಯಾವ ಪ್ರಸ್ತಾವ (ರೆಸಲ್ಯೂಷನ್) ಮಾಡುವುದಕ್ಕೂ ಸಿದ್ಧನಾಗಿಲ್ಲ. ನೀವು ಬೇರೆ ಸ್ಥಳಕ್ಕೆ ಹೋಗಬೇಕು.

ಆದರೆ ಗುನ್‌ಗುನ ದಳವು ನನ್ನ ಮಾತನ್ನು ಸ್ವಲ್ಪವೂ ಲಕ್ಷಿಸಲಿಲ್ಲ. ಅದಕ್ಕೆ ಬದಲಾಗಿ ಅವು ಹೂ ಗಿಡಗಳನ್ನು ಬಿಟ್ಟು ನನ್ನ ಗುಡಿಸಿಲಿನ ಬಾಗಿಲನ್ನು ಆಕ್ರಮಿಸಲಾರಂಭಿಸಿದವು. ಈಗತಾನೆ ನಾನು ನಿಮಗೆ ಪತ್ರ ವನ್ನು ಬರೆಯಲಾರಂಭಿಸಿದ್ದೆನು. (ಈಗ ಅಫೀಮಿನ ನಿಷೆಯು ಇಳಿಯುತ್ತಿದೆ) ಅದೇ ಸಮಯದಲ್ಲಿ ಒಂದು ಕಪ್ಪು ಭ್ರಮರವು, ಕಾಗೆಗಿಂತಲೂ ಕಪ್ಪಾದ ಭ್ರಮರವು, 'ಭನ್ - ನ್ - ನ್' ಮಾಡುತ್ತ ಹಾರಿಬಂದು ನನ್ನ ಕಿವಿಯ ಹತ್ತಿರ ಭನ್ ಭನ್ ಮಾಡಲಾರಂಭಿಸಿತು. ಈಗ ಹೇಳಿ, ಮಹಾಶಯ, ಹೇಗೆ ತಮಗೆ ಪತ್ರ ಬರೆಯಲಿ?

ಭ್ರಮರಬಾಬುವು ತಾನು ದೊಡ್ಡ ರಸಿಕನೆಂದೂ, ಒಳ್ಳೆಯ ಉಪನ್ಯಾಸಕನೆಂದೂ ತಿಳಿದಿರುವುದು. ಅದರ "ಭನ್ ಭನಾಟ"ದಿಂದ ನನಗೆ ಸುಖ ವುಂಟಾಗುವುದು, ನನ್ನ ಜೀವಕ್ಕೆ ಸಮಾಧಾನವುಂಟಾಗುವುದು ಎಂದು ಅದು ತಿಳಿದಿರುವುದು. ನನ್ನ ಮನೆಯ ಹೂವಿನ ದಳದ ರಸವನ್ನು ಕುಡಿದು ನನ್ನ ಕಿವಿಯ ಬಳಿಯಲ್ಲಿ ಭನ್ ಭನ್ ಮಾಡುವುದೆ! ನಾನು ಕ್ರೋಧದಿಂದ ತುಂಬಿ ಬೆಂಕಿ ಬೆಂಕಿಯಾದೆನು. ನನ್ನ ರಕ್ತವು ಕುದಿಯಲಾರಂಭಿಸಿತು. ನಾನು ತಾಳೇಗರಿಯ ಬೀಸಣಿಕೆಯನ್ನು ಕೈಯ್ಯಲ್ಲಿ ಹಿಡಿದು ಭ್ರಮರ ದೊಂದಿಗೆ ಯುದ್ಧಕ್ಕೆ ನಿಂತೆನು. ಆಗ ನಾನು ಘೂರ್ಣನ, ಸಂಘೂರ್ಣನಾದಿ ವಿವಿಧ ವಕ್ರಗತಿಯಿಂದ ಪಂಖಾಸ್ತ್ರವನ್ನು ತಿರುಗಿಸಲಾರಂಭಿಸಿದೆನು! ಭ್ರಮ ರವೂ ಡೀನ, ಉಡ್ಡೀನ, ಪ್ರಡೀನ, ಸಮಾಡೀನಾದಿ ಅನೇಕ ಗತಿಗಳಿಂದ ತನ್ನ ಚಾತುರ್ಯವನ್ನು ತೋರಿಸಲಾರಂಭಿಸಿತು!! ಕಮಲಾಕಾಂತ ಚಕ್ರವರ್ತಿ ಯಾದ ನಾನು ಪತ್ರರೂಪವಾದ ಮುಕ್ತಾವಳಿಗಳ ಲೇಖಕನು. ಆದರೆ, ಅಯ್ಯೋ, ಮನುಷ್ಯ ಪರಾಕ್ರಮವೆ! ನೀನು ಅತ್ಯಂತ ಅಸಾರ. ನೀನು ಯಾವಾಗಲೂ ಮನುಷ್ಯನನ್ನು ಮೋಸಗೊಳಿಸಿ ನಿನ್ನ ಅಸಾರತ್ವವನ್ನು ತೋರಿಸುವೆ. ಜಾಮಾದ ಮೈದಾನದಲ್ಲಿ ಹನಿಬಲನನ್ನೂ, ಪಲಟೋವಾ

ಮೈದಾನದಲ್ಲಿ ಚಾರ್ಲಸನನ್ನೂ, ವಾಟರ್ಲೂ ಮೈದಾನದಲ್ಲಿ ನೆಪೋಲಿಯನನ್ನೂ, ಇಂದು ಈ ಭ್ರಮರ ಸಮರದಲ್ಲಿ ಕಮಲಾಕಾಂತ ಚಕ್ರವರ್ತಿಯನ್ನೂ ಮೋಸಗೊಳಿಸಿದೆ! ನಾನು ಪಂಖವನ್ನು ಬೀಸಿ, ಅದರ ಗಾಳಿಯಿಂದ ಭ್ರಮರವನ್ನು ಓಡಿಸಲೆತ್ನಿಸಿದ ಹಾಗೆಲ್ಲ ಆ ದುಷ್ಟ ಜಂತುವು ಮತ್ತೆ ನನ್ನ ತಲೆಯ ಮೇಲೆ ಭನ್ ಭನ್ ಮಾಡಲಾರಂಭಿಸಿತು. ಕೆಲವು ವೇಳೆ ನನ್ನ ಅಂಗ ವಸ್ತ್ರದಲ್ಲಡಗಿ, ಮೋಡದ ಮರೆಯಲ್ಲಿದ್ದ ಮೇಘನಾದನಂತೆ, ಯುದ್ಧಮಾಡಲಾರಂಭಿಸಿತು. ಕೆಲವು ವೇಳೆ ಕುಂಭಕರ್ಣನೊಂದಿಗೆ ಯುದ್ಧಮಾಡುವ ರಾಮಸೈನ್ಯದಂತೆ ನನ್ನ ಕಂಕುಳ ಸಂದಿಯಿಂದ ಹಾದುಬಂದು ಪೀಡಿಸಲಾರಂಭಿಸಿತು. ಸ್ಯಾಂಪ್‌ಸನ್‌ನಂತೆ ಕೂದಲಿನಲ್ಲಿಯೆ ನನ್ನ ಪರಾಕ್ರಮವೆಲ್ಲ ಸಂಚಿತವಾಗಿರುವುದೆಂದು ತಿಳಿದು ಶರದೃತುವಿನ ಮೇಘದಂತಿದ್ದ ನನ್ನ ಶ್ವೇತಶ್ಯಾಮ ಕೇಶಗುಚ್ಛವನ್ನು ಹೊಕ್ಕು ಅಲ್ಲಿ ಭೇರಿಯನ್ನು ಬಾರಿಸಲಾರಂಭಿಸಿತು. ಆಗ ಅದರ ದಂಶನ ಭಯದಿಂದ ನಾನು ಸಮರಭೂಮಿಯನ್ನು ಬಿಟ್ಟು ಓಡಬೇಕಾಯಿತು. ಅದೂ ಹಿಂದೆಯೆ ಬಂದಿತು. ಆಗ ಕಾಲ್ಮಣೆಯನ್ನೆಡಹಿ ಕಮಲಾಕಾಂತ ಚಕ್ರವರ್ತಿಯು "ಪಪಾತ ಧರಣೀತಲೇ!!!" ಈ ಸಂಸಾರ ಸಂಗ್ರಾಮದಲ್ಲಿ ಮಹಾರಥಿಯಾದ ಕಮಲಾಕಾಂತ ಚಕ್ರವರ್ತಿಯು ದಾರಿದ್ರ್ಯಕ್ಕಾಗಲಿ, ಚಿರಕೌಮಾರ್ಯಕ್ಕಾಗಲಿ, ಅಫೀಮಿಗಾಗಲಿ ಸೋತಿರಲಿಲ್ಲ. ಅವನೇ—ಅಯ್ಯೋ, ಅಯ್ಯೋ! ಇಂದು ಈ ಸಾಮಾನ್ಯ ಜೀವದಿಂದ ಪರಾಜಿತನಾದನು!!

ಆಗ ಧೂಳಿನಿಂದ ಮುಚ್ಚಿದ ದೇಹವನ್ನು ಕೊಡಹುತ್ತ ಎದ್ದು ನಿಂತು, ಕೈಜೋಡಿಸಿ, ಭ್ರಮರ ರಾಜನೊಂದಿಗೆ ಈ ಬಗೆಯಾಗಿ ಕ್ಷಮೆಯನ್ನು ಬೇಡಲಾರಂಭಿಸಿದೆನು. "ಹೇ ದ್ವಿರೇಫಸತ್ತಮ! ಈ ಬಡ ಬ್ರಾಹ್ಮಣನು ನಿನಗೆ ಮಾಡಿದ ಅಪರಾಧವೇನು? ಅವನ ವಾಚನ ಲೇಖನಗಳಲ್ಲಿ ಏತಕ್ಕೆ ವಿಘ್ನವನ್ನುಂಟುಮಾಡುವೆ? ನೋಡು, ನಾನು ಭಾರತ ದರ್ಶನದ ಸಂಪಾದಕರಿಗೆ ಈ ಪತ್ರವನ್ನು ಬರೆಯಲು ಕುಳಿತಿರುವೆನು. ಪತ್ರ ಬರೆಯುವುದರಿಂದ ಅಫೀಮು ಸಿಕ್ಕುವುದು. ನೀನೇಕೆ ನಿನ್ನ ಭನ್ ಭನ್‌ದಿಂದ ಅದಕ್ಕೆ ವಿಘ್ನವನ್ನುಂಟುಮಾಡುತ್ತಿರುವೆ?" ನಾನು ಇಂದು ಬೆಳಿಗ್ಗೆ ಒಂದು ಕರ್ಣಾಟಕ ನಾಟಕವನ್ನೋದುತ್ತಿದ್ದೆನು. ಅಕಸ್ಮಾತ್ತಾಗಿ ಆ ನಾಟಕದ ಶೈಲಿಯ

ಲ್ಲಿಯೇ ನಾನು ಅದನ್ನು ಸಂಭೋಧಿಸಲಾರಂಭಿಸಿದೆನು. "ಹೇ ಭೃಂಗ! ಹೇ ಅನಂಗರಂಗತರಂಗಗಳನ್ನು ಹೆಚ್ಚಿಸುವವನೆ! ಹೇ ಉದ್ಯಾನವಿಹಾರಿ! ನೀನೇಕೆ ಭನ್ ಭನ್ ಮಾಡುತ್ತಿರುವೆ? ಹೇ ಭೃಂಗ! ಹೇ ದ್ವಿರೇಫ! ಹೇ ಷಟ್ಪದ! ಹೇ ಅಲಿ! ಹೇ ಭ್ರಮರ! ಹೇ ಭನ್ ಭನ್."

ನನ್ನ ಸಹಸ್ರನಾಮ ಸ್ತೋತ್ರದಿಂದ ಭ್ರಮರವು ಪ್ರಸನ್ನವಾಗಿ ನನ್ನಿದಿರಿಗೆ ಬಂದು ಕೂತುಕೊಂಡು ಗುನ್ ಗುನ್ ಎಂದು ಗಂಟಲನ್ನು ಸರಿಪಡಿಸಿಕೊಂಡು ಮಾತನಾಡಲಾರಂಭಿಸಿತು. ಬಂಗೀ ಭಗವತಿಯ ಪ್ರಸಾದದಿಂದ ನಾನು ಪ್ರಾಣಿಗಳ ಭಾಷೆಯನ್ನು ತಿಳಿದುಕೊಳ್ಳಲು ಸಮರ್ಥನಾಗಿರುವೆನು. ಆದುದರಿಂದ ಕಿವಿಗೊಟ್ಟು ಅದರ ಮಾತನ್ನು ಕೇಳಲಾರಂಭಿಸಿದೆನು.

ಮಧುಕರವು ಹೇಳಲಾರಂಭಿಸಿತು.–"ವಿಪ್ರದೇವ! ನನ್ನ ಮೇಲೆ ನಿನಗೇಕಿಷ್ಟು ಕೋಪ? ಭನ್ ಭನ್ ಎಂದು ನಾನೊಂದೇ ಪ್ರಾಣಿಯೆ ಕೂಗುತ್ತಿರುವುದು! ನಿಮ್ಮ ಈ ಭಾರತ ದೇಶದಲ್ಲಿ, ಹುಟ್ಟಿ ಭನ್ ಭನ್ ಎಂದು ಕೂಗದೇ ಮತ್ತೇನು ಮಾಡಬೇಕು? ಹಿಂದುವಾದವನಾವನು ಭನ್ ಭನ್ ಎಂದು ಕೂಗುತ್ತಿಲ್ಲ? ಭನ್ ಭನ್ ಕೂಗಿನ ಹೊರತು ಭಾರತ ವಾಸಿಗಳಾದವರಿಗೆ ಮತ್ತೇನು ಕೆಲಸವಿದೆ? ನಿಮ್ಮಲ್ಲಿ ರಾಜ, ಮಹಾರಾಜ, ಅಥವಾ "ಅನರೆಬಲ್" ಆಗಿರತಕ್ಕವರು ಕೌನ್ಸಿಲಿನಲ್ಲಿ ಕೂತುಕೊಂಡು ಭನ್ ಭನ್ ಎಂದು ಕೂಗುತ್ತಿರುವರು. ರಾಜಾ ಅಥವಾ ರಾವ್ ಬಹದ್ದೂರ್ ಅಥವಾ ದಿವಾನ್ ಬಹದ್ದೂರ ಅಗಲು ಉಮೇದುವಾರರಾಗಿರತಕ್ಕವರು ರಾಜಸಭೆಯಲ್ಲಿ ಅಥವಾ ಸಾಹೇಬರ ಬಳಿ ಹೋಗಿ ಭನ್ ಭನ್ ಕೂಗುತ್ತಿರುವರು. ನೌಕರಿಗೋಸ್ಕರ ಉಮೇದುವಾರರಾಗಿರುವವರ ಭನ್ ಭನ್ ಗೋಳಿಗೆ ಅಂತ್ಯವೇ ಇಲ್ಲ. ಹಿಂದೂಗಳಲ್ಲಿ ಅಲ್ಪ ಸ್ವಲ್ಪ ಇಂಗ್ಲೀಷು ಕಲಿತ ಲಾಯರುಗಳಂತೂ ಕೈಯಲ್ಲಿ ಅರ್ಜಿ ಕಾಗದವನ್ನು ಹಿಡಿದುಕೊಂಡು, ಸಿಫಾರಸಿಗೋಸ್ಕರ ಉಮೇದುವಾರರಾಗಿ ಸೊಳ್ಳೆಗಳಂತೆ, ಅವರು ತಿನ್ನುವಾಗ, ಕುಡಿಯುವಾಗ, ಮಲಗಿರುವಾಗ ಎದ್ದಾಗ, ಕೂತಿರುವಾಗ, ನಡೆಯುವಾಗ, ಹಗಲು, ರಾತ್ರಿ, ಬೆಳಿಗ್ಗೆ, ಸಾಯಂಕಾಲ ಕಂಡವರ ಮನೆಬಾಗಿಲಲ್ಲಿ ಯಾವಾಗಲೂ ಭನ್‌ನ್ ಎಂದು ಗೋಳಾಡುತ್ತಿರುವರು. ಯಾರು ಉಮೇದುವಾರಿಯನ್ನು ಬಿಟ್ಟು ಸ್ವತಂತ್ರ ವಕೀಲರೂ ಬ್ಯಾರಿಷ್ಟರೂ ಆಗಿರುವರೊ,

ಅವರು ಸತ್ಯಮಿಥ್ಯಾಸಾಗರ ಸಂಗಮದಲ್ಲಿ ಪ್ರಾತಃಸ್ನಾನಮಾಡಿ, ವಿಕೇಶ ಶಿರಸುಳ್ಳವರಾಗಿ ನ್ಯಾಯಾಸ್ಥಾನದ ಕಟಾಂಜನದ ಒಳಗೆ ಕುಳಿತು ಜನರಿಗೆ ಭೀಷಣರಾಗಿ ತೋರುವ ದೊಡ್ಡ ಜಡ್ಜಿ, ಚಿಕ್ಕ ಜಡ್ಜಿ, ಸಬ್‌ಜಡ್ಜಿ, ಡಿಪುಟಿ, ಮುನ್ಸೀಫ್ ಮೊದಲಾದವರ ಬಳಿಗೆ ಹೋಗಿ ಸನದುಗಳಿಗೋಸ್ಕರ, ಮತ್ತು ಹೀಯರಿಂಗ್ ಮುಂದರಿಸುವುದಕ್ಕೋಸ್ಕರ, ಭನ್ ಭನ್ ಎಂದು ಗೋಳಾಡು ತ್ತಿರುವರು. ಮತ್ತೆ ಕೆಲವರು ದೇಶದಲ್ಲಿ ಮಳೆ ಬರಲಿಲ್ಲವೆಂದು ಹತ್ತಿಪ್ಪತ್ತು ಜನರನ್ನು ಸೇರಿಸಿಕೊಂಡು ಭನ್ ಭನ್ ಗೋಳಿಡುವರು, "ನಮ್ಮ ಜನರಿಗೆ ದೊಡ್ಡದೊಡ್ಡ ನೌಕರಿಸಿಗುವುದಿಲ್ಲ, ಆದ್ದರಿಂದ ಬನ್ನಿರಿ, ನಾವೆಲ್ಲರೂ ಸೇರಿ ಭನ್ ಭನ್ ಎಂದು ಬೊಬ್ಬಿಡುವ" ಎನ್ನುವರು. ಉಳಿದವರು "ನಮ್ಮ ಸ್ನೇಹಿತನ ತಾಯಿ ಸತ್ತುಹೋದಳು. ಬನ್ನಿರಿ, ಅವಳ ಸ್ಮಾರಕವನ್ನು ಸ್ಥಾಪಿಸುವುದಕ್ಕೋ ಸ್ಕರ ಭನ್ ಭನ್ ಎಂದು ರೋಧಿಸೋಣ" ಎನ್ನುವರು. ಕೆಲವರು ಇದರಿಂದ ತೃಪ್ತರಾಗದೆ, ಕಾಗದವನ್ನೂ ಲೇಖನಿಯನ್ನೂ ತೆಗೆದುಕೊಂಡು ಸಾಪ್ತಾಹಿಕ, ಮಾಸಿಕ, ದೈನಿಕ ಭನ್ ಭನ್, ಭನ್ ಭನ್ ರೋಧನೆಯನ್ನು ಮಾಡುತ್ತಿರು ವರು. ಮತ್ತೆ ನನ್ನ ಭನ್ ಭನ್‌ನಿಂದ ಇಷ್ಟು ಕ್ರೋಧವನ್ನು ತಳೆದ ನೀನು ಏನನ್ನು ಮಾಡುತ್ತ ಕುಳಿತಿರುವೆ? ನೀನೂ ಭಾರತ ದರ್ಶನ ಸಂಪಾದಕ ನಿಂದ ಅಫೀಮನ್ನು ಸಂಪಾದಿಸುವ ಅಭಿಪ್ರಾಯದಿಂದ ಭನ್ ಭನ್ ರೋದನ ಮಾಡುತ್ತ ಕುಳಿತಿರುವೆ. ಹೀಗಿರುವಾಗ ನನ್ನ ಭನ್ ಭನ್ ಧ್ವನಿಯು ನಿನಗೆ ಕಠೋರವಾಗಿ ತೋರುವುದೇಕೆ ?

"ನಿಜವಾಗಿ ಹೇಳುತ್ತೇನೆ ಕೇಳು, ಕಮಲಾಕಾಂತ! ನಿಮ್ಮ ಜಾತಿ ಯವರ ಭನ್ ಭನ್ ರೋದನವು ನನಗೂ ರುಚಿಸುವುದಿಲ್ಲ. ನಾನೊಂದು ಸಾಮಾನ್ಯ ಕೀಟ. ನಾನು ಕೇವಲ ಭನ್ ಭನ್ ರೋದನ ಮಾಡುವುದಿಲ್ಲ. ನಾವು ಮಧು ಸಂಗ್ರಹ ಮಾಡುವೆವು. ಜೇನಿನ ಹುಟ್ಟನ್ನು ಕಟ್ಟುವೆವು. ನಿಮಗೆ ಮಧು ಸಂಗ್ರಹ ಮಾಡುವುದೂ ಬರುವುದಿಲ್ಲ, ಜೇನು ಹುಟ್ಟು ಕಟ್ಟು ವುದನ್ನೂ ಅರಿಯಿರಿ. ನಿಮಗೆ ಗೊತ್ತಿರುವುದು ಭನ್ ಭನ್ ರೋದನ ವೊಂದೇ. ನಿಮಗೆ ಕೆಲಸಮಾಡುವ ಅಭ್ಯಾಸವೇ ಇಲ್ಲ. ರೋದನಪ್ರಿಯರಾದ ಹೆಂಗಳೆಯರಂತೆ ಹಗಲಿರಳೂ ಭನ್ ಭನ್ ರೋದನ ಮಾಡುತ್ತಿರುವಿರಿ. ಮಾತಾಡುವುದನ್ನು ಸ್ವಲ್ಪ ನಿಲ್ಲಿಸಿ, ಓದುವುದನ್ನೂ ಬರೆಯುವುದನ್ನೂ

ಕಡಿಮೆಮಾಡಿ, ಕೆಲಸದಲ್ಲಿ ಮನಸ್ಸು ಮಗ್ನವಾಗುವಂತೆ ಮಾಡಿರಿ. ಆಗ ಐಶ್ವರ್ಯಾಭಿವೃದ್ಧಿಯಾಗುವುದು. ಮಧು ಸಂಗ್ರಹ ಮಾಡುವುದನ್ನು ಕಲಿಯಿರಿ! ಮಧುಮಕ್ಷಿಕೆಯಂತೆ ಐಕ್ಯದಿಂದ ಜೇನು ಹುಟ್ಟು ಕಟ್ಟುವುದನ್ನು ಕಲಿಯಿರಿ! ನಿಮ್ಮ ನಾಲಿಗೆ ಮತ್ತು ಲೇಖನಿಗಿಂತ ನಮ್ಮ ಮುಳ್ಳು (ಕೊಂಡಿ) ಒಳ್ಳೆಯದು. ನಿಮ್ಮ ವಾಕ್ಯಗಳಿಗೆ ಅಥವಾ ಲೇಖನಿಗೆ ಯಾರೂ ಹೆದರುವುದಿಲ್ಲ. ಆದರೆ, ನೋಡು ನಮ್ಮ ಮುಳ್ಳಿಗೆ ಎಲ್ಲರೂ ಹೆದರುತ್ತಾರೆ. ಸ್ವರ್ಗದಲ್ಲಿ ಇಂದ್ರನ ವಜ್ರ, ಮರ್ತ್ಯಲೋಕದಲ್ಲಿ ಇಂಗ್ರೀಜರ ಗುಂಡು (ಫಿರಂಗಿ), ಆಕಾಶ ಮಾರ್ಗದಲ್ಲಿ ನಮ್ಮ ಮುಳ್ಳು ಇವು–ಸಮಾನವಾಗಿರುವುವು ಇರಲಿ ಇನ್ನು ನೀವು ಮಧು ಸಂಗ್ರಹ ಮಾಡಿರಿ, ಕೆಲಸದಲ್ಲಿ ಮನಸ್ಸಿಡಿರಿ. ಒಂದು ವೇಳೆ ನಿಮ್ಮ ನಾಲಿಗೆಯೂ ಕೈಯೂ ಅಭ್ಯಾಸ ಬಲದಿಂದ ಕೆಲಸಕ್ಕೆ ಆತಂಕವನ್ನುಂಟುಮಾಡಿದರೆ, ನಾಲಿಗೆಯನ್ನು ಕತ್ತರಿಸಿ ಕೆಲಸದಲ್ಲಿ ಕೈಹಾಕಿರಿ. ಆಗ ನಿಜವಾಗಿಯೂ ಮನಸ್ಸು ಕಾರ್ಯದಲ್ಲಿ ಮಗ್ನವಾಗುವುದು.”

ಇಷ್ಟು ಹೇಳಿ ಭ್ರಮರಬಾಬುವು ಭನ್–ನ್–ನ್ ಎಂದು ಹಾರಿ ಹೋಯಿತು. ಈ ಭ್ರಮರವು ನಿಜವಾದ ಪಂಡಿತನೆಂದು ತಿಳಿದೆನು. ಏಕೆಂದರೆ ಮನುಷ್ಯನಿಗೆ ಪದ (ಪದವಿ) ವೃದ್ಧಿಯಾದರೆ ಅವನು ಮೇಧಾವಿ, ಮತ್ತು ವಿಜ್ಞನೆಂದು ಹೇಳುವರು. ಈ ಕಾರಣದಿಂದ ದ್ವಿಪಾದ ಮನುಷ್ಯರಿಗಿಂತಲೂ ಚತುಷ್ಪಾದ ಪಶುಗಳು ಎಂದರೆ ಪದವೃದ್ಧಿಯನ್ನೈದಿದ ಮನುಷ್ಯರು, ಅಧಿಕ ವಿಜ್ಞರೆಂದು ತಿಳಿಯಬೇಕು. ಈ ಭ್ರಮರಕ್ಕೆ ಎರಡಲ್ಲ, ನಾಲ್ಕಲ್ಲ, ಆರು ಪದಗಳಿವೆ! ನಿಜವಾಗಿಯೂ ಅದು ದೊಡ್ಡ ಪಂಡಿತನೂ, ಚತುರನೂ ಆಗಿರಬೇಕು. ಇಲ್ಲವಾದರೆ ಇದಕ್ಕೆ ಇಂಥ ಅಸಾಮಾನ್ಯವಾದ ಪದವೃದ್ಧಿಯು ಹೇಗಾಗಬೇಕು? ಇಂಥಾ ಪಂಡಿತ ಪ್ರಾಣಿಯ ಅಭಿಪ್ರಾಯವನ್ನು ಅನಾದರ ಮಾಡುವುದು ಹೇಗೆ? ಆದುದರಿಂದ ನಾನು ಇಂದು ನನ್ನ ಭನ್ ಭನ್ ರೋದನವನ್ನು ಸ್ವಲ್ಪ ಕಡಿಮೆ ಮಾಡುವೆನು. ಆದರೆ ಮಧುಸಂಗ್ರಹದ ಆಶೆಯೇನೊ ಆಗಿದೆ. ಭಾರತ ದರ್ಶನರೂಪವಾದ ಪುಷ್ಪದಿಂದ ಅಹಿಫೇನ (ಅಫೀಮು) ರೂಪವಾದ ಮಧುವು ಸಿಕ್ಕಬಹುದು ಎಂಬ ಆಶೆಯಿಂದ ಪ್ರಾಣಧಾರಣೆ ಮಾಡಿರುವ, ನಾನು, ತಮ್ಮ ಆಜ್ಞಾಧಿಕಾರಿ,

— ಶ್ರೀ ಕಮಲಾಕಾಂತ ಚಕ್ರವರ್ತಿ.

# ೪. ಮುದಿವಯಸ್ಸಿನ ಕಥೆ

**ಸಂಪಾದಕ ಮಹಾಶಯ,**

ಅಫೀಮು ಬಾದು ಸೇರಲಿಲ್ಲ, ಬಹು ಕಷ್ಟವಾಗಿದೆ. ಇಂದು ಬರೆದಿರುವ ಈ ಲೇಖನವನ್ನು ವಿಸ್ಫಾರಿತಲೋಚನನಾಗಿ ಬರೆದಿರುವೆನು. ನಿಜವಾದ ಬುದ್ಧಿಯಿಂದ ಅಥವಾ ಅಹಿಫೇನ ಪ್ರಸಾದದಿಂದ ಅಲ್ಲ. ಇಂದು ನನ್ನ ಮನಸದಲ್ಲಡಗಿರುವ ದುಃಖದ ಕಥೆಯನ್ನು ಬರೆಯುತ್ತೇನೆ.

ಮುದಿವಯಸ್ಸಿನ ಕಥೆಯನ್ನು ಬರೀತೇನೆ ಬರೀತೇನೆ ಅಂತಲೆ ಇದ್ದೇನೆ. ಆದರೆ ಬರೆಯಲಾರದವನಾಗಿದ್ದೇನೆ. ನನ್ನ ಈ ದಾರುಣ ಅಥವಾ ಕರುಣ ಕಥೆಯು ನನಗೆ ಬಹು ಪ್ರಿಯವಾದ್ದು. ಏಕೆಂದರೆ ನನ್ನ ಈ ಮರ್ಮಾಂತಿಕ ದುಃಖದ ಪರಿಚಯವು ಬೇರೆಯವರಿಗೂ ಚೆನ್ನಾಗಿ ರುಚಿಸಬಲ್ಲದು ಎಂಬುದೇ ಕಾರಣ. ಆದರೆ ಈ ಮಾತನ್ನು ನಾನು ಬರೆದರೆ ಓದುವವರಾರು ? ಈಗ ಯುವಕರಾದವರೇ ಓದುವವರು, ಬರೆಯುವವರು. ಮುದುಕರು ಏನೂ ಓದುವುದೂ ಇಲ್ಲ, ಬರೆಯುವುದೂ ಇಲ್ಲ. ನನ್ನ ಈ ಮುದಿವಯಸ್ಸಿನ ಕಥೆಯನ್ನು ಓದುವವರೆ ಸಿಕ್ಕಲಾರರೆಂದು ಭಾಸವಾಗುತ್ತಿದೆ.

ಆದ್ದರಿಂದಲೆ ನಾನು ಮುದಿವಯಸ್ಸಿನ ಕಥೆಯನ್ನು ಚೆನ್ನಾಗಿ ಬರೆಯಲಾರದವನಾಗಿದ್ದೇನೆ. ವೈತರಣಿ ನದಿಯ—(ಯಮಲೋಕದ ಒಂದು ಭಯಾನಕದ ನದಿ)—ತರಂಗತಾಡಿತ ಅಂತಿಮ ಜೀವನ ಸೋಪಾನದ ಮೇಲೆ ಈಗಲೆ ಕಾಲಿಟ್ಟಿಲ್ಲ. ಅದನ್ನು ದಾಟಲು ಇಂದೇ ಪ್ರಯತ್ನಿಸಬೇಕಾದ ಪ್ರಮೇಯವೂ ಇಲ್ಲ. ಆ ದಿನವು ಇನ್ನೂ ಬಹು ದೂರವಾಗಿದೆ ಎಂದು ನನಗೆ ಭರವಸೆ ಇದೆ. ಯೌವನದ ಮೇಲೆ ನನ್ನ ಹಕ್ಕು ಬಾಧ್ಯತೆಗಳಾವುವೂ ಇಲ್ಲ. ಅದರ ಕಾಲವೂ ಪೂರೈಸಿದೆ. ಒಂದು ರೀತಿಯಿಂದ ಅದರ ಕಾಲವು ಅತೀತವಾಗಿದ್ದರೂ ಅದರ ಆದಾಯದಲ್ಲಿ ಉಳಿತಾಯದ ಬಾಕಿ ವಸೂಲಿ ಇನ್ನೂ ಆಗಿಲ್ಲ. ಅದಕ್ಕಾಗಿ ಸ್ವಲ್ಪ ಜಗಳಕ್ಕಾರಂಭವಾಗಿದೆ. ಅದಕ್ಕಾಗಿ ನಾನಿನ್ನೂ ಯೌವನದಿಂದ ಪೂರ್ಣ ಬಿಡುಗಡೆ ಹೊಂದಿಲ್ಲ. ಅದರ ಮೇಲೆ

ಮಹಾಜನರ ಬಾಯೂ ಇದೆ. ಅನಾವೃಷ್ಟಿ ಕಾಲದಲ್ಲಿ - ಬರಗಾಲದಲ್ಲಿ - ಹೆಚ್ಚು ಸಾಲಮಾಡಿ ತಿಂದದ್ದಾಯಿತು. ಈಗ ಆ ಋಣವನ್ನು ತೀರಿಸುವುದಕ್ಕೂ ಸಾಧ್ಯವಿಲ್ಲ. ಈ ಋಣಸಾಗರದಿಂದ ಪಾರುಮಾಡಿಸುವ ಅಂಬಿಗನಿಗಾದರೂ ಕೊಡಲು ಏನಾದರೂ ಸಂಗ್ರಹ ಮಾಡಬೇಕಾಗಿದೆ. ನಾನು ಈ ದುಃಖ ಸಮಯದ ಕಥೆಯನ್ನು ಹೇಳಿದರೆ ನೀವು ಯೌವನದ ಸುಖವನ್ನು ಬಿಟ್ಟು ಒಂದು ಸಲ ಇದಕ್ಕೆ ಕಿವಿಗೊಡುವಿರಾ ?

ಮೊದಲು ಒಂದು ಅಸಲು ಮಾತಿನ ನಿರ್ಣಯವಾಗಬೇಕು. ನಾನು ಮುದುಕನಾಗಿದ್ದೇನೊ ? ಕೇವಲ ನನಗೋಸ್ಕರವಾಗಿ ನಾನು ಈ ಪ್ರಶ್ನೆಯನ್ನು ಎತ್ತಿಲ್ಲ. ನಾನು ಮುದುಕನೆ ಆಗಲಿ, ಯುವಕನೆ ಆಗಲಿ–ಅಂತೂ ಎರಡರಲ್ಲಿ ಒಂದು ಆಗಿದ್ದೇನೆ ಎಂದು ಒಪ್ಪಿಕೊಳ್ಳಲು ಸಿದ್ಧನಾಗಿದ್ದೇನೆ. ಆದರೆ ನನ್ನಂತೆಯೆ ಯಾರ ಅವಸ್ಥೆಯು ಪರದಾಟದಲ್ಲಿ ಸಿಕ್ಕಿಕೊಂಡಿದೆಯೊ, ಯಾರ ಯೌವನ ಸೂರ್ಯನು ಅಸ್ತನಾಗಿರುವನೊ ಅಂತಹರನ್ನು ಕುರಿತು "ನೀವು ಮುದುಕರಾಗಿದ್ದೀರಾ ?" ಎಂದು ಪ್ರಶ್ನಿಸುವೆನು. ಅಥವಾ ನಿಮ್ಮ ಕೇಶರಾಶಿಯು ಭ್ರಮರದಂತೆ ಕಪ್ಪಾಗಿರಬಹುದು, - ಹಲ್ಲುಗಳು ಮುತ್ತಿನ ಸರವನ್ನು ನಾಚಿಸುವಂತಿರಬಹುದು, ನೀವು ಎರಡನೆಯ ಸಲ ಲಗ್ನ ಮಾಡಿಕೊಂಡ ಹೆಂಡತಿಯು ಬಂದು ಎಬ್ಬಿಸಿದರೂ ಎಚ್ಚರವಾಗದಷ್ಟು ನಿದ್ರೆ ಬರುತ್ತಿರಬಹುದು ನಿಮಗೆ; ಆದರೂ ನೀವು ವಯಸ್ಸಾದವರು, ಮುದುಕರು ! ಅಥವಾ ನಿಮ್ಮ ಕೂದಲು ಗಂಗಾ ಯಮುನೆ ಸಂಗಮವಾದಂತಾಗಿ, ದಂತ ಮುಕ್ತಾವಳಿಯು ಶಿಥಿಲವಾಗಿ ಮಧ್ಯೆ ಒಂದೆರಡು ಹಲ್ಲುಗಳು ಕಳಚಿ ಬಿದ್ದಿದ್ದರೂ, ನಿದ್ದೆಯು ಕಣ್ಣು ಮುಚ್ಚಲು ಒಂದು ವಿಡಂಬನ ಮಾತ್ರವಾಗಿದ್ದರೂ, ನೀವು ಯುವಕರೆಂದುಕೊಳ್ಳುವಿರಿ. ಇದಕ್ಕೆ ಅರ್ಥ – "ಮನುಷ್ಯ ವಯಸ್ಸಿನಿಂದ ವಿಜ್ಞನಾಗುವುದಿಲ್ಲ, ಜ್ಞಾನದಿಂದ ವಿಜ್ಞನೆನಿಸುವನು" ಎಂದು ನೀವು ಹೇಳಬಹುದು. ಅದು ಹಾಗಲ್ಲ. ನಾನು ಹೇಳುತ್ತಿರುವುದು ವಿಜ್ಞತೆಯ ವಿಚಾರವಲ್ಲ, ವಯಸ್ಸಿನ ಪ್ರಾಚೀನತೆಯ ಎಂದರೆ ಮುದಿತನದ ವಿಚಾರ. ಮುದಿತನವು ವಯಸ್ಸಿನ ಫಲ, ಮತ್ತೇತರದೂ ಅಲ್ಲ. ಶರೀರದ ಸಪ್ತ ಧಾತುಗಳಲ್ಲಿ ಸ್ವಲ್ಪ ಬದಲಾವಣೆಯಾಗುವುದು. ಕೆಲವರು ನಲವತ್ತಕ್ಕೆ ಮುದುಕನೆಂದುಕೊಳ್ಳುವರು, ಕೆಲವರು ೮೦ನೆಯ

ವಯಸ್ಸಿನಲ್ಲಿ ನಾವು ಯುವಕರೆಂದುಕೊಳ್ಳುವರು. ವಯಸ್ಸಿನಿಂದ ಹೆಚ್ಚು ಭೇದವು ಘಟಿಸುವುದಿಲ್ಲ. ೩೦-೩೫ ವಯಸ್ಸಿಗೆ ಮುದುಕರಾದೆವೆಂದು ಹೇಳಿಕೊಳ್ಳುವವರು ತಮ್ಮ ವಿಜ್ಞತೆಯನ್ನು ಪ್ರಕಟಿಸಿಕೊಳ್ಳುವ ಪ್ರಯತ್ನ ದಲ್ಲಿರಬಹುದು, ಅಥವಾ ಅವರು ಚಿರರೋಗಿಗಳೊ, ದೊಡ್ಡ ದುಃಖದಲ್ಲಿ ಮುಳಗಿರುವವರೊ ಆಗಿರಬೇಕು. ಹಾಗೆಯೆ ೪೫ ವಯಸ್ಸಿನಲ್ಲಿ ತಾವು ಯುವಕರೆಂದು ಹೇಳಿಕೊಳ್ಳುವವರು ಯಮರಾಜನ ಭೀತಿಯಿಂದ ದೂರ ವಾಗಿರಲು ಹಾಗೆ ಹೇಳಿಕೊಳ್ಳುತ್ತಿರಬಹುದು ಅಥವಾ ಯಾವುದೊ ೧೬ ವರು ಷದ ಹುಡುಗಿಯೊಂದಿಗೆ ಅವರ ಮೂರನೆಯ ಮದುವೆ ಆಗಿರಬಹುದು.

ಆದರೆ ಬಾಳಿನ ಈ ನಡುದಾರಿಗೆ ಒಂದು, ಕೈಯ್ಯಲ್ಲಿ ಕನ್ನಡಕ (ಸುಲೋಚನಾ, ಚಷ್ಮಾ) ಹಾಕಿಕೊಂಡು, ಟವಲಿನಿಂದ ತಲೆಯ ಬೆವರನ್ನು ಒರಸಿಕೊಳ್ಳುತ್ತ, "ನಾನು ಮುದುಕನಾಗಿದ್ದೇನೊ ಇಲ್ಲವೊ" ಎಂಬುದನ್ನು ತೋರಿಸುವುದು ಕಠಿಣ. ಆಗಿದ್ದರೂ ಆಗಿರಬಹುದು ಅಥವಾ ಇನ್ನೂ ಆಗಿರದೆಯೂ ಇರಬಹುದು. ಕಣ್ಣು ಸರಿಯಾಗಿ ಕಾಣದಂತಾಗಿದೆ, ಕೂದಲು ಪೂರ್ತಿ ನರೆತಿಲ್ಲ, ಆದ್ದರಿಂದ ನೀನಿನ್ನೂ ಪ್ರಾಚೀನ - ಮುದುಕ - ಹಳಬನಾಗಿಲ್ಲ ಎಂದು ಹೇಳುತ್ತಿದೆ. ಏಕೆಂದರೆ - ಯಾವುದೂ ಪ್ರಾಚೀನ ವಾಗಿಲ್ಲ, ಹಳೆಯದಾಗಿಲ್ಲ. ಈ ಪ್ರಾಚೀನ ಭುವನಮಂಡಲವು ಈಗಲೂ ನವೀನವಾಗಿಯೆ ಇಲ್ಲವೆ? ನಮ್ಮ ಪ್ರಿಯ ಕೋಗಿಲೆಯ ಸ್ವರವು ಪ್ರಾಚೀನ ವಾಗಿಲ್ಲ, ನಿತ್ಯ ನವೀನವಾಗಿದೆ. ಗಂಗಾನದಿಯ ಸುಂದರವಾದ ಚಂಚಲವಾದ ಸೂರ್ಯ ಕಿರಣಗಳಿಂದ ಪ್ರಕಾಶಿಸುತ್ತಿರುವ ಸಣ್ಣ ಸಣ್ಣ ಅಲೆಗಳು ಪ್ರಾಚೀನವಾಗಿಲ್ಲ. ಪ್ರಾತಃಕಾಲದ ಶೀತಲ ಸುಗಂಧಪೂರಿತ ಮಂದಮಾರು ತವು, ಬಕುಲ ಕಾಮಿನಿ ಚಂಪಕ, ಮಲ್ಲಿಕಾ, ಜಾಜಿ ಮೊದಲಾದ ಪುಷ್ಪಗಳ ಸುಗಂಧವು, ವೃಕ್ಷಗಳ ಶ್ಯಾಮಲತೆಯು, ಮತ್ತೆ ನಕ್ಷತ್ರಗಳ ಉಜ್ವಲತೆಯು— ಇದಾವುದೂ ಇನ್ನೂ ಪ್ರಾಚೀನ - ಪುರಾತನ - ವಾಗಿಲ್ಲ; ಎಲ್ಲವೂ ಉಜ್ವಲ ವಾಗಿ, ಕೋಮಲವಾಗಿ, ಸುಂದರವಾಗಿವೆ. ಕೇವಲ ನಾನು ಮಾತ್ರ ಪ್ರಾಚೀನ ನಾದೆನೆ? ನಾನು ಈ ಮಾತು ನಂಬಲಾರೆ. ಪೃಥ್ವಿಯಲ್ಲಿ ಉಚ್ಚ ಹಾಸ್ಯವು ಇನ್ನೂ ತಾಂಡವಾಡುತ್ತಿದೆ. ಕೇವಲ ನಾನು ನಗುವ ದಿನಗಳು ಗತಿಸಿದವೆ? ಪೃಥ್ವಿಯಲ್ಲಿ ಉತ್ಸಾಹ, ಕ್ರೀಡೆ, ವಿನೋದಾದಿಗಳಿಗೆ ಈಗಲೂ ಮಿತಿಯಿಲ್ಲ

ದಂತೆ ಕಂಡುಬರುತ್ತವೆ. ಅವು ಕೇವಲ ನನಗೆ ಮಾತ್ರ ಇಲ್ಲವೆ? ಜಗತ್ತು ಪ್ರಕಾಶಪೂರ್ಣವಾಗಿದೆ. ಕೇವಲ ನನಗಾಗಿ ಮಾತ್ರ ಅಂಧಕಾರಮಯವಾದ ರಾತ್ರಿ ಬಂದಿದೆಯೆ? ಸಾಲೋಮನ್, ಕಂಪನಿಯ ಮೇಲೆ ಸಿಡಿಲು ಬೀಳಲಿ! ನಾನು ಈ ಕನ್ನಡಕವನ್ನು ಮುರಿದುಹಾಕುವೆನು. ನಾನು ಮುದಿವಯಸ್ಸನ್ನು ಸ್ವೀಕರಿಸುವುದಿಲ್ಲ!

ನಾನು ಒಪ್ಪಿಕೊಳ್ಳಲಿ, ಒಪ್ಪಿಕೊಳ್ಳದಿರಲಿ, ಮುದಿತನವು ನನ್ನ ಮಾತಿಗೆ ಕಿವಿಗೊಡದು, ಮೆಲ್ಲ ಮೆಲ್ಲಗೆ, ಪ್ರತಿದಿನ, ಪ್ರತಿ ಘಳಿಗೆ, ವಯಸ್ಸೆಂಬ ಚೋರನು ಬಂದು ಈ ದೇಹಪುರವನ್ನು ಪ್ರವೇಶಿಸುತ್ತಿರುವನು. ನಾನು ಎಷ್ಟು ದೂರಕ್ಕೋಡಿದರೂ ಅವನು ನನ್ನ ಬೆನ್ನು ಬಿಡುವುದಿಲ್ಲ. ನಾನು ಮುದುಕನಾಗಿಲ್ಲ ಎಂದು ಎಷ್ಟು ಸಲ ಹೇಳಿದರೂ,–"ನಾನು ಮುದುಕನಾಗುತ್ತಿದ್ದೇನೆ" ಎಂಬ ಅನುಭವವು ನನಗೆ ಪ್ರತಿ ನಿಮಿಶದಲ್ಲಿಯೂ ಆಗುತ್ತಿದೆ. ಜನರು ನಗುತ್ತಿದ್ದಾರೆ. ನಾನು ಕೇವಲ ಅವರ ಮನಸ್ಸಂತೋಷಪಡಿಸುವುದಕ್ಕಾಗಿ ಅವರೊಂದಿಗೆ ನಗುವೆನು. ಅನ್ಯರ ದುಃಖದಲ್ಲಿ ನಾನೂ ಭಾಗಿಯಾಗಿದ್ದೇನೆ ಎಂಬ ಭಾವವನ್ನು ಕೇವಲ ಲೋಕಲಜ್ಜೆಗಾಗಿ ಮುಖದಲ್ಲಿ ತೋರಿಕೊಳ್ಳುವೆನು. ಇದನ್ನೆಲ್ಲ ನೋಡಿ ಅವರು ನಾನಿನ್ನೂ ಮುದುಕನಾಗಿಲ್ಲ ಎಂದು ತಿಳಿಯಲಿ ಎಂಬ ಭಾವನೆಯಿಂದ, ಕಾಲಹರಣ ಮಾಡುವುದಕ್ಕಾಗಿ, ಇದೆಲ್ಲ ಮಾಡುವುದು. ನನ್ನಲ್ಲಿ ಉತ್ಸಾಹವೇ ಕುಗ್ಗಿದೆ, ಆಸೆ ಇದೆ–ಅದು ನನ್ನ ಆತ್ಮಕ್ಕೆ ಮೋಸಮಾಡುವುದು ಎಂದು ನಾನು ತಿಳಿದಿದ್ದೇನೆ. ಈಗ ನನ್ನಲ್ಲಿ ಉತ್ಸಾಹ, ಆಸೆ, ಭರವಸೆ–ಯಾವುದೂ ಇಲ್ಲ. ಅವೆಲ್ಲ ದೂರವಾಗಿವೆ. ಯಾವುದು ಹತ್ತಿರ ಇಲ್ಲವೊ ಅದಕ್ಕಾಗಿ ಹುಡುಕುವ ಅವಶ್ಯಕತೆಯೂ ಇಲ್ಲ.

ಹುಡುಕಿದರೆ ಸಿಕ್ಕುವುದೇನು? ಯಾವ ಕುಸುಮದಾಮ ಈ ಜೀವನ ಕಾನನವನ್ನು ಶೋಭಾಯಮಾನಗೊಳಿಸಿತ್ತೊ ಅದು ಈಗ ಒಂದೊಂದಾಗಿ ದಾರಿಯ ಮಗ್ಗುಲಲ್ಲಿ ಬಿದ್ದುಹೋಗಿದೆ. ಯಾವ ನನ್ನ ಮುಖಮಂಡಲವು ಸದಾಪ್ರಫುಲ್ಲಿತವಾಗಿ ನನ್ನ ಪ್ರೀತಿಗೆ ಪಾತ್ರವಾಗಿತ್ತೊ, ಆ ಮುಖ ಕಮಲದಿಂದ ಎಲ್ಲ ಲಕ್ಷಣಗಳೂ ಒಂದೊಂದಾಗಿ ಅದೃಶ್ಯವಾಗುತ್ತಿವೆ, ಇಲ್ಲವೆ ಬೇಸಿಗೆಯ ಬೆವರಿನಲ್ಲಿ ಮಿಂದು ಮಲಿನವಾಗಿರುವ ಪುಷ್ಪದಂತೆ ಬಾಡಲಾರಂಭಿಸಿದೆ.

ಈ ಭಗ್ನ ಮಂದಿರದಲ್ಲಿ, ಈ ನಿರ್ಜನ ನಾಟ್ಯ ಶಾಲೆಯಲ್ಲಿ, ಈ ಚದರಿದ ಸಭಾ ಮಂದಿರದಲ್ಲಿ ಉರಿಯುತ್ತಲಿದ್ದ ದೀಪಮಾಲೆಯು ಎಲ್ಲಿ ಹೋಯಿತು? ಎಲ್ಲ ದೀಪಗಳೂ ಒಂದೊಂದಾಗಿ ನಂದುತ್ತಲಿವೆ. ಕೇವಲ ಮುಖ ಅಲ್ಲ– ಸರಳ ಸ್ನೇಹ ಪೂರ್ಣವೂ, ವಿಶ್ವಾಸದಲ್ಲಿ ದೃಢವೂ, ಸೌಹಾರ್ದದಲ್ಲಿ ಸ್ಥಿರವೂ, ಅಪರಾಧವನ್ನೆಸಗಿದವರಲ್ಲಿಯೂ ಪ್ರಸನ್ನವೂ ಆಗಿರುತ್ತಿದ್ದ ಆ ಬಂಧು ಹೃದಯವುಈಗ ಎಲ್ಲಿದೆ? ಇಲ್ಲ! ಅದು ಯಾರ ದೋಷದಿಂದ ಇಲ್ಲ ವಾಯಿತು? ಇದರಲ್ಲಿ ನನ್ನ ದೋಷವೂ ಇಲ್ಲ, ಬಂಧುಗಳ ದೋಷವೂ ಇಲ್ಲ. ವಯಸ್ಸಿನ ಅಥವಾ ಯಮರಾಜನ ದೋಷವಿದು.

ಇದರಿಂದ ಹಾನಿ ಏನು? ಒಂಟಿಯಾಗಿ ಬಂದೆ, ಒಂಟಿಯಾಗಿ ಹೋಗುತ್ತೇನೆ. ಅದಕ್ಕೆ ಚಿಂತೆ ಏಕೆ? ಅಸಂಖ್ಯ ಜೀವ ಪರಿಪೂರ್ಣವಾದ ಸಂಸಾರದಲ್ಲಿ ನಾನು ಸೇರಿಕೊಳ್ಳಲಾಗಲಿಲ್ಲ. ಒಳ್ಳೆಯದು - ಹೊರಡುವೆನು! ಹೇ ಪೃಥ್ವಿ! ನೀನು ನಿನ್ನ ನಿಯಮಿತ ಪಥದಲ್ಲಿ (ಕಕ್ಷದಲ್ಲಿ) ಸುತ್ತುತ್ತಿರು. ನಾನೂ ನನ್ನ ಮನಸ್ಸು ಬಂದೆಡೆಗೆ ಹೋಗುವೆನು. ನಿನ್ನ ನನ್ನ ಸಂಬಂಧವು ಕಡಿದು ಹೋಗುವುದು, ಆದರಿಂದ - ಹೇ ಮೃಣ್ಮಯಿ! ಹೇ ಜಡಪಿಂಡ ಗೌರವಪೀಡಿತ ವಸುಂಧರೆ! - ನಿನಗಾಗುವ ಹಾನಿ ಏನು? ನನಗಾಗುವ ಹಾನಿ ತಾನೆ ಏನು? ನೀನು ಅನಂತ ಕಾಲದವರೆಗೆ ಶೂನ್ಯ ಪಥದಲ್ಲಿ ಸುತ್ತುತ್ತಿರುವೆ. ಇನ್ನು ಕೊಂಚ ದಿನ ನಾನು ನಿನ್ನ ಅತಿಥಿಯಾಗಿರುವೆನು. ಅನಂತರ ನಿನ್ನ ಆವರಣವನ್ನು ಬಿಟ್ಟು, ಯಾರ ಹತ್ತಿರ ಪರಮಶಾಂತಿ ಸಿಕ್ಕುವುದೊ, ಎಲ್ಲಿ ಎಲ್ಲ ಜ್ವಾಲೆಗಳೂ ನಿವಾರಣೆಯಾಗುವವೊ, ಅವನ ಹತ್ತಿರ ಹೋಗುವೆನು.

ಒಂದು ರೀತಿಯಲ್ಲಿ ನಾನು ಮುದಿವಯಸ್ಸಿನಲ್ಲಿರುವೆನೆಂದು ಇದರಿಂದ ಸಿದ್ಧವಾದಹಾಗಾಯಿತು. ಇನ್ನು ನನ್ನ ಕರ್ತವ್ಯವೇನು? "ಪಂಚಶೋರ್ಧ್ವೇ ವನಂ ವ್ರಜೇತ್" ಎಂದರೆ ಐವತ್ತಾದ ಮೇಲೆ ವನಕ್ಕೆ ಹೋಗಬೇಕು ಎಂದು ಯಾರೊ ಮೂರ್ಖ ಪಂಡಿತನು ಬರೆದಿದ್ದಾನೆ. ಈಗಿನ ಕಾಲದಲ್ಲಿ ವನ ಎಲ್ಲಿದೆ? ಈ ವಯಸ್ಸಿನಲ್ಲಿ ಭವ್ಯ ಭವನಗಳಿಂದ, ಜನಸಾಂದ್ರತೆಯಿಂದ, ದೊಡ್ಡ ದೊಡ್ಡ ರಸ್ತೆಗಳಿಂದಲಂಕೃತವಾಗಿರುವ ನಗರವೆ ಅರಣ್ಯ! ಹೇ ನವಯುವಕಗಣ! ನಿಮ್ಮ ನನ್ನ ಸಂಬಧದಲ್ಲಿ ಸಹೃದಯತೆ ಇಲ್ಲ.

ನಿಮ್ಮ ಹೃದಯವು ನನ್ನ ಹೃದಯದೊಂದಿಗೆ ಸೇರುತ್ತಿಲ್ಲ. ಏನಾದರೂ ವಿಪತ್ತು ಸಂಭವಿಸಿದಾಗ ನಿಮ್ಮಲ್ಲಿ ಯಾರಾದರೂ ನನ್ನ ಬಳಿಗೆ ಬಂದು "ಏನಯ್ಯ ಮುದುಕ! ನೀನು ಅನೇಕ ದುಃಖ-ಕಷ್ಟಗಳನ್ನು ಕಂಡಿದ್ದೀಯೆ. ನನಗೆ ಒದಗಿರುವ ಈ ಕಷ್ಟ ಸಮಯದಲ್ಲಿ ನಾನು ಏನು ಮಾಡಬೇಕೆಂದು ಹೇಳಯ್ಯ!" ಎಂದು ನನ್ನನ್ನು ಕೇಳಬಹುದು. ಆದರೆ ನೀವು ಸಂಪತ್ತಿನ ಸುಪ್ಪತ್ತಿಗೆಯಲ್ಲಿರುವಾಗ, "ಮುದುಕಯ್ಯ! ಇಂದು ನಮ್ಮ ಆನಂದದ ದಿನ. ನೀನೂ ಬಂದು ನಮ್ಮೊಂದಿಗೆ ಸೇರಿ ನಮ್ಮ ಸಂತೋಷವನ್ನು ಹೆಚ್ಚಿಸಬೇಕು" ಎಂದು ನೀವ್ಯಾರೂ ಹೇಳುವುದಿಲ್ಲ. ಅದಕ್ಕೆ ಬದಲಾಗಿ ನೀವು ಸಂತೋಷ ವಿನೋದಗಳಿಂದ ನಲಿಯುತ್ತಿರುವ ವಯಸ್ಸಿನಲ್ಲಿ, ಈ ಮುದಿಗೂಬೆಗೆ ನಮ್ಮ ವಿಚಾರವು ತಿಳಿಯಕೂಡದು" ಎಂದು ಗುಟ್ಟಾಗಿರಲೆತ್ನಿಸುವಿರಿ. ಇನು ಅರಣ್ಯದಲ್ಲಿ ಇದಕ್ಕಿಂತ ಹೆಚ್ಚಿನದೇನಿದೆ?

ಹೇ ಪ್ರೌಢ ಪಾಠಕರೆ! ನೀವು ಮೊದಲು ಸ್ನೇಹದ ಪ್ರತ್ಯಾಶೆಯನ್ನಿಟ್ಟು ಕೊಂಡಿದ್ದಿರಿ. ಈಗ ನೀವು ಭಯ ಭಕ್ತಿಗೆ ಪಾತ್ರರಾಗಿದ್ದೀರಿ. ಯಾವ ಪುತ್ರನು ನಿಮ್ಮ ಯೌವನ ಕಾಲದಲ್ಲಿ, ತನ್ನ ಶೈಶವಕಾಲದಲ್ಲಿ, ನಿಮ್ಮ ಜತೆಯಲ್ಲಿ ನಿಮ್ಮ ಹಾಸಿಗೆಯಲ್ಲಿ ಮಲಗಿ, ಅರೆ ನಿದ್ರೆಯ ಅವಸ್ಥೆಯಲ್ಲಿ ತನ್ನ ಪುಟ್ಟ ಪುಟ್ಟ ಕೈಗಳನ್ನು ನಿಮ್ಮ ಮೈ ಮೇಲೆ ಆಡಿಸಿ ನೀವು ಅವನನ್ನು ಬಿಟ್ಟು ಹೋಗಿಲ್ಲವೆಂದು ದೃಢಮಾಡಿಕೊಳ್ಳುತ್ತಿದನೊ, ಅವನು ಇಂದು ನಿಮ್ಮಿಂದ ದೂರನಾಗಿ, "ತಂದೆಯವರು ಹೇಗಿದ್ದಾರೆ?" ಎಂದು ಬೇರೆ ಯವರಿಂದ ನಿಮ್ಮ ಕ್ಷೇಮಸಮಾಚಾರವನ್ನು ತಿಳಿದುಕೊಳ್ಳುವನು! ಪರರ ಮಕ್ಕಳನ್ನು ನೋಡಿ ಅವರ ಸೌಂದರ್ಯಕ್ಕೆ ಮುಗ್ಧರಾಗಿ ನೀವು ಯಾರನು ಎತ್ತಿ, ತೊಡೆಯ ಮೇಲೆ ಕೂಡಿಸಿಕೊಂಡು ಮುದ್ದಾಡುತ್ತಿದ್ದಿರೊ, ಆ ಮಕ್ಕಳು ಇಂದು ಯುವಕರಾಗಿದ್ದಾರೆ. ಅವರು ಈಗ ಕಾಂತಿಹೀನರಾಗಿ, ಮಹಾ ಪಾಪಿಷ್ಠರಾಗಿ, ಪೃಥ್ವಿಯಲ್ಲಿ ಪಾಪದ ಹೊರೆಯನ್ನು ಹೆಚ್ಚಿಸುತ್ತಿದ್ದಾರೆ. ಇಂದು ಅವರು ನಿಮಗೆ ಶತ್ರುಗಳಾಗಿಯೂ ಇರಬಹುದು. ಇದನ್ನು ಕಂಡು ನೀವು "ಇವನನ್ನು ನನ್ನ ತೊಡೆಯ ಮೇಲೆ ಕೂಡಿಸಿಕೊಂಡು ಆಡಿಸುತ್ತಿದ್ದೆನಲ್ಲ" ಎಂದು ಅಳುತ್ತ ಹೇಳಬಹುದು. ನೀವು ಯಾರನ್ನು ನಿಮ್ಮ ತೊಡೆಯ ಮೇಲೆ ಕೂಡಿಸಿಕೊಂಡು 'ಶ್ರೀ ಓನಾಮ'ವನ್ನು ಕಲಿಸಿದಿರೊ

ಅವನು ಇಂದು ಒಬ್ಬ ಹೆಸರಾದ ಲೇಖಕ, ಪಂಡಿತ. ಅವನು ಇಂದು ನೀವು ಮೂರ್ಖರೆಂದು ತಿಳಿದು ಹಾಸ್ಯಮಾಡುತ್ತಿದ್ದಾನೆ. ಯಾರನ್ನು ನೀವು ಏನೂ ಅರಿಯದವನೆಂದು ತಿಳಿದು ಪಾಠಶಾಲೆಗೆ ಕಳುಹಿಸಿ ಶಿಕ್ಷಣಕೊಟ್ಟು ಮನುಷ್ಯ ನನ್ನಾಗಿ ಮಾಡಿದಿರೊ, ಅವನೇ ಇಂದು ನಿಮಗೆ ಸಾಲಕೊಟ್ಟು, ಬಡ್ಡಿ ವಸೂಲುಮಾಡುತ್ತ, ನಿಮಗೆ ಪಾಠವನ್ನು ಕಲಿಸುತ್ತಿರುವನು. ಅಂದ ಅವನು ನಿಮಗೆ ಅರಿವಿಲ್ಲದವನಾಗಿದ್ದ. ಇಂದು ನೀವು ಅವನ ದೃಷ್ಟಿಯಲ್ಲಿ ಅರಿವಿಲ್ಲದವರು! ಇನ್ನು ಅರಣ್ಯದಲ್ಲಿ ಬಾಕಿ ಏನಿದೆ?

ಅಂತರ್ಜಗತ್ತನ್ನು ಬಿಟ್ಟು ಬಹಿರ್ಜಗತ್ತಿನ ಕಡೆ ನೋಡಿ. ಅಲ್ಲಿಯೂ ಇದೇ ಹಾಡು! ನೀವು ಎಲ್ಲಿ ಸ್ವಹಸ್ತದಿಂದ ಹೂದೋಟವನ್ನು ನಿರ್ಮಿಸಿ ದ್ದಿರೊ, ಎಲ್ಲಿ ಆರಿಸಿ ಆರಿಸಿ, ಜಾಜಿ, ಮಲ್ಲಿಗೆ, ಗುಲಾಬಿ, ಸೇವಂತಿಗೆ, ಕಾಸ್‌ಮಾಸ್, ಸೈಪ್ರೆಸ್, ಅರಕೇರಿಯಾ ಮೊದಲಾದ ಹೂ ಗಿಡಗಳನ್ನು ನೆಟ್ಟು ನಿಮ್ಮ ಸ್ವಂತ ಕೈಯಿಂದಲೆ ಅವುಗಳ ಪಾತಿಗಳಿಗೆ ನೀರೆರೆದಿದ್ದಿರೊ, ಆ ಹೂದೋಟದ ಅವಸ್ಥೆಯನ್ನು ನೋಡಿ. ಇಂದು ಅದು ಅವರೆಯ ಹೊಲವಾಗಿದೆ. ರೈತ ಕಲ್ಲಯ್ಯನು ಎರಡು ಭಾರಿ ಎತ್ತುಗಳನ್ನು ನೇಗಿಲಿಗೆ ಹೂಡಿ, ಆ ತೋಟವನ್ನು ಉಳುತ್ತಿದ್ದಾನೆ. ಆ ನೇಗಿಲು ನಿಮ್ಮ ಹೃದಯ ಮಧ್ಯದಲ್ಲಿ ಪ್ರವೇಶಿಸುತ್ತಿರಬಹುದಲ್ಲದೆ? ಯೌವನ ಕಾಲದ ಅನೇಕ ಅಪೇಕ್ಷೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ನೀವು ಯಾವ ಮನೆಯನ್ನು ಕಟ್ಟಿದ್ದಿರೊ, ಎಲ್ಲಿ ನೀವು ಮಂಚವನ್ನು ಹಾಕಿಕೊಂಡು, ನಿಮ್ಮ ಪತ್ನಿಯ ಕಣ್ಣುಗಳಿಗೆ ಕಣ್ಣು, ತುಟಿಗೆ ತುಟಿ ಸೇರಿಸಿ ಇಹ ಜೀವನದಲ್ಲೆಂದಿಗೂ ಕೊನೆಗಾಣದ ಪ್ರಣಯದ ಪ್ರಥಮ ಪವಿತ್ರ ಸಂಭಾಷಣೆಯನ್ನು ಮಾಡಿದ್ದಿರೊ ಆ ಸ್ಥಳವನ್ನು ಈಗ ನೋಡಿ! ಆ ಮನೆಯ ಇಟ್ಟಿಗೆಗಳನ್ನೆಲ್ಲ ದಾಮೂ ಘೋಷ್‌ನ ಅಶ್ವಶಾಲೆಗೆ ಬೇಕಾದ ಗಾರೆ ಗಚ್ಚಿಗಾಗಿ ಪುಡಿಮಾಡುತ್ತಿದ್ದಾರೆ. ನಿಮ್ಮ ಮುರಿದ ಮಂಚದ ಕಾಲು, ಪಟ್ಟಿಗಳನ್ನು ಸೀಳಿ, ಕೈಲಾಸಿಯ ತಾಯಿ ಒಲೆಗೆ ಹಾಕಿ ಉರಿಸುತ್ತಿದ್ದಾಳೆ. ಇನ್ನು ಕಾಡಿನಲ್ಲಿ ಹೆಚ್ಚುಕಿಚ್ಚೇನಿರುವುದು?

ಎಲ್ಲ ಜ್ವಾಲೆಗೂ ಮೀರಿದ ಉರಿ ಎಂದರೆ - ಯಾವ ನಾನು ಯೌವನ ಕಾಲದಲ್ಲಿ ಸುಂದರನಾಗಿ ಕಾಣುತ್ತಿದ್ದೆನೊ - ಅದೇ ನಾನು ಇಂದು ಕುರೂಪಿ ಯಂತೆ ಕಾಣುತ್ತಿರುವುದು! ನನ್ನ ಪ್ರಿಯಬಂಧು ದಾಸುಮಿತ್ರನು ತನ್ನ

ಯೌವನದ ರೂಪದಿಂದ ಗರ್ವಿತನಾಗಿ ಸ್ಫೀತಕಂಠದ ಕಪೋತದಂತೆ ಠೇಂಕಾರದಿಂದ ನಡೆಯುತ್ತಿದ್ದನು. ಆಗ ಗಂಗಾ ಘಾಟಿನಲ್ಲಿ ಸ್ನಾನ ಕಾಲದಲ್ಲಿ ಅವನನ್ನು ನೋಡಿದ ಎಷ್ಟೋ ಜನ ರಮಣಿಯರು "ನಮಃ ಶಿವಾಯನಮಃ" ಎಂದು ಶಿವನಿಗೆ ಪುಷ್ಪವನ್ನರ್ಪಿಸುತ್ತ "ದಾಸು ಮಿತ್ರಾಯನಮಃ" ಎಂದು ಹೇಳಿಕೊಳ್ಳುತ್ತಿದ್ದರಂತೆ. ಇಂದು ಅದೇ ದಾಸು ಮಿತ್ರನ ಅವಸ್ಥೆ ಏನಾಗಿದೆ ನೋಡಿ! ಅವನ ಕತ್ತು ಒಣಗಿದ ಮರದಂತೆ ನಿಂತಿದೆ, ಕೂದಲು ನರೆತಿದೆ, ಹಲ್ಲುಗಳು ಬಿದ್ದುಹೋಗಿವೆ, ಚರ್ಮವು ಒಣಗಿ ಕಪ್ಪಾಗಿದೆ, ಶರೀರವು ಕೃಶವಾಗಿದೆ. ಮುಂಚೆ ಅವನ ಯೌವನಕಾಲದಲ್ಲಿ ಬೆಳಗ್ಗೆ ಉಪಾಹಾರಕ್ಕೆ ಅವನಿಗೆ ಒಂದು ಬಾಟಲುಬ್ರಾಂದಿ, ಮೂರುಕೋಳಿ ಬೇಕಾಗುತ್ತಿತ್ತು. ಇಂದು ಅವನು ದೊಡ್ಡ ತಿರುನಾಮವನ್ನು ಹಚ್ಚಿ, ತುಳಸಿಮಾಲೆಯನ್ನು ಹಾಕಿಕೊಂಡು, ಕಾತರನಾಗಿ ಅಲೆದಾಡುತ್ತಿರುತ್ತಾನೆ. ಯಾರಾದರೂ ಅವನ ಊಟದ ಸಮಯದಲ್ಲಿ ಮದ್ಯಮಾಂಸಗಳ ಮಾತು ಎತ್ತಿದರೆ ಅವನು ಅವರ ಕಡೆ ನೀರು ಕುಡಿಯುವ ಲೋಟವನ್ನು ಬಿಸಾಕಿ, ಬೈದು ಓಡಿಸಿಬಿಡುವನು. ಅರಣ್ಯದಲ್ಲಿ ಇದಕ್ಕೂ ಹೆಚ್ಚಿನ ಬದಲಾವಣೆಯಾಗುವುದು ಏನಿದೆ ?

ಗದಾಧರನ ತಾಯಿ ತರಂಗಿಣಿಯನ್ನು ನೋಡಿ! ಅವಳು ಯುವತಿಯಾಗಿದ್ದಾಗ ನನ್ನ ಹೂದೋಟಕ್ಕೆ ಹೂ ಕದಿಯಲು ಬರುತ್ತಿದ್ದಳು. ಆಗ ಅವಳನ್ನು ನೋಡಿದರೆ, ನಂದನ ಕಾನನದಿಂದ ಅರಳಿದ ಹೂ ಕಾಯಿಗಳಿಂದ ತುಂಬಿದ ಪಾರಿಜಾತ ವೃಕ್ಷವನ್ನೆ ಯಾರೊ ಇಲ್ಲಿ ತಂದುಬಿಟ್ಟಿರುವಂತೆ ಕಾಣುತ್ತಿತ್ತು. ತೋಟದ ಗಾಳಿಯು ಅವಳ ಮುಂಗುರುಳಿನೊಂದಿಗೆ ಆಟವಾಡಿ, ಅವಳ ಸೆರಗನ್ನು ಹಿಡಿದು ಗುಲಾಬಿ ಗಿಡದ ಮುಳ್ಳಿಗೆ ಸಿಕ್ಕಿಸಿಬಿಡುತ್ತಿತ್ತು! ಇಂದು ಆ ಗದಾಧರನ ತಾಯಿ ಅವಸ್ಥೆಯನ್ನು ನೋಡಿ! ಏನೇನೊ ಮಾತಾಡಿಕೊಳ್ಳುತ್ತ, ಭತ್ತವನ್ನು ಕುಟ್ಟುತ್ತಿದ್ದಾಳೆ. ಅವಳ ಮಾಸಿದ ಸೀರೆ, ವಿಕಾರವಾದ ಹಲ್ಲು, ಸುಕ್ಕುಗಟ್ಟಿ ಜೋಲುತ್ತಿರುವ ಚರ್ಮ - ಇವು ಅವಳ ಮುಖವನ್ನು ವಿವರ್ಣವಾಗಿ ಮಾಡಿವೆ. ಇಂದು ಅವಳು ದೀರ್ಘಾಂಗಿ, ಕೃಷ್ಣಾಂಗಿ, ಕೃಶಾಂಗಿ, ಪಲಿತ ಕೇಶಗಳು, ಶುಷ್ಕಬಾಹು, ಕರ್ಕಶ ಕಂಠಳು. ಅದೇ ತರಂಗಿಣಿ ಇವಳು. ಅರಣ್ಯದಲ್ಲಿ ಇದಕ್ಕಿಂತ ಹೆಚ್ಚಿನ ಮಾರ್ಪಾಟು ಆಗುವುದೇನಿದೆ ?

ಈಗ ನಾನು ಇರುವುದೇ ವನ, ಬೇರೆ ವನಕ್ಕೆ ಹೋಗುವುದಿಲ್ಲವೆಂಬುದು ಸ್ಥಿರವಾಯಿತು. ಹಾಗಾದರೆ ಏನು ಮಾಡಬೇಕು. ಹಿಂದೂ ಶಾಸ್ತ್ರಾಧೀನ ನಾದ ಕಾಳಿದಾಸ ಕವಿಯು ಸರ್ವಗುಣ ಸಂಪನ್ನರಾದ ರಘುವಂಶದವರಿಗೆ ಮುದಿತನದಲ್ಲಿ ಮುನಿವೃತ್ತಿಯನ್ನು ವಿಧಿಸಿ—'ಶೈಶವೇಽಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಮ್ | ವಾರ್ದ್ಧಕೇ ಮುನಿವೃತ್ತೀನಾಂ ಯೋಗೇನಾನ್ತೇ ತನುತ್ಯಜಾಮ್ ||' ಎಂದು ಬರೆದಿದ್ದಾನೆ. ಕಾಳಿದಾಸನು ೪೦ ವರುಷ ವಯಸ್ಸಾದ ಬಳಿಕ ರಘುವಂಶ ಕಾವ್ಯವನ್ನು ಬರೆಯಲಿಲ್ಲ. ಯೌವನ ಕಾಲದಲ್ಲಿಯೆ ಅದನ್ನು ಬರೆದಿರಬೇಕು, ಮತ್ತೆ ಕುಮಾರ ಸಂಭವ ವನ್ನು ನಲವತ್ತು ವಯಸ್ಸಾದ ಬಳಿಕ ಬರೆದಿರಬೇಕು ಎಂದು ನಾನು ನಿರ್ಧಾರ ವಾಗಿ ಹೇಳಬಲ್ಲೆನು. ಅದನ್ನು ಪ್ರಮಾಣಪೂರ್ವಕವಾಗಿ ತೋರಲು ಅವನ ಎರಡು ಕಾವ್ಯಗಳಿಂದ ಎರಡು ಶ್ಲೋಕಗಳನ್ನು ಎತ್ತಿ ತೋರುವೆನು. ರುಘು ವಂಶದ ಅಜವಿಲಾಪದಲ್ಲಿ ಹೀಗೆ ಹಾಡಿದ್ದಾನೆ—

ಇದಮುಚ್ಛ್ವಸಿತಾಂಕಂ ಮುಖಂ
ತವವಿಶ್ರಾನ್ತಕಥಂ ದುನೋತಿಮಾಮ್ |
ನಿಶಿ ಸುಪ್ತಮಿವೈಕ ಪಂಕಜಂ
ವಿರತಾಭ್ಯನ್ತರ ಷಟ್ಪದಸ್ವನಮ್ ||

ಎಂದರೆ - (ಹೇ ಇನ್ದುಮತಿ) - ವಾಯು ವಶವಾದ ಮುಂಗುರುಳು ಅಲ್ಲಾಡುತ್ತಿದೆ. – ವಾಕ್ಯಹೀನವಾದ ನಿನ್ನ ಈ ಮುಖವು ರಾತ್ರಿ ಕಾಲದಲ್ಲಿ, ಒಳಗೆ ಒಂದು ಭ್ರಮರವನ್ನಿಟ್ಟುಕೊಂಡು ಅದು ಗುಂಜಾರವಮಾಡದಂತೆ ಮುಚ್ಚಿಕೊಂಡಿರುವ ಪದ್ಮದಂತೆ ನನ್ನನ್ನು ವ್ಯಥೆಗೊಳಿಸುತ್ತಿದೆ." ಇದು ನಿಜ ವಾಗಿ ಯೌವನ ಕಾಲದ ರೋದನ.

ಮತ್ತೆ ಕುಮಾರ ಸಂಭವದಲ್ಲಿ ರತಿವಿಲಾಪದಲ್ಲಿ ಕವಿಯು ಹೀಗೆ ಬರೆದಿರುವನು.—

ಗತ ಏವ ನತೇ ನಿವರ್ತತೇ
ಸ ಸಖಾ ದೀಪ ಇವಾನಿಲಾಹತಃ |
ಅಹಮಸ್ಯದಶೇವ ಪಶ್ಯಮಾ–
ಮವಿಸಹ್ಯವ್ಯಸನೇನ ಧೂಮಿತಾಮ್ || –

ಎಂದರೆ (ರತಿಯು ಹೇಳುತ್ತಾಳೆ - ವಸಂತ!) ನಿನ್ನ ಸಖನು (ಕಾಮದೇವನು)ಗಾಳಿಯಿಂದ ಹೊಡೆಯಲ್ಪಟ್ಟದೀಪದಂತೆ ಪರಲೋಕಕ್ಕೆ ಹೋಗಿಯೆ ಬಿಟ್ಟನು. ಇನ್ನು ಹಿಂತಿರುಗನು. ನಾನು ನಂದಿಹೋದ ದೀಪದಂತೆ ಅಸಹ್ಯದಃಖ ರೂಪವಾದ ಧೂಮದಿಂದ ಮಲಿನಳಾಗಿದ್ದೇನೆ.—ಇದು ಮುದಿ ವಯಸ್ಸಿನ ರೋದನ.

ಅದು ಹೋಗಲಿ. ಈಗ ನಾನು ಈ ಮಾತು ಹೇಳುವ ಉದ್ದೇಶ್ಯವೇನೆಂದರೆ, - ಕಾಳಿದಾಸ ಕವಿಯು (ರಘುವಂಶವನ್ನು ಬರೆವಾಗ) ಮುದಿ ವಯಸ್ಸಿನ ಗೌರವವನ್ನು ತಿಳಿದುಕೊಂಡಿದ್ದರೆ, ಮುದುಕರ ಹಣೆಯಲ್ಲಿ ಮುನಿವೃತ್ತಿಯನ್ನು ಬರೆಯುತ್ತಿರಲಿಲ್ಲ – ಎಂದು ಹೇಳುವುದು. ಬಿಸ್ಮಾರ್ಕ್, ಮೊಲ್ಟಕೆ ಮತ್ತು ಫ್ರೆಡ್‌ರಿಕ್ ಮುದುಕರಾಗಿದ್ದರು. ಅವರು ಮುನಿವೃತ್ತಿಯನ್ನು ಅವಲಂಬಿಸಿದ್ದರೆ ಜರ್ಮನ್ ರಾಷ್ಟ್ರೀಯತೆಯ ಕಲ್ಪನೆ ಎಲ್ಲಿರುತ್ತಿತ್ತು? ಟಿಯರ್ - ಮುದಿವಯಸ್ಸಿನ ಟಿಯರ್‌ನು ಮುನಿವೃತ್ತಿಯನ್ನವಲಂಬಿಸಿದ್ದರೆ ಫ್ರಾನ್ಸಿನ ಸ್ವಾತಂತ್ರ್ಯ ಮತ್ತು ಪ್ರಜಾಸತ್ತೆಯ ಸ್ಥಾಪನೆ ಆಗುತ್ತಿತ್ತೆ? ಗ್ಲಾಡ್‌ಸ್ಟನ್ ಮತ್ತು ಡಿಸ್ರೇಲಿ ಮುದುಕರಾಗಿದ್ದರು. ಅವರು ಮುನಿವೃತ್ತಿಯನು ಸ್ವೀಕರಿಸಿದ್ದರೆ ಪಾರ್ಲಿಮೆಂಟಿನ ರಿಫಾರ್ಮ್ ಮತ್ತು ಐರಿಷ್ ಚರ್ಚಿಗಳ ಡಿಸ್ ಎಸ್ಟಾಬ್ಲಿಶ್‌ಮೆಂಟ್ ಆಗುತ್ತಿದ್ದವೆಲ್ಲಿ?

ಮುದಿತನದ ವಯಸ್ಸೇ ನಿಜವಾಗಿ ಕೆಲಸಮಾಡುವ ಸಮಯ. ಅಂತ್ರ (ಕರುಳು) ಮತ್ತು ದಂತಹೀನರಾಗಿ, ದುರ್ಬಲರಾಗಿ ನಾಲ್ಕನೆಯ ಅವಸ್ಥೆಯನ್ನು ಮುಟ್ಟಿರುವ ಮುದುಕರ ಮಾತನ್ನು ನಾನು ಹೇಳುತ್ತಿಲ್ಲ. ಅವರಿಗೆ ಎರಡನೆ ಸಲ ಬಾಲ್ಯಾವಸ್ಥೆ ಬಂದಿರುವುದೆಂದು ತಿಳಿಯಬೇಕು. ಯಾರು ಯುವಕರಲ್ಲವೊ ಮತ್ತು ಇನ್ನೂ ಮುದುಕರಾಗಿಲ್ಲವೊ ಅಂತಹ ಪ್ರೌಢರ ವಿಚಾರವಾಗಿ ನಾನು ಹೇಳುತ್ತಿದ್ದೇನೆ. ಯೌವನ ಕಾಲವು ಕೆಲಸಮಾಡುವ ಸಮಯ ನಿಜ. ಆಗ ಮಾಡುವ ಕೆಲಸ ಚೆನ್ನಾಗಿ ಆಗುವುದಿಲ್ಲ. ಆಗ ಬುದ್ಧಿ ಪಕ್ವವಾಗಿರುವುದಿಲ್ಲ, ಅನುಭವವು ಪೂರ್ಣವಾಗಿರದು, ಮತ್ತೆ ಆಗ ರಾಗ, ದ್ವೇಷ, ಭೋಗಾಸಕ್ತಿ, ಸ್ತ್ರೀಗಣದ ಅನುಸಂಧಾನಗಳು ಹೆಚ್ಚಾಗಿರುವ ಕಾಲ. ಆದ್ದರಿಂದ ಯೌವನಕಾಲದಲ್ಲಿ ಯಾವನೂ ದೊಡ್ಡ, ಮಹತ್ವದ ಕಾರ್ಯವನ್ನು ಮಾಡಲಾಗುವುದಿಲ್ಲ. ಯೌವನದಿಂದ ಅತೀತನಾದ ಮನುಷ್ಯನು

ಬಹುದರ್ಶಿ, ಅನುಭವಿ, ಸ್ಥಿರಬುದ್ಧಿ, ಲಬ್ಧಪ್ರತಿಷ್ಠ ಮತ್ತು ಭೋಗವಾಸನಾ ರಹಿತನಾಗಿರುವುದರಿಂದ, ಅದು ಅವನು ಕಾರ್ಯಮಾಡುವ ಸಮಯ. ಆದ್ದರಿಂದ, "ಈಗ ನಾನು ಮುದುಕ" ಎಂದು ತಿಳಿದುಕೊಂಡು, ಮಾಡುವ ಕೆಲಸವನ್ನು ಬಿಟ್ಟು, ಮುನಿವೃತ್ತಿಯನ್ನು ಕೈಕೊಳ್ಳಬಾರದೆಂದು ನನ್ನ ಸೂಚನೆ. ವಾರ್ಧಕ್ಯದಲ್ಲಿ ಮಹದ್ವಿಷಯಗಳನ್ನು ಚಿಂತಿಸಬೇಕು.

ನೀನು ಈ ಮಾತುಗಳನ್ನೆಲ್ಲ ಹೇಳಬೇಕಾಗಿಲ್ಲ. ಮೈಯಲ್ಲಿ ಬಲವಿರುವಾಗ ಯಾರೂ ಮಾಡುವ ಕೆಲಸವನ್ನು ಮಾಡದೆ ಇರುವುದಿಲ್ಲ. ತಾಯಿಯ ಸ್ತನ್ಯಪಾನದಿಂದ ಪ್ರಾರಂಭವಾಗಿ, ಕೊನೆಗಾಲದ ಉಯಿಲು ಬರೆಯುವವರೆಗೆ ಆಬಾಲ ವೃದ್ಧರೆಲ್ಲ ಕೇವಲ ಕೆಲಸಕಾರ್ಯಗಳ ಚಿಂತೆಯಲ್ಲಿ ಮಗ್ನರಾಗಿರುವರು - ಎಂದು ನೀವು ಹೇಳಬಹುದು. ನಿಜ, ನೀವು ಹೇಳುವುದು ಸತ್ಯ. ಆದರೆ ಕೆಲಸಕಾರ್ಯಗಳಿಗೆ ಮುದುಕರನ್ನು ಸೇರಿಸಿಕೊಳ್ಳಬೇಕೆಂದು ನಾನು ಅಪೇಕ್ಷಿಸುವುದಿಲ್ಲ. ಯೌವನದಲ್ಲಿ ನೀವು ಮಾಡುವ ಕೆಲಸ ನಿಮ್ಮ ಸ್ವಂತಕ್ಕಾಗಿ; ಯೌವನವು ಕಳೆದ ಬಳಿಕ ಮಾಡುವ ಕೆಲಸ ಪರರಿಗಾಗಿ - ಎಂಬುದು ನನ್ನ ಅಭಿಪ್ರಾಯ. ಇಂದಿನವರೆಗೆ ನನ್ನ ಸ್ವಂತ ಕಾರ್ಯವನ್ನೆ ಇನ್ನೂ ಮಾಡಿ ಮುಗಿಸಿಲ್ಲ, ಇನ್ನು ಬೇರೆಯವರಿಗಾಗಿ ಕೆಲಸ ಯಾವಾಗ ಮಾಡಲಿ! - ಎಂಬ ಭಾವನೆಯನ್ನು ನೀವು ಎಂದಿಗೂ ತಿಳಿಯಕೂಡದು. ಮನುಷ್ಯನ ಆಯಸ್ಸನ್ನು ಒಂದು ಲಕ್ಷ ವರುಷಗಳಿಗೆ ಹೆಚ್ಚಿಸಿದರೂ, ನಿಮ್ಮ ಸ್ವಂತ ಕಾರ್ಯವನ್ನು ಮುಗಿಸಲಾಗುವುದಿಲ್ಲ. ಮನುಷ್ಯನ ಸ್ವಾರ್ಥಪರತೆಗೆ ಮಿತಿಯೆ ಇಲ್ಲ, ಅಂತ್ಯವೆ ಇಲ್ಲ. ಆದ್ದರಿಂದ ವಾರ್ಧಕ್ಯದಲ್ಲಿ ನಿಮ್ಮ ಸ್ವಂತ ಕೆಲಸಗಳು ಮುಗಿದವೆಂದು ತಿಳಿದು, ವಿವೇಚನೆಯಿಂದ ಪರಹಿತ ಕಾರ್ಯದಲ್ಲಿ ಆಸಕ್ತರಾಗಿರಿ. ಇದೇ ನಿಜವಾದ ಮುನಿವೃತ್ತಿ. ಕಾಡಿಗೆ ಹೋಗಿ ಚಳಿಗಾಳಿ ಬಿಸಿಲುಗಳಿಗೆ ಮೈ ಒಡ್ಡಿ, ನಿರಾಹಾರದಿಂದ ಶರೀರವನ್ನು ನಾಶಗೊಳಿಸುವುದು ಮುನಿವೃತ್ತಿಯಲ್ಲ. ನೀವು ಯಥಾರ್ಥ ಮುನಿವೃತ್ತಿಯನ್ನು ಅವಲಂಬಿಸಿರಿ.

ವಾರ್ಧಕ್ಯ ಕಾಲದಲ್ಲಿ ಸ್ವಂತ ಕಾರ್ಯದಲ್ಲಿ ಅಥವಾ ಪರಹಿತ ಕಾರ್ಯದಲ್ಲಿ ಮಗ್ನರಾದರೆ, ದೇವರ ಧ್ಯಾನವನ್ನು ಯಾವಾಗ ಮಾಡಬೇಕು ? — ಎಂದು ನೀವು ಕೇಳಬಹುದು. - ಅದಕ್ಕೆ ನನ್ನ ಉತ್ತರವಿದು. ವಾರ್ಧಕ್ಯ

ದಲ್ಲಿಯೆ ಏಕೆ? ಬಾಲ್ಯದಲ್ಲಿಯೆ ಜಗದೀಶ್ವರನನ್ನು ಹೃದಯದಲ್ಲಿ ಸ್ಥಾಪಿಸಿ ಭಜಿಸಿರಿ, ಹೃದಯವನ್ನೆ ಪರಲೋಕವಾಗಿ ಮಾಡಿಕೊಳ್ಳಿ. ಇದಕ್ಕಾಗಿ ವಯಸ್ಸಿನಲ್ಲಿ ಒಂದು ವಿಶಿಷ್ಟ ಅವಸ್ಥೆಯು ಬರಬೇಕಾಗಿಲ್ಲ. ಯಾವ ಕಾರ್ಯವು ಎಲ್ಲಕ್ಕೂ ಮಿಗಿಲಾದದ್ದು ಎನಿಸಿದೆಯೊ ಅದನ್ನು ಮಾಡುವುದಕ್ಕೆ ಮುದಿತನದ ವಯಸ್ಸು ಬರುವವರೆಗೆ ಕಾಯಬೇಕೇಕೆ? ಬಾಲ್ಯ, ಕಿಶೋರ, ಯೌವನ, ವಾರ್ಧಕ್ಯ - ಈ ಎಲ್ಲ ಕಾಲಗಳಲ್ಲೂ ಈಶ್ವರನ ಧ್ಯಾನಮಾಡಿ, ಭಕ್ತಿಭಾವನೆಯಿಂದ ಅವನನ್ನು ಆಶ್ರಯಿಸಿ. ಅದಕ್ಕಾಗಿ ಬೇರೆ ಕೆಲಸಗಳನ್ನು ತಡೆದಿಡುವ ಅಗತ್ಯವಿಲ್ಲ. ಪರೋಪಕಾರ, ಸಮಾಜ, ದೇಶ, ಧರ್ಮಗಳ ಉನ್ನತಿಗಾಗಿ ಮಾಡುವ ಕಾರ್ಯಗಳನ್ನೆಲ್ಲ ಈಶ್ವರನ ಪ್ರಸನ್ನತೆಗಾಗಿ ಮಾಡಿ. ದೈವಭಕ್ತಿಯಿಂದ ನೀವು ಯಾವ ಕಾರ್ಯವನ್ನು ಮಾಡಿದರೂ ಅದು ಮಂಗಳಪ್ರದವೂ ಯಶಸ್ವಿಯೂ ಪರಿಶುದ್ಧವೂ ಆಗುವುದು - ಎಂಬುದು ನೆನಪಿರಲಿ.

ಪಾಠಕರನೇಕರಿಗೆ ನನ್ನ ಈ ಮಾತುಗಳು ರುಚಿಸುವುದಲ್ಲವೆಂದು ನನಗೆ ಗೊತ್ತು. ಇದೇನಯ್ಯ ಪರಲೋಕದ ಕಂತೆ ಪುರಾಣ. ಈಗ ಯುವತಿ ತರಂಗಿಣಿಯ ಕಥೆಯನ್ನು ಹೇಳುತ್ತಿದ್ದೆ. ಆದರ ಮಧ್ಯೆ ಈ ನವಗೀತೆ ಏಕೆ ಬಂತು? 'ವಂಗದರ್ಶನ'ಕ್ಕಾಗಿ ಈಗತಾನೆ ಮುದಿ ಒನಕೆಯಿಂದ ಧಾನ್ಯವನ್ನು ಕುಟ್ಟುತ್ತಲಿದ್ದೆ. ಆದರ ಮಧ್ಯದಲ್ಲಿ ಈ ಶಿವಗೀತೆಯನ್ನೇಕೆ ಹಾಡಲಾರಂಭಿಸಿದೆ? - ಎಂದು ನೀವು ಕೇಳಬಹುದು. ತಪ್ಪಾಯಿತು, ಒಪ್ಪಿಕೊಳ್ಳುತ್ತೇನೆ, ಆದರೆ ಪ್ರತಿಯೊಂದು ಕೆಲಸ ಮಾಡುವಾಗಲೂ ಮಧ್ಯೆ ಮಧ್ಯೆ ಶಿವಗೀತೆ ಹಾಡಿಕೊಳ್ಳುವುದು ಹಿತಕರವೆಂದು ನನಗೆ ಭಾಸವಾಗುತ್ತಿದೆ.

ಹಿತವಾಗಲಿ, ಆಗದಿರಲಿ, ಮುದುಕರಿಗೆ ಬೇರೆ ಉಪಾಯವೇ ಇಲ್ಲ. ನಿಮ್ಮ ಸುರಾಂಗಿಣಿ, ಹೇಮಾಂಗಿಣಿ, ಕುರಂಗಿಣಿ ದಳವು ಈಗ ನನ್ನ ಕಡೆ ನೋಡುವುದಿಲ್ಲ. ನಿಮ್ಮ ಮಿಲ್, ಕಾಮ್ಟ್, ಸ್ಪೆನ್ಸರ್ ಫೂರಿಅರ್, ಬರ್ಕ್ ಮೊದಲಾದವರು ಈಗ ನನ್ನ ಮನಸ್ಸನ್ನು ರಂಜಿಸಲಾರರು. ನಿಮ್ಮ ದರ್ಶನ ಶಾಸ್ತ್ರ, ವಿಜ್ಞಾನ ಎಲ್ಲವು ನಿಸ್ಸಾರವಾಗಿವೆ, ಕುರುಡನ ಬೇಟೆಯಾಗಿದೆ. ಈ ವರ್ಷದ ದುರ್ದಿನಲ್ಲಿ, ಈ ಕಾಳರಾತ್ರಿಯ ಅಂತಿಮ ಕುಲಗ್ನದಲ್ಲಿ, ಈ ನಕ್ಷತ್ರ ಮೇಘಪೂರ್ಣ ಅಮಾವಾಸ್ಯೆಯ ಮಧ್ಯರಾತ್ರಿಯಲ್ಲಿ - ದಯಾ

ಸಿಂಧು, ಭಕ್ತಬಂಧು, ಎನಿಸಿದ ಆ ಅಗತಿಗತಿಕ ಭಗವಂತನ ಹೊರತು ನನ್ನನ್ನು ರಕ್ಷಿಸುವವರಾರು? ಈ ಸಂಸಾರ ನದಿಯ ತಪ್ತವಾದ ತೀರದಲ್ಲಿ, ಅತಿ ವೇಗವಾಗಿ ಹರಿಯುತ್ತಿರುವ ವೈತರಣಿಯಿಂದ ಆವೃತವಾಗಿರುವ ಈ ಭೀಕರ ಉಪಕೂಪದಲ್ಲಿ, ಈ ದುಸ್ತರ ಪಾರಾವಾರದಲ್ಲಿ, ಪ್ರಥಮ ತರಂಗಾಘಾತದಲ್ಲಿ, ಬೇರೆ ಯಾರು ನನ್ನನ್ನು ರಕ್ಷಿಸಬಲ್ಲರು? ಜೀವನ ನದಿಯಲ್ಲಿ ಅತಿ ವೇಗವಾಗಿ ಬಿರುಗಾಳಿ ಬೀಸಲಾರಂಭಿಸಿದೆ!—ಸುತ್ತಲೂ ಕತ್ತಲೆ ಕವಿಯುತ್ತಿದೆ! ಪ್ರಭೊ! ನನ್ನ ಈ ಕ್ಷುದ್ರ, ಜೀರ್ಣವಾದ ದೋಣಿಯು ಪಾಪದ ಭಾರದಿಂದ ತುಂಬಿ, ಮುಳುಗುತ್ತಲಿದೆ. ನಿನ್ನ ಹೊರತು, ನನ್ನನ್ನು ರಕ್ಷಿಸುವವರಾರು!

ಇತಿ,

—ಶ್ರೀ ಕಮಲಾಕಾಂತ ಚಕ್ರವರ್ತಿ.

---

## ೫. ಕಮಲಾಕಾಂತನು ಬೀಳ್ಕೊಳ್ಳುವುದು

**ಸಂಪಾದಕ ಮಹಾಶಯರು!**

ಈಗ ಬೀಳ್ಕೊಳ್ಳುವೆನು. ಇನ್ನು ಬರೆಯುವುದಿಲ್ಲ. ಕೂಡಿಬರಲಿಲ್ಲ. ನಿಮಗೂ ನನಗೂ ಕೂಡಿಬರಲಿಲ್ಲ. ಪಾಠಕರ ಮನಸ್ಸೂ ನನ್ನೊಂದಿಗೆ ಕೂಡಲಿಲ್ಲ. ಈ ಸಂಸಾರದಲ್ಲಿ ನನ್ನ ಮನಸ್ಸು ಬೆರೆಯಲಿಲ್ಲ. ನನ್ನ ಮನಸ್ಸೇ ನನ್ನೊಂದಿಗೆ ಸೇರದೆ ಹೋಯಿತು. ಇನ್ನು ಏನು ಬರೆಯಬೇಕು ? ಇನ್ನು ಅಪಸ್ವರದ ಈ ಕೊಳಲನ್ನು ಬಾಜಿಸಲಾಗುವುದೆ ? ಕೊಳಲಿಗೆ ಬಾಜಿಸ ಬೇಕೆಂದು ಅಪೇಕ್ಷೆ. ಆದರೂ ಬಾಜಿಸಲಾಗುವುದಿಲ್ಲ.

ಕೊಳಲು ಒಡೆದುಹೋಗಿದೆ. ಹೃದಯವೀಣೆ, ಈ ಗೊಂದು ಬಾರಿ ಮಿಡಿಯಬಾರದೆ! ಅಯ್ಯೋ! ಈಗಲೂ ನಿನಗೆ ಆಗಿನಂತೆ ಬಾಜಿಸಲು ಬರುವುದೆ? ಆ ರಾಗವು ನಿನಗಿನ್ನೂ ಜ್ಞಾಪಕವಿದೆಯೆ ? ಇಲ್ಲ, ನೀನು ಆಗಿನ ವೀಣೆಯಾಗಿಲ್ಲ. ನಾನೂ ಅಂದಿನವನಾಗಿಲ್ಲ. ಕೊಳಲಿಗೆ ಹುಳುಹಿಡಿದಿದೆ. ನಾನು ಚಿಂತಾಗ್ರಸ್ತನಾಗಿರುವೆನು. ನಾನು ಚಿಂತಾಕ್ರಾಂತನಾಗಿರುವೆನೊ ಬೂದಿಯಾಗಿರುವೆನೊ – ನನಗೆ ತಿಳಿಯದು. ಈಗ ನನ್ನಲ್ಲಿ ಅಂದಿನಾ ಸ್ವರವಿಲ್ಲ. – ಮತ್ತೆ ಬಾಜಿಸುವುದು ಹೇಗೆ ? ಈಗ ಆ ರಸವಿಲ್ಲ–ಕೇಳುವವರಾರು? ಹೃದಯ ವೀಣೆ! ಒಂದು ಬಾರಿ ನಿನ್ನ ತಂತಿಯನ್ನು ಮಿಡಿಯಬಾರದೆ? ಈ ಜಗತ್ ಸಂಸಾರದಲ್ಲಿ – ಕಿವುಡಾದ–ಧನದ ಚಿಂತೆಯಿಂದ ಜೀರ್ಣವಾದ ಈ ಮೂಢ ಜಗತ್ತಿನಲ್ಲಿ ಹಿಂದಿನಂತೆಯೆ ಮತ್ತೆ ಮನಸ್ಸಿನ ಗೂಢವಾದ ಸಂಗತಿಗಳನ್ನು ಅಂದಿನಾ ರಸವಲ್ಲಿಯೆ ಹೇಳು ನೋಡುವಾ! ನೀನು ಹೇಳಿದರೆ ಕೇಳುವವರಾರು ! ಆಗಿನ ವಯಸ್ಸು ಹಾಗಿತ್ತು – ಎಷ್ಟು ಕಾಲವಾಯಿತು ನಾನು ದಪ್ತರವನ್ನು ಬರೆದು ! ಈಗ ಈ ವಯಸ್ಸಿನ ನೀರಸವಾದ ಮಾತನ್ನು ಕೇಳುವವರಾರು ? ಈಗ ಅಂದಿನಾ ವಸಂತಕಾಲವಿಲ್ಲ - ಈಗಿನ ಕಂಠ-ಹೀನವಾದ ಕೋಗಿಲೆ ಕುಹೂ ಗಾನವನ್ನು ಕೇಳುವವರಾರು ?

ಅಣ್ಣಾ, ಈಗ ಮಾತನಾಡುವ ಅವಶ್ಯಕತೆಯಿಲ್ಲ - ಬಾಜಿಸುವ ಅವಶ್ಯಕತೆಯೂ ಇಲ್ಲ. ಒಡೆದ ಕೊಳಲಿನಲ್ಲಿ ಅಪಸ್ವರದಿಂದ ಕುಕ್ಕುರ ರಾಗವನ್ನು

ಬಾರಿಸಬೇಕಾಗಿಲ್ಲ. ಈಗ ನಾನು ನಕ್ಕರೆ ಬೇರೆಯವರು ನಗುವುದಿಲ್ಲ. ನಾನು ಅತ್ತರೇ ಮೇಲು. ಆಗ ಜನರು ನಗಬಹುದು. ಅಂದಿನಾ ವಯಸ್ಸಿನಲ್ಲಿ ಅಳುವುದರಲ್ಲಿಯೂ ನಗುವುದರಲ್ಲಿಯೂ ಸುಖವಿತ್ತು. ಅಂದು ಜನರೂ ಒಟ್ಟಿಗೆ ಅಳುತ್ತ, ನಗುತ್ತ ಇದ್ದರು. ಈಗಿನ ಅಳು - ನಗು ! ಛೀ ! ಕೇವಲ ಜನರನ್ನು ನಗಿಸುವುದಾಗಿದೆ.

ಹೇ ಸಂಪಾದಕ ಕುಲಶ್ರೇಷ್ಠ ! ನಿಮ್ಮೆದುರಿಗೆ ನಾನು ನಿಜವಾಗಿ ಹೇಳುತ್ತೇನೆ. ಕಮಲಾಕಾಂತನಲ್ಲಿ ಇಂದು ಆ ರಸವಿಲ್ಲ. ನನ್ನ ಅಂದಿನ ನಸೀರಾಮಬಾಬು ಇಲ್ಲ, ಅಂದಿನಂತೆ ಅಫೀಮಿನ ಸುಭಿಕ್ಷವಿಲ್ಲ - ಆ ಪ್ರಸನ್ನ ಗೌಳಗಿತ್ತಿ ಎಲ್ಲಿ ಹೋದಳೊ ತಿಳಿಯದು. ಇದು ಮಾತ್ರ ಸತ್ಯ - ಅಂದು ನಾನು ಏಕಾಂಗಿಯಾಗಿದ್ದೆ - ಇಂದೂ ಏಕಾಂಗಿ. ಆದರೆ ಅಂದು ನಾನು ಏಕಾಂಗಿಯಾಗಿದ್ದರೂ ಸಾವಿರ ಜನರೊಂದಿಗಿರುವಂತೆ ಇದ್ದೆ - ಇಂದು ಏಕಾಂಗಿಯಾಗಿದ್ದರೂ ಅರ್ಧ ಶರೀರವುಳ್ಳವನಂತಿರುವೆನು. ಒಬ್ಬಂಟಿಗನಾದವನಿಗೆ ಈ ಬಂಧನಗಳೇಕೆ ? ನಾನು ಸಾಕಿದ್ದ ಪಕ್ಷಿಯು ಎಂದು ಸತ್ತುಹೋಯಿತೊ ತಿಳಿಯದು. ಆದರೆ ಅದಕ್ಕಾಗಿ ಇಂದೂ ಅಳುತ್ತಿರುವೆನು. ನಾನು ಅರಳಿಸಿದ ಹೂ ಎಂದು ಬಾಡಿಹೋಯಿತೊ ತಿಳಿಯದು. ಆದರೆ ಅದಕ್ಕಾಗಿ ಈಗಲೂ ನಾನು ದುಃಖಿಸುತ್ತಿರುವೆನು. ಒಂದು ಬಾರಿ ಜಲಪ್ರವಾಹದಲ್ಲಿ ಸೂರ್ಯಕಿರಣದಿಂದ ಉಜ್ವಲವಾಗಿದ್ದ ಒಂದು ಜಲಬಿಂದುವನ್ನು ನೋಡಿದ್ದೆನು. ಅದಕ್ಕಾಗಿ ಈವರೆಗೆ ದುಃಖಿಸುತ್ತಿದ್ದೆನು. ಕಮಲಾಕಾಂತನೇನೊ ಅಂತರ್ಯದಲ್ಲಿ ಸನ್ಯಾಸಿಯಾಗಿರುವನು. ಮತ್ತೆ ಅವನಿಗೆ ಈ ಬಂಧನಗಳೇಕೆ ? ಈ ದೇಹವೇನೊ ಶಿಥಿಲವಾಯಿತು – ಬೆಂದು ಬೂದಿಯಾಯಿತು, ಆದರೆ ಈ ಹೃದಯ ಬಂಧನಗಳೇಕೆ ಸಡಿಲವಾಗಲಿಲ್ಲ ? ಮನೆಯು ಸುಟ್ಟುಹೋಯಿತು, ಬೆಂಕಿ ಏಕೆ ಇನ್ನೂ ಆರಲಿಲ್ಲ ? ಕೊಳದಲ್ಲಿ ನೀರು ಬತ್ತಿಹೋಯಿತು, ಆ ಕೆಸರಿನಲ್ಲಿ ಕಮಲವೇಕೆ ನಲಿಯುತ್ತಿರುವುದು ? ಬಿರುಗಾಳಿಯು ಹೊರಟುಹೋಯಿತು, ಆದರೆ ಸಮುದ್ರದಲ್ಲಿ (ಉಬ್ಬರ) ತುಫಾನು ಏಕೆ ನಿಲ್ಲಲಿಲ್ಲ ? ಹೂವು ಬಾಡಿಹೋಗಿದೆ. ಆದರೆ ಇನ್ನೂ ಗಂಧವೇಕೆ ಇದೆ ? ಸುಖ ಹೋಯಿತು, ಆಸೆ ಏಕೆ ಇನ್ನೂ ಇದೆ ? ಸ್ಮೃತಿ ಏಕೆ ಇನ್ನೂ ಇದೆ ? ಜೀವವಿದೆ ಏಕೆ ಇನ್ನೂ ? ಪ್ರೇಮವು ಹೋಯಿತು

ಯತ್ನವೇಕೆ ನಿಲ್ಲಲಿಲ್ಲ? ಪ್ರಾಣ ಹೋಯಿತು, ಪಿಂಡದಾನವೇಕೆ? ಕಮಲಾಕಾಂತನು ಹೋದನು. ಯಾವ ಕಮಲಾಕಾಂತನು ಚಂದ್ರನೊಂದಿಗೆ ವಿವಾಹಲಾಗಲಿಚ್ಛಿಸಿದ್ದನೊ, ಕೋಗಿಲೆಯೊಂದಿಗೆ ಹಾಡಲಪೇಕ್ಷಿಸಿದ್ದನೊ, ಹೂಗಳಿಗೆ ಮದುವೆ ಮಾಡಿಸುತ್ತಿದ್ದನೊ, ಆ ಕಮಲಾಕಾಂತನು ಹೋದನು. ಇನ್ನು ಈಗ ಅವನಾ ಅಫೀಮಿನ ಪರಿಮಾಣದ ಸುದ್ದಿಯೇಕೆ? ಕೊಳಲು ಒಡೆದಿದೆ, ಇನ್ನು ಝು, ಗ, ಮ ಸ್ವರವೇಕೆ? ಪ್ರಾಣವು ಹೋಯಿತಣ್ಣ, ಇನ್ನೂ ಉಸಿರೇಕೆ ಆಡುತ್ತಿದೆ? ಸುಖವು ಹೋಯಿತಣ್ಣ, ಈಗ ಅಳುವುದೇಕೆ?

ಆಗ ಅತ್ತೆನು. ಹುಟ್ಟಿದಾಗಲೂ ಅಳುತ್ತಿದ್ದೆ, ಈಗ ಅಳುತ್ತ ಸಾಯುವೆನು. ಈಗ ಆಳಬೇಕು, ಬರೆಯಬಾರದು.

ಇತಿ,

ಅನುಗತ, ಸ್ವಗತ, ಏವಂ ವಿಗತ,

**— ಶ್ರೀ ಕಮಲಾಕಾಂತ ಚಕ್ರವರ್ತಿ.**

---

# ಕಮಲಾಕಾಂತನ ಸಾಕ್ಷ್ಯ
## ಘೋಷನವೀಶ ಜೂನಿಯರ್ ರಚಿತ

ಆ ಅಫೀಮುಖೋರ ಕಮಲಾಕಾಂತನ ಸಮಾಚಾರ ಯಾವುದೂ ಅನೇಕ ದಿನಗಳಿಂದ ತಿಳಿದಿರಲಿಲ್ಲ. ಅವನಿಗೋಸ್ಕರ ಎಲ್ಲೆಲ್ಲೊ ಹುಡುಕಿ, ವಿಚಾರಿಸಿದ್ದೂ ಆಯಿತು. ಒಂದು ದಿನ ಅಕಸ್ಮಾತ್ತಾಗಿ ಅವನನ್ನು ಪೋಲೀಸ್ ಕೋರ್ಟಿನ ಹತ್ತಿರ ನಾನು ಕಂಡೆನು. ಪಾಪ, ಬ್ರಾಹ್ಮಣ! ಕೋರ್ಟಿನ ಮುಂದೆ ಒಂದು ಗಿಡದ ಕೆಳಗೆ ಕೂತು, ಅದಕ್ಕೆ ಒರಗಿಕೊಂಡು, ಕಣ್ಣು ಮುಚ್ಚಿ ಹೊಗೆ ಬತ್ತಿ ಸೇದುತ್ತಿದ್ದ. ಈ ಬ್ರಾಹ್ಮಣ ಅಫೀಮಿನ ಆಸೆಯಿಂದ ಎಲ್ಲೋ ಅಫೀಮು ಕದ್ದಿರಬೇಕು, ಇನ್ನೇನೂ ಇಲ್ಲ ಅಂದುಕೊಂಡೆ. ಬೇರೆ ಯಾವ ಸಾಮಾನನ್ನೂ ಕಮಲಾಕಾಂತನು ಎಂದಿಗೂ ಕದಿಯುವವನಲ್ಲ ಎಂದು ನನಗೆ ಖಂಡಿತವಾಗಿ ಗೊತ್ತು. ಅವನ ಪಕ್ಕದಲ್ಲಿಯೆ ಖಾಕಿ ವಸ್ತ್ರದಾರಿಯಾದ ಕಾನ್‌ಸ್ಟೇಬಲನೂ ಕಾಣಿಸಿದ. ನಾನು ಅಲ್ಲಿಂದ ಮೆಲ್ಲ ಮೆಲ್ಲಗೆ ಹೆಜ್ಜೆ ಇಡುತ್ತ ಮರೆಯಾದ ಸ್ಥಳಕ್ಕೆ ಹೋಗಿ ನಿಂತುಕೊಂಡೆನು. "ನೀನು ಜಾಮಿನಾಗಯ್ಯ" ಎಂದು ಕಮಲಾಕಾಂತನು ನನ್ನನ್ನು ಬಹುಶಃ ಕರೆಯುತ್ತಿದ್ದನೊ ಏನೊ! ನಾನು ದೂರದಲ್ಲಿಯೆ ನಿಂತು, ಮುಂದೆ ಏನಾಗುವುದೆಂದು ನೋಡಲಾರಂಭಿಸಿದೆ.

ಸ್ವಲ್ಪ ಹೊತ್ತಾದ ಬಳಿಕ ಕಮಲಾಕಾಂತನ ಹೆಸರನ್ನು ಕೋರ್ಟಿನ ಪೇದೆಯು ಬಾಗಿಲಹತ್ತಿರ ನಿಂತು ಕೂಗಲಾರಂಭಿಸಿದನು. ಕಾನ್‌ಸ್ಟೇಬಲ್‌ನು ಅವನನ್ನು ಕರೆದುಕೊಂಡು ಕೋರ್ಟಿನೊಳಕ್ಕೆ ಹೋದನು. ನಾನೂ ಹಿಂದೆ ಹಿಂದೆ ಹೋದೆ. ಅಲ್ಲಿ ನಿಂತು ಕಿವಿಗೆ ಬಿದ್ದ ಮಾತುಗಳನ್ನು ಕೇಳಿ ವಿಚಾರವೇನು ಎಂತ ತಿಳಿಯಿತು. ಕೋರ್ಟಿನಲ್ಲಿ ನಿಯಮಾನುಸಾರವಾಗಿ ಎತ್ತರವಾದ ಗದ್ದುಗೆಯ ಮೇಲೆ ನ್ಯಾಯಾಧೀಶನು ವಿರಾಜಮಾನನಾಗಿದ್ದಾನೆ. ನ್ಯಾಯಾಧೀಶ ಕೆಂಪು ಜನವಲ್ಲ, ದೇಶೀಯ ಧರ್ಮಾವತಾರ! ಹುದ್ದೆಯಲ್ಲಿ 'ಡಿಪುಟಿ ಸಾಹೇಬ'!- ಕಮಲಾಕಾಂತನು ಅಸಾಮಿ ಅಲ್ಲ, ಅವನನ್ನು ಸಾಕ್ಷಿ

ಯಾಗಿ ಕರೆತಂದಿದ್ದರು. ಮೊಕದ್ದಮೆ ಹಸುವಿನ ಕಳವು. ಫಿರ್ಯಾದಿ ಅದೇ ಪ್ರಸನ್ನಗೊಳಗಿತ್ತು.

ಸಿಪಾಯಿಯು ಕಮಲಾಕಾಂತನನ್ನು ಸಾಕ್ಷಿದಾರ ಕಟಾಂಜನದಲ್ಲಿ ನಿಲ್ಲಿಸಿದನು. ಆಗ ಕಮಲಾಕಾಂತನು ಸುತ್ತಲೂ ನೋಡಿ ಮೆಲ್ಲಮೆಲ್ಲಗೆ ನಗುವುದಕ್ಕಾರಂಭಿಸಿದ. ಸಿಪಾಯಿ "ಯಾಕಯ್ಯ ನಗುತ್ತಿ!" ಎಂದು ದಬಾಯಿಸಿದ. ಕಮಲಾಕಾಂತನು ಕೈಜೋಡಿಸಿ,-"ಏನಪ್ಪ? ನಾನು ಯಾರ ಹೊಲದ ಪೈರು ಮೇಯಿದೆ ಅಂತ ಈ ದೊಡ್ಡಿಯೊಳಗೆಕೂಡಿದ್ದು?" ಎಂದ.

ಸಿಪಾಯಿ ಮಹಾಶಯನಿಗೆ ಅವನ ಮಾತು ಅರ್ಥವಾಗದೆ, ದಾಡಿಯನ್ನಲ್ಲಾಡಿಸುತ್ತ, "ಇದು ತಮಾಷೆಗೆ ಜಾಗವಲ್ಲ, ಹೇಳಿಕೊಡುವ ಪ್ರಮಾಣ ವಚನಗಳನ್ನು ಹೇಳು" ಎಂದ.

ಕಮಲಾಕಾಂತ—"ಹೇಳಿಕೊಡಪ್ಪ".

ಕೋರ್ಟಿನ ಮುನುಷಿಯೊಬ್ಬನು ಪ್ರಮಾಣವಚನಗಳನ್ನು ಹೇಳಿಕೊಡಲಾರಂಭಿಸಿ—"ಹೇಳು, ನಾನು ಪರಮೇಶ್ವರನನ್ನು ಪ್ರತ್ಯಕ್ಷವಾಗಿ ತಿಳಿದು—"

ಕಮಲಾಕಾಂತ—(ಆಶ್ಚರ್ಯದಿಂದ) "ಏನು ಹೇಳಬೇಕು!"

ಮುನಷಿ—"ಕಿವಿ ಕೇಳಿಸೋದಿಲ್ಲವೇ?—ಪರಮೇಶ್ವರನನ್ನು ಪ್ರತ್ಯಕ್ಷವಾಗಿ ತಿಳಿದು—"

ಕಮಲಾಕಾಂತ—"ಪರಮೇಶ್ವರನನ್ನು ಪ್ರತ್ಯಕ್ಷವಾಗಿ ತಿಳಿದು"— ಎಂಥಾ ಅನರ್ಥ? ಸರ್ವನಾಶ!

ಸಾಕ್ಷಿಯು ಏನೊ ಗಲಾಟೆಮಾಡಲಾರಂಭಿಸಿರುವನೆಂದು ನ್ಯಾಯಾಧೀಶನು ತಿಳಿದು-"ಅನರ್ಥವೇನಾಯಿತಪ್ಪ?" ಎಂದು ಪ್ರಶ್ನಿಸಿದನು.

ಕಮಲಾಕಾಂತ—"ಪರಮೇಶ್ವರನನ್ನು ಪ್ರತ್ಯಕ್ಷವಾಗಿ ತಿಳಿದು!" ಎಂಬ ಮಾತನ್ನು ಹೇಳಬಹುದೆ?

ನ್ಯಾಯಾಧೀಶ—ಹೇಳಿದರೆ ಹಾನಿ ಏನು? ಫಾರಮ್‌ನಲ್ಲಿ ಹಾಗೇ ಬರೆದಿದೆ!

ಕಮಲಾಕಾಂತ—ಹುಜೂರ್ ತಾವು ದೊಡ್ಡವರು, ವಿಜ್ಞರು! ನನ್ನದೊಂದು ವಿಜ್ಞಾಪನೆ. ಸಾಕ್ಷಿಹೇಳುವಾಗ ಒಂದೆರಡು ಚಿಕ್ಕಪುಟ್ಟ ಸುಳ್ಳು

ಮಾತುಗಳನ್ನು ಹೇಳುವುದೇನೋ ಸಹಜ. ಆದರೆ ಈಗ ಪ್ರಾರಂಭದಿಂದಲೆ ಇಷ್ಟು ದೊಡ್ಡ ಸುಳ್ಳನ್ನು ಹೇಳುವುದು ಸರಿ ಎಂದು ಕಾಣುತ್ತದೆಯೆ ತಮಗೆ ?

ನ್ಯಾಯಾಧೀಶ—ಇದರಲ್ಲಿ ಸುಳ್ಳೇನಿದೆ ?

ಕಮಲಾಕಾಂತ—(ತನ್ನಷ್ಟಕ್ಕೆತಾನೆ) "ನಿಮಗೆ ಇಷ್ಟು ಬುದ್ಧಿ ಇಲ್ಲದಿದ್ದರೆ ಹೀಗೆ ಪದವೃದ್ಧಿ ಎಲ್ಲಾಗುತ್ತಿತ್ತು" ಎಂದುಕೊಂಡು, ಪ್ರಕಟವಾಗಿ- "ಧರ್ಮಾವತಾರ. ನಾನು ಒಂದು ವಿಚಾರ ತಿಳಿದುಕೊಂಡಿದ್ದೇನೆ. ಪರಮೇಶ್ವರನು ಪ್ರತ್ಯಕ್ಷದ ವಿಷಯವಲ್ಲ. ನನ್ನ ಕಣ್ಣಿನ ದೋಷವೊ, ಏನೊ ? ನಾನು ಇಂದಿನವರೆಗೆ ಪರಮೇಶ್ವರನನ್ನು ಪ್ರತ್ಯಕ್ಷವಾಗಿ ಕಂಡವನಲ್ಲ. ತಾವು ಆ ಉಚ್ಚಸ್ಥಾನದಲ್ಲಿ ಕುಳಿತು, ನ್ಯಾಯಾಧೀಶರ ಸುಲೋಚನವನ್ನು ಧರಿಸಿ ಅವನನ್ನು ಪ್ರತ್ಯಕ್ಷವಾಗಿ ನೋಡುತ್ತಿರಬಹುದೆಂದು ಕಾಣುತ್ತದೆ. ಆದರೆ ನಾನು ಈ ನ್ಯಾಯಾಲಯದೊಳಗೆ ಬಂದಲಾಗಾಯಿತು ಈವರೆಗೆ ಇನ್ನೂ ಪರಮೇಶ್ವರನು ಪ್ರತ್ಯಕ್ಷವಾಗಿ ಕಾಣಿಸಿಲ್ಲ–ಅಂಥಾದ್ದರಲ್ಲಿ "ಪರಮೇಶ್ವರನನ್ನು ಪ್ರತ್ಯಕ್ಷವಾಗಿ ತಿಳಿದು" ಎಂದು ಹೇಗೆ ಹೇಳಲಿ ?

ಫಿರ್ಯಾದಿಯ ವಕೀಲನಿಗೆ ಮೈ ಉರಿಯಿತು. ಅವನ ಸಮಯ ಅಮೌಲ್ಯವಾದ್ದು. ಪ್ರತಿನಿಮಿಷವೂ ಎಷ್ಟೋ ರೂಪಾಯಿಗಳ ಬೆಲೆಯುಳ್ಳದ್ದು. ಈ ದರಿದ್ರ ಸಾಕ್ಷಿಯು ಅವನಾಸಮಯವನ್ನು ಹಾಳುಮಾಡುತ್ತಿದ್ದಾನೆ. ವಕೀಲನು · ಕೋಪದಿಂದ–"ಸಾಕ್ಷಿರಾಯರೆ! ಈ ನಿಮ್ಮ Theological Lecture (ಪರಮಾರ್ಥ ವಿದ್ಯಾವಿಷಯದ ವ್ಯಾಖ್ಯಾನವನ್ನು) ಬ್ರಹ್ಮಸಮಾಜಕ್ಕಾಗಿ ಕಾದಿಟ್ಟುಕೊಂಡರೆ ಒಳ್ಳೆಯದಲ್ಲವೆ ? ಇಲ್ಲಿ ನೀವು ಕಾನೂನಿಗೆ ಅನುಸಾರವಾಗಿ ನಡೆದುಕೊಳ್ಳಲು ಸ್ಥಿರಮನಸ್ಸುಮಾಡಿ."

ಕಮಲಾಕಾಂತನು ವಕೀಲನಕಡೆ ತಿರುಗಿ, ಅವನನ್ನು ನೋಡುತ್ತ ಮೆಲುನಗೆಯಿಂದ–"ತಾವು ವಕೀಲರು ಅಂತಕಾಣುತ್ತೆ."

ವಕೀಲನು ನಕ್ಕು-ಅದು ಹೇಗೆ ತಿಳಿಯಿತು ?

ಕಮಲಾಕಾಂತ-ಬಹಳ ಸಹಜವಾಗಿ, ನಿಮ್ಮಾ ದೊಡ್ಡ ಚೈನು, ಮಾಸಿದ ರುಮಾಲು ನೋಡಿ ತಿಳಿದುಕೊಂಡೆ. ಆದರೆ, ಮಹಾಶಯ! ಈ ಥಿಯಲಾಜಿಕಲ್ ಲೆಕ್ಚರ್ ತಮಗಾಗಿ ಅಲ್ಲ. ಕಕ್ಷಿಗಾರರು ಬಂದಾಗ ನೀವು

ಪರಮೇಶ್ವರನನ್ನು ಪ್ರತ್ಯಕ್ಷವಾಗಿ ನೋಡಿದೆನೆಂದು ಒಪ್ಪಿಕೊಳ್ಳುವಿರಿ ಎಂದು ನನಗೆ ಗೊತ್ತು.

ವಕೀಲನು ಕೋಪದಿಂದ ಎದ್ದು ನಿಂತು ನ್ಯಾಯಾಧೀಶನಕಡೆ ತಿರುಗಿ- "I ask the protection of the Court against the insults of this witness" (ಈಸಾಕ್ಷಿಯು ನನಗೆ ಅಪಮಾನ ಮಾಡು ತ್ತಿರುವನು. ಅದಕ್ಕಾಗಿ ನಾನು ಕೋರ್ಟಿನ ರಕ್ಷಣೆ ಕೇಳಿಕೊಳ್ಳುವೆನು).

ಕೋರ್ಟು–" Oh Baboo, the witness is your own witness, and you are at liberty to send him away if you like. " (ಸಾಕ್ಷಿ ನಿಮ್ಮವನೆ. ನಿಮಗೆ ಇಷ್ಟವಿದ್ದರೆ ಅವನನ್ನು ಕಳಿಸಿಬಿಡುವ ಸ್ವಾತಂತ್ರ್ಯವಿದೆ ನಿಮಗೆ.)

ಕಮಲಾಕಾಂತನನ್ನು ಹೊರಗೆ ಕಳಿಸಿಬಿಟ್ಟರೆ ವಕೀಲಬಾಬುವಿನ ಮೊಕದ್ದಮೆಯು ಪ್ರಮಾಣಿತವಾಗುವಂತಿರಲಿಲ್ಲ. ವಕೀಲಬಾಬುವು ಮಾತನಾಡದೆ ಸುಮ್ಮನೆ ಕುಳಿತುಬಿಟ್ಟನು. ಕಮಲಾಕಾಂತನು-" ಈ ನ್ಯಾಯಾಧೀಶ ಜಾತಿಭ್ರಷ್ಟ-ಅವನ ವಿದ್ಯಾಬುದ್ಧಿಯ ಅವಸ್ಥೆಯೂ ಅದೇ ಆಗಿದೆ " ಎಂದುಕೊಂಡ.

ನ್ಯಾಯಾಧೀಶನು ಸಂದರ್ಭವನ್ನು ನೋಡಿಕೊಂಡು ಮುನಷಿಗೆ ಅಪ್ಪಣೆ ಮಾಡಿದ.-" ಓಥ್ (ಪ್ರಮಾಣದ ಮಾತಿ) ನಲ್ಲಿ ಸಾಕ್ಷಿಗೆ ಅಬ್‌ಜೆಕ್ಷನ್ ಇರುವಂತೆ ಕಾಣತ್ತೆ. ಆತನಿಂದ simple affirmation ಹೇಳಿಸಿ ಬಿಡಿ."

ಆಗ ಮುನಷಿಯು ಕಮಲಾಕಾಂತನಕಡೆ ತಿರುಗಿ-" ಒಳ್ಳೇದು, ಆ ಮಾತು ಹೋಗಲಿ. ಈಗ ಹೇಳಪ್ಪ-" ಈಗ ನಾನು ಪ್ರತಿಜ್ಞಾಪೂರ್ವಕ ವಾಗಿ ಹೇಳುತ್ತೇನೆ '-ಹೇಳಪ್ಪ.

ಕಮಲಾಕಾಂತ-ನಾನು ಏನು ಪ್ರತಿಜ್ಞೆಮಾಡುವೆನೆಂದು ಮೊದಲು ತಿಳಿದುಕೊಂಡು, ಆಮೇಲೆ ಪ್ರತಿಜ್ಞೆಮಾಡುವುದು ಒಳ್ಳೆಯದಲ್ಲವೆ?

ಮುನಷಿಯು ನ್ಯಾಯಾಧೀಶನಕಡೆ ತಿರುಗಿ - "ಧರ್ಮಾವತಾರ! ಸಾಕ್ಷಿ ಬಹಳ ತಕರಾರು ಮಾಡುತ್ತಾನೆ."

ವಕೀಲಬಾಬುವು ಕೂಡ ಹೇಳಿದ - ವೆರಿ ಅಬ್‌ಸ್ಟ್ರಕ್ಟಿವ್! (ಬಲು ತಕರಾರು ಇಸಮು.)

ಕಮಲಾಕಾಂತ ವಕೀಲನನ್ನು ಕುರಿತು-"ಸಾರ್, ಬಿಳಿಯ ಕಾಗದದ ಮೇಲೆ ದಸ್ಕತು (ರುಜು) ಹಾಕಿಸಿಕೊಳ್ಳುವ ಪದ್ಧತಿ ಕೋರ್ಟಿನ ಹೊರಗೆ ನಡೆಯುವುದು ನನಗೆ ಗೊತ್ತು. ಕೋರ್ಟಿನೊಳಗೂ ಹಾಗೆ ಮಾಡಬಹುದೆ?

ವಕೀಲ-ಬಿಳಿಯ ಕಾಗದದ ಮೇಲೆ ದಸ್ಕತು ಹಾಕು ಅಂತ ಯಾರು ಹೇಳಿದರು ಈಗ?

ಕಮಲಾಕಾಂತ—ಏನು ಪ್ರತಿಜ್ಞೆ ಮಾಡುತ್ತೇನೆ ಅಂತ ಮೊದಲು ತಿಳಕೊಳ್ಳದೇನೆ ಪ್ರತಿಜ್ಞೆ ಮಾಡುವುದು, ಮತ್ತು ಕಾಗದದ ಮೇಲೆ ಏನು ಬರೆಯುವುದು ಎಂದು ತಿಳಿಯದೆ ದಸ್ಕತು ಹಾಕುವುದು-ಎರಡೂ ಒಂದೇ ಜಾತಿ ವಿಷಯ.

ನ್ಯಾಯಾಧೀಶನು—ಮುನಷಿಯ ಕಡೆ ನೋಡಿ-"ಮೊದಲು ಆತನಿಗೆ ಪ್ರತಿಜ್ಞಾ ವಚನವನ್ನು ಪೂರ್ತಿಯಾಗಿ ಓದಿ ಹೇಳಿ. ಆತನಿಗೆ ತಿಳಿಯದಂತೆ ಏನೂ ಮಾಡುವ ಅಗತ್ಯವಿಲ್ಲ ಇಲ್ಲಿ!" ಎಂದನು.

ಆಗ ಮುನಷಿಯು—"ಕೇಳಪ್ಪ! ನೀನು ಹೇಳಬೇಕಾದ್ದು ಏನೊಂದ್ರೆ —"ನಾನು ಸಾಕ್ಷ್ಯವನ್ನು ಕೊಡುವಾಗ ಸತ್ಯವಾದ ಸಂಗತಿಗಳನ್ನೆ ಹೇಳುತ್ತೇನೆ. ಯಾವ ವಿಷಯವನ್ನೂ ಮುಚ್ಚಿಡುವುದಿಲ್ಲ. ಸತ್ಯವಾದ್ದನ್ನು ಬಿಟ್ಟು ಇನ್ನೇನೂ ಹೇಳುವುದಿಲ್ಲ"-ಎಂದು ಪ್ರತಿಜ್ಞೆ ಮಾಡಿ ಹೇಳುತ್ತೇನೆ"-ಅಂತ ಹೇಳಬೇಕು.

ಕಮಲಾಕಾಂತ—ಓಂ-ಮಧು, ಮಧು, ಮಧು! ಎಷ್ಟು ಮಧುರವಾಗಿದೆ.

ಮುನಷಿ—ಈಗ ಹೇಳುತ್ತೀಯೋನಪ್ಪಾ?

ಕಮಲಾಕಾಂತ—ಹೇಳಿಕೊಡಪ್ಪ, ಹೇಳುತ್ತೇನೆ.

ಕಮಲಾಕಾಂತ—ಯಾವ ಅಡ್ಡಿಯನ್ನೂ ಮಾಡದೆ ಪ್ರಮಾಣವಚನವನ್ನು ಹೇಳಿದನು. ಆಗ ವಕೀಲನು ಅವನನ್ನು ಪ್ರಶ್ನಿಸಲು ಎದ್ದು ನಿಂತು, ಕೆಂಗಣ್ಣುಗಳಿಂದ ಅವನನ್ನು ನೋಡುತ್ತ—"ಇನ್ನು ಪುಂಡಾಟ ಮಾಡಕೂಡದು, ನಾನು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಡಬೇಕು. ವ್ಯರ್ಥವಾದ ವಿಷಯವನ್ನೆತ್ತಕೂಡದು" ಎಂದನು.

ಕಮಲಾಕಾಂತ— ನೀವು ಏನು ಕೇಳುತ್ತೀರೊ ಅದನ್ನು ಮಾತ್ರ ಹೇಳ ಬೇಕೊ? ಇನ್ನೇನೂ ಹೇಳಕೂಡದೊ?

ವಕೀಲ— ಇಲ್ಲ.

ಆಗ ಕಮಲಾಕಾಂತನು ನ್ಯಾಯಾಧೀಶನ ಕಡೆ ತಿರುಗಿಕೊಂಡ ಹೀಗೆಂದನು—"ನಾನು ಯಾವ ಮಾತನ್ನೂ ಮುಚ್ಚಿಡುವುದಿಲ್ಲವೆಂದು ನನ್ನಿಂದ ಪ್ರತಿಜ್ಞೆಮಾಡಿಸಿದ್ದಾಯಿತು. ಧರ್ಮಾವತಾರವೆ! ನನ್ನ ಒರಟುತನವನ್ನು ಕ್ಷಮಿಸಬೇಕು. ನಮ್ಮ ಮೊಹಲ್ಲೆಯಲ್ಲಿ ಒಂದು ಕಡೆ ಇವತ್ತು ಆಟವಾಡು ತ್ತಾರೆ ಅಂತ ಕೇಳಿದೆ. ಅಲ್ಲಿಗೆ ಹೋಗಬೇಕೆಂದು ಅಪೇಕ್ಷೆ ಇತ್ತು. ಆದರೆ ಅಲ್ಲಿಗೆ ಹೋಗುವ ಇಚ್ಛೆ ಇಲ್ಲಿಗೆ ಮುಗಿಯಿತು. ವಕೀಲಬಾಬುವೆ ಇಲ್ಲಿ ಪ್ರಧಾನ ಪಾತ್ರ. ನಾನು ಆಟಗಾರರ ಹುಡುಗ. ವಕೀಲರು ನನ್ನಿಂದ ಯಾವ ಮಾತು ಹೇಳಸ್ತಾರೊ ಅಷ್ಟನ್ನು ಮಾತ್ರ ನಾನು ಹೇಳುತ್ತೇನೆ. ಅವರು ಕೇಳದೇ ಇದ್ದದ್ದನ್ನು ನಾನು ಹೇಳುವುದಿಲ್ಲ. ನಾನು ಹೇಳದೆ ಇರುವುದನ್ನೆಲ್ಲ ಮುಚ್ಚಿಟ್ಟ ಹಾಗಾಯಿತು. ಅಂದರೆ ನನ್ನ ಪ್ರತಿಜ್ಞೆಯು ಖಂಡಿತವಾಗಿ ಸುಳ್ಳಾಗುವುದು, ಕ್ಷಮಿಸಬೇಕು."

ನ್ಯಾಯಾಧೀಶ— ಯಾವುದನ್ನು ಹೇಳುವುದು ಅವಶ್ಯವೆಂದು ತೋರು ವುದೊ ಅದನ್ನು ಅವರು ಕೇಳದಿದ್ದರೂ ನೀವು ಅಗತ್ಯವಾಗಿ ಹೇಳಬಹುದು.

ಕಮಲಾಕಾಂತ— ಆಗ ನ್ಯಾಯಾಧೀಶನಿಗೆ ಸಲಾಮುಹಾಕಿ -"ಬಹಳ ಒಳ್ಳೆಯದು!" ಎಂದನು. ವಕೀಲನು ಮತ್ತೆ ಅವನನ್ನು ಪ್ರಶ್ನಿಸಲಾರಂಭಿ ಸಿದನು. -'ನಿಮ್ಮ ಹೆಸರೇನು?"

ಕಮಲಾಕಾಂತ— ಶ್ರೀ ಕಮಲಾಕಾಂತ ಚಕ್ರವರ್ತಿ.

ವಕೀಲ— ನಿಮ್ಮ ತಂದೆಯ ಹೆಸರು?

ಕಮಲಾಕಾಂತ— ನನ್ನ ಮದುವೆ ಏರ್ಪಾಡಿಗೆ ಸಮಾವರ್ತನೆ ಏನಾ ದರೂ ನಿಶ್ಚಯಿಸಿದ್ದೀರಾ? ನನ್ನ ತಂದೆ ಹೆಸರೇಕೆ ಹೇಳಬೇಕು?

ವಕೀಲನು ಕೋಪಗೊಂಡು—"ಹುಜೂರ್! ಈ ಮಾತುಗಳೆಲ್ಲ Contempt of Court" (ಕೋರ್ಟಿಗೆ ಅವಮಾನಕರ) ಆಗಿವೆ! ಹುಜೂರ್ ವಕೀಲನ ದುರ್ದೆಸೆಯನ್ನು ನೋಡಿ, ತಕ್ಷಣ ನಿರಾಶರಾಗಲಿಲ್ಲ, ಸೌಮ್ಯವಾಗಿ -"ಸಾಕ್ಷಿ ನಿಮ್ಮವರೆ!" ಎಂದುಬಿಟ್ಟರು. ಆಗ ವಕೀಲನು

ಕಮಲಾಕಾಂತನ ಕಡೆ ತಿರುಗಿ- ನೀವು ಹೇಳಬೇಕು. ಹೇಳಲೇಬೇಕಾಗು ವುದು" ಎಂದನು. ಕಮಲಾಕಾಂತನು ತಂದೆಯ ಹೆಸರು ಹೇಳಿದ. ಆಗ ವಕೀಲನು ಮತ್ತೆ—

"ನಿಮ್ಮ ಜಾತಿ ಯಾವುದು ?"

ಕಮಲಾಕಾಂತ— ಹಿಂದೂ ಜಾತಿ.

ವಕೀಲ—ಆಃ ! ವರ್ಣವ್ಯಾವದು ?

ಕಮಲಾಕಾಂತ— ಅಚ್ಚ ಅಪ್ಪಟ ಕಪ್ಪು ವರ್ಣ.

ವಕೀಲನು ಸಿಂಡರಿಸಿಕೊಳ್ಳುತ್ತ—"ಹೋಗಾಚೆ ! ಇಂಥಾ ಸಾಕ್ಷೀನ ಯಾರಾದರೂ ತರತಾರೇನು? ನಿಮ್ಮಲ್ಲಿ ಜಾತಿ ಇದೆಯೊ ಅಂತ ಕೇಳ್ತಿದೇನೆ.

ಕಮಲಾಕಾಂತ— ಜಾತಿ ಯಾಕಿಲ್ಲ. ಅದನ್ನಾÿರು ಕೊಂಡುಹೋಗು ವರು?

ವಕೀಲನು ಮಾತು ಅವನಿಗೆ ತಿಳಿಯುತ್ತಿಲ್ಲವೆಂದು ನ್ಯಾಯಾಧೀಶನು ತಿಳಿದು, ತಾನಾಗಿ ಕೇಳಿದನು—"ಹಿಂದೂಗಳಲ್ಲಿ ಬ್ರಾಹ್ಮಣ, ಕಾಯಸ್ಥ, ಕೈವರ್ತ ಎಂದು ಬೇರೆ ಬೇರೆ ಜಾತಿಗಳಿಲ್ಲವೆ? ಅದರಲ್ಲಿ ನೀವು ಯಾವ ಜಾತಿಗೆ ಸೇರಿದವರು ?"

ಕಮಲಾಕಾಂತ— ಧರ್ಮಾವತಾರ ! ಇದು ವಕೀಲಬಾಬುಗಳ ಬುದ್ಧಿ ದೋಷ, ಅವರಿಗೆ ಕಾಣ್ತಾ ಇದೆ ನನ್ನ ಕಂಠದಲ್ಲಿರುವ ಜನಿವಾರ. ಹೆಸರಿನ ಕೊನೆಗೆ ಚಕ್ರವರ್ತಿ ಅಂತಿದೆ. ಇದೆಲ್ಲ ನೋಡಿಯೂ ನಾನು ಬ್ರಾಹ್ಮಣ ಅಂತ ಅವರಿಗೆ ತಿಳಿಯದೆ ಹೋದರೆ, ನಾನು ಹೇಗೆ ತಿಳಿಸಬೇಕು ? ಹೇಳಿ !

ನ್ಯಾಯಮೂರ್ತಿಯು—"ಜಾತಿ, ಬ್ರಾಹ್ಮಣ" ಎಂದು ಬರೆದು ಕೊಂಡನು. ಮತ್ತೆ ವಕೀಲನು ಪ್ರಶ್ನಿಸಿದನು—"ನಿಮಗೆ ಎಷ್ಟು ವಯಸ್ಸಾಗಿದೆ?"

ಕೋರ್ಟಿನಲ್ಲಿ ಗೋಡೆಗೆ ಹಾಕಿದ್ದ ದೊಡ್ಡ ಗಡಿಯಾರದ ಕಡೆ ನೋಡುತ್ತ ಕಮಲಾಕಾಂತನು—"ನನ್ನ ವಯಸ್ಸು ೫೧ ವರುಷ, ೨ ತಿಂಗಳು ೧೩ ದಿನ, ೪ ಗಂಟೆ, ೫ ನಿಮಿಷ, ೫೦ ಸೆಕೆಂಡ್‌ಗಳು."

ವಕೀಲ—ಅಯ್ಯೊ, ನಿಮ್ಮ ಗಂಟೆ, ನಿಮಿಷ ಯಾರಯ್ಯ ಕೇಳಿದ್ದು?"

ಕುಮಲಾಕಾಂತ—"ಏಕೆ ? ಯಾವ ವಿಷಯಾನೂ ಮುಚ್ಚಿಡುವುದಿಲ್ಲ ಅಂತ ಈಗತಾನೆ ಪ್ರಮಾಣ ಮಾಡಿಸಲಿಲ್ಲವೆ ?

ವಕೀಲ—ನಿಮ್ಮ ಮನಸ್ಸು ಬಂದಹಾಗೆ ಮಾಡಿ. ನಿಮ್ಮನ್ನು ನಾನು ಎದುರಿಸಲಾರೆ. ನಿಮ್ಮ ವಾಸಸ್ಥಾನವೆಲ್ಲಿದೆ ?

ಕಮಲಾಕಾಂತ—ನನಗೆ ವಾಸಸ್ಥಾನವಿಲ್ಲ.

ವಕೀಲ—ನಿಮ್ಮ ಮನೆ ಎಲ್ಲಿದೆ ಹೇಳ್ರಿ.

ಕಮಲಾ—ಮನೆ ಬಿಡಿ, ಒಂದು ರೂಮು ಕೂಡ ಇಲ್ಲ.

ವಕೀಲ—ಹಾಗಾದರೆ ನೀವು ಮಲಗುವದು, ಕೂತುಕೊಳ್ಳೋದು, ಇರೋದು ಎಲ್ಲಿ ?

ಕಮಲಾ—ಇಲ್ಲಿ, ಅಲ್ಲಿ, ಸಿಕ್ಕಿದೆಡೆಯಲ್ಲಿ.

ವಕೀಲ—ಒಂದು ಆಶ್ರಯಸ್ಥಾನವಾದರೂ ಇಲ್ಲವೆ ?

ತಮಲಾ—ಇತ್ತು, ನಸೀರಾಮುಬಾಬು ಇದ್ದಾಗ. ಈಗ ಯಾವದೂ ಇಲ್ಲ.

ವಕೀಲ—ಹಾಗಾದರೆ ಈಗ ಎಲ್ಲಿದ್ದೀರಿ ?

ಕಮಲಾ—ಏಕೆ ? ಈಗ ಕೋರ್ಟಿನಲ್ಲಿದ್ದೇನೆ.

ವಕೀಲ—ನಿನ್ನೆ ಎಲ್ಲಿದ್ದಿರಿ ?

ಕಮಲಾ—ಒಂದು ಅಂಗಡಿಯಲ್ಲಿ.

ನ್ಯಾಯಾಧೀಶ—"ಸುಮ್ಮನೆ ವ್ಯರ್ಥ ವಾದದಿಂದ ಪ್ರಯೋಜನವಿಲ್ಲ. ವಾಸಸ್ಥಾನವಿಲ್ಲ ಅಂತ ಬರೆದುಕೊಂಡಿದೆ. ಮುಂದೆ ಸಾಗಲಿ.

ವಕೀಲ—ನಿಮ್ಮ ವೃತ್ತಿ ಏನು ?

ಕಮಲಾ—ವೃತ್ತಿ ಎಂಥಾದ್ದು ? ನಾನೇನು ವಕೀಲನೆ, ವೇಶ್ಯೆಯೆ, ವೃತ್ತಿ ಇಟ್ಟುಕೊಳ್ಳೋಕೆ ?

ವಕೀಲ—ನಾನು ಕೇಳೋದು ನೀವು ಊಟ ಹೇಗೆ ಮಾಡುತ್ತೀರಿ ಅಂತ.

ಕಮಲಾ—ಅನ್ನಕ್ಕೆ ಬೇಳೆ ತವ್ವೆ ಹಾಕಿ ಕಲಸಿ, ಬಲಗೈಯಿಂದ ತುತ್ತು ಎತ್ತಿ ಬಾಯೊಳಗಿಟ್ಟು, ಕಂಠದಿಂದ ಕೆಳಕ್ಕೆ ಇಳಿಸಿಬಿಡ್ತೇನೆ.

ವಕೀಲ—ಆ ಅನ್ನ - ತೊವ್ವೆ ನಿಮಗೆ ಸಿಕ್ಕುವುದು ?

ಕಮಲಾ—ದೇವರು ಕೊಟ್ಟಾಗ ಸಿಕ್ಕುತ್ತೆ, ಇಲ್ಲದಾಗ ಇಲ್ಲ !

ವಕೀಲ— ಏನಾದರೂ ಸಂಪಾದನೆ ಮಾಡ್ತೀರೊ?

ಕಮಲಾ— ಒಂದು ಬಿಡಿಕಾಸೂ ಇಲ್ಲ.

ವಕೀಲ— ಹಾಗಾದರೆ ಕಳ್ಳತನ ಮಾಡ್ತೀರೊ?

ಕಮಲಾ— ಹಾಗಿದ್ದರೆ ಇದಕ್ಕೆ ಮೊದಲೆ ನಿಮಗೆ ಶರಣಾಗತನಾಗಿ ಬರುತ್ತಿದ್ದೆ. ಅದರಲ್ಲಿ ತಮಗೂ ಒಂದು ಭಾಗ ಸಿಕ್ಕೇ ಸಿಕ್ತಿತ್ತು.

ಈ ಮಾತುಗಳನ್ನು ಕೇಳಿ ವಕೀಲನು ಪ್ರಶ್ನಿಸುವುದನ್ನು ಬಿಟ್ಟು, ನ್ಯಾಯಾಧೀಶನ ಕಡೆ ತಿರುಗಿ— "ನನಗೆ ಈ ಸಾಕ್ಷಿ ಬೇಕಾಗಿಲ್ಲ. ನಾನು ಈತನಿಂದ ಸಾಕ್ಷ್ಯವನ್ನು ಹೇಳಿಸಲಾರೆ" ಎಂದನು.

ಫಿರ್ಯಾದಿ ಪ್ರಸನ್ನಗೌಳಗಿತ್ತಿಯು, ವಕೀಲನಕಡೆ ತಿರುಗಿ ಹೀಗೆಂದಳು- "ಈ ಸಾಕ್ಷಿಯನ್ನು ಬಿಡುವುದಕ್ಕಾಗದು. ಈ ಬ್ರಾಹ್ಮಣ ಸುಳ್ಳು ಹೇಳುವುದಿಲ್ಲ. ಅವನ ವಿಚಾರ ನನಗೆ ಚೆನ್ನಾಗಿ ಗೊತ್ತು. ಅವನು ಎಂದಿಗೂ ಸುಳ್ಳು ಹೇಳುವುದಿಲ್ಲ. ಅವನಿಗೆ ಹೇಗೆ ಪ್ರಶ್ನೆ ಹಾಕಬೇಕು ಅಂತ ನಿಮಗೆ ತಿಳಿಯದು. ಅದ್ದರಿಂದ ಇಷ್ಟು ಗಲಾಟೆಗೆ ಕಾರಣವಾಗಿದೆ. ಈ ಬ್ರಾಹ್ಮಣನಿಗೆ ವೃತ್ತಿ ಏನಿರಬೇಕು? ಆತನು ಊಟ ಸಿಕ್ಕಲ್ಲಿ ತಿಂದು, ಇಲ್ಲಿ ಅಲ್ಲಿ ತಿರುಗುತ್ತಿರುತ್ತಾನೆ. 'ಏನು ಸಂಪಾದನೆ ಮಾಡುತ್ತೀಯೆ' ಎಂದು ನೀವು ಅವನನ್ನು ಕೇಳುತ್ತೀರಿ. ಅವನು ಏನು ಹೇಳಿಯಾನು?"

ಆಗ ವಕೀಲನು ನ್ಯಾಯಾಧೀಶನಿಗೆ— "ಬರೆದುಕೊಳ್ಳಬಹುದು, ವೃತ್ತಿ ಭಿಕ್ಷೆ ಬೇಡುವದು"— ಎಂದನು.

ಈ ಸಲ ಕಮಲಾಕಾಂತನಿಗೆ ಕೋಪ ಬಂತು, ಅವನು ರೋಷದಿಂದ— "ಏನು? ಕಮಲಾಕಾಂತ ಚಕ್ರವರ್ತಿಯು ಭಿಕ್ಷೋಪಜೀವಿಯೆ? ನಾನು ಯಾರಲ್ಲಿಯೂ ಒಂದು ಬಿಡಿಕಾಸೂ ಯಾಚನೆ ಮಾಡಿದವನಲ್ಲವೆಂದು ಪ್ರಮಾಣ ಪೂರ್ವಕ ಘಂಟಾ ಘೋಷವಾಗಿ ಹೇಳುತ್ತೇನೆ"— ಎಂದ.

ಈಗ ಪ್ರಸನ್ನಳು ಸುಮ್ಮನಿರಲಾಗಲಿಲ್ಲ. ಅವಳು ಮುಂದೆ ಬಂದು ಪ್ರಶ್ನಿಸಿದಳು— "ಯಾಕೆ. ಠಾಕೂರ್!* ನೀವು ಅಫೀಮನ್ನು ಬೇಡಿ ತಿಂದಿಲ್ಲವೆ?"

---

*ಬಂಗಾಳಿಯಲ್ಲಿ ದೇವರು, ಪೂಜ್ಯ ವ್ಯಕ್ತಿಗಳನ್ನು ಸಂಬೋಧಿಸುವ ರೀತಿ.

ಕಮಲಾ—"ದೂರ ಹೋಗು ಗೌಳಿಗರ ಹೆಣ್ಣೆ! ಹುಚ್ಚಿ! ಅಫೀಮ್ಮು ಡುಡ್ಡೇ! ನಾನು ಎಂದೂ ಯಾರಲ್ಲೂ ಒಂದು ಕಾಸೂ ಬೇಡಿದವನಲ್ಲ!

ನ್ಯಾಯಾಧೀಶನು ನಕ್ಕು, ಕೇಳಿದ–"ಕಮಲಾಕಾಂತ, ಏನಂತ ಬರೆದು ಕೊಳ್ಳಲಿ."

ಕಮಲಾಕಾಂತನು ಸೌಮ್ಯನಾಗಿ, ಹೀಗೆಂದನು – "ಬರೆದುಕೊಳ್ಳೋಣಾಗಲಿ. ವೃತ್ತಿ – ಬ್ರಾಹ್ಮಣ ಭೋಜನ ನಿಮಂತ್ರಣ – ಗ್ರಹಣ." ಎಲ್ಲರೂ ನಕ್ಕರು. ನ್ಯಾಯಾಧೀಶನೂ ಹಾಗೆಯೆ ಬರೆದುಕೊಂಡನು.

ಆಗ ವಕೀಲ ಮಹಾಶಯನು ಮೊಕದ್ದಮೆಯಲ್ಲಿ ಪ್ರವೃತ್ತನಾಗಿ ಪ್ರಶ್ನಿಸಲಾರಂಭಿಸಿದ - "ನಿಮಗೆ ಈ ಫಿರ್ಯಾದಿಯ ಪರಿಚಯವಿದೆಯೆ ?"

ಕಮಲಾ—"ಇಲ್ಲ!"

ಪ್ರಸನ್ನ ಗಟ್ಟಿಯಾಗಿ ಕೇಳಿದಳು - "ಅದೇನು ಠಾಕೂರರೆ! ಇಷ್ಟು ದಿನ ನನ್ನ ಹಾಲು - ಮೊಸರು ತಿಂದು ಈಗ ನನ್ನ ಗುರುತು ಇಲ್ಲ ಅಂತೀರಾ ?"

ಕಮಲಾಕಾಂತ—"ನಿನ್ನ ಹಾಲು - ಮೊಸರಿನ ಗುರುತು ಇಲ್ಲ ಅಂತ ನಾನು ಹೇಳಲಿಲ್ಲ. ಅದರ ಪರಿಚಯ ನನಗೆ ಚೆನ್ನಾಗಿದೆ. ಯಾವಾಗ ಒಂದು ಪಾವು ಹಾಲಿಗೆ ಮೂರು ಪಾವು ನೀರು ಸೇರಿರುತ್ತಿತ್ತೊ ಆಗ ಅದು ಪ್ರಸನ್ನಗೌಳಗಿತ್ತಿಯ ಹಾಲು; ಯಾವಾಗ ಮಜ್ಜಿಗೆ ಸೇರಿಸಿದ ಮೊಸರು ಹಾಲಿಗಿಂತ ನೀರಾಗಿ ಬರುತ್ತಿತ್ತೊ ಅಗ ಅದು ಪ್ರಸನ್ನಮಯಿಯ ಮೊಸರು ಎಂದು ತಿಳಿಯುತ್ತಿತ್ತು. ಪಾಪ, ನಿನ್ನ ಹಾಲು - ಮೊಸರ ಪರಿಚಯ ನನಗೆ ಚೆನ್ನಾಗಿದೆ."

ಪ್ರಸನ್ನಳು ಮೂಗು ಮುರಿದು ತನ್ನ ಮೂಗತಿಯನ್ನು ಝುಳಪಿಸುತ್ತ ಕೇಳಿದಳು - ನನ್ನ ಹಾಲು ಮೊಸರ ಪರಿಚಯವಿದೆ, ನನ್ನ ಪರಿಚಯವಿಲ್ಲವೆ ?

ಕಮಲಾಕಾಂತ—"ಹೆಂಗಸನ್ನ ಯಾರು ಯಾವಾಗ ತಿಳಕೊಂಡಿದ್ದಾರೆ, ತಂಗಿ? ಆದರಲ್ಲಿಯೂ ಹಾಲಿನ ಪಾತ್ರೆಯನ್ನು ತಲೆಯ ಮೇಲಿಟ್ಟುಕೊಂಡಿರೊ ಹೆಂಗಸನ್ನು ಗುರುತಿಸುವದು, ಯಾರಿಗೆ ಸಾಧ್ಯ ?"

ಆಗ ವಕೀಲನು ಮತ್ತೆ ಸವಾಲು ಮಾಡಲಾರಂಭಿಸಿದನು—"ತಿಳಿಯಿತು. ನಿಮಗೆ ಫಿರ್ಯಾದಿಯ ಗುರುತಿದೆ ಅಂತ. ಈಕೆಯ ಜತೆಗೆ ನೀವು ಯಾವ ಸಂಬಂಧವನ್ನಿಟ್ಟುಕೊಂಡಿದ್ದೀರಿ ?

ಕಮಲಾಕಾಂತ— ಒಳ್ಳೇಮಾತು ಹೇಳದಿರಿ. ನಿಮ್ಮಲ್ಲಿ ಇಂಥಾ ಗುಣ ವಿಲ್ಲದಿದ್ದರೆ ನೀವು ವಕೀಲರಾಗುತ್ತಿದ್ದಿರಾ?"

ವಕೀಲ— ನೀವು ನನ್ನ ಗುಣ ಕಂಡದ್ದೇನು?

ಕಮಲಾಕಾಂತ— ಬ್ರಾಹ್ಮಣ ಗಂಡಿಗೂ, ಗೌಳಿಗರ ಹೆಣ್ಣಿಗೂ ನೀವು ಸಂಬಂಧವನ್ನು ಹುಡುಕುತ್ತಿರುವುದು ಕಡಿಮೆ ಗುಣವೇನು?

ವಕೀಲ— ಅಂಥಾ ಸಂಬಂಧ ಆಗಲಾರದೊ? ಯಾರಿಗೆ ಗೊತ್ತು? ನೀವು ಅವಳ ಪೋಷಿತ ಪುತ್ರನಾಗಿರಬಹುದಲ್ಲ?

ಕಮಲಾಕಾಂತ— ಅವಳ ಪುತ್ರನಲ್ಲ, ಅವಳ ಹಸುವಿನ ಪೋಷಿತ ಪುತ್ರ ಎಂದು ಹೇಳಬಹುದು.

ವಕೀಲ— ತಿಳಿಯಿತು, ನಿಮಗೂ ಈ ಗೌಳಗಿತ್ತಿಗೂ ಒಂದು ಬಗೆ ಸಂಬಂಧ ಇದೆ ಅಂತ ಆಯಿತು. ಅದನ್ನು ಒಂದೇ ಸಲಕ್ಕೆ ಸಲೀಸಾಗಿ ಹೇಳಬಾರದಾಗಿತ್ತೆ? ಯಾಕೆ ಇಷ್ಟು ತೊಂದರೆ ಕೊಡ್ತೀರಿ? ಒಳ್ಳೇದು, ಈ ಮೊಕದ್ದಮೆಯ ವಿಚಾರದಲ್ಲಿ ನಿಮಗೇನು ತಿಳಿದಿದೆ ಹೇಳಿ.

ಕಮಲಾ— ಈ ಮೊಕದ್ದಮೆಯಲ್ಲಿ ನೀವು ವಕೀಲರು, ಪ್ರಸನ್ನಳು ಫಿರ್ಯಾದಿ, ನಾನು ಸಾಕ್ಷಿ, ಮತ್ತೆ ಅಲ್ಲಿ ನಿಂತಿರುವ ಬೋಡುತಲೆಯವನು ಅಪರಾಧಿ ಎಂತ ತಿಳಿದಿದ್ದೇನೆ.

ವಕೀಲ— ಅದಲ್ಲ - ಈ ಹಸುವಿನ ಕಳುವಿನ ವಿಚಾರದಲ್ಲಿ ಏನು ತಿಳಿದಿದೆ.

ಕಮಲಾ— ಹಸು ಕಳುವಿನ ವಿಚಾರ ನಮ್ಮಪ್ಪನಿಗೂ ತಿಳಿದಿರಲಿಲ್ಲ ನಮ್ಮಜ್ಜನೂ ತಿಳಿದಿರಲಿಲ್ಲ. ದಯೆಯಿಟ್ಟು ನೀವು ನನಗೆ ಈ ವಿದ್ಯೆ ಹೇಳಿ ಕೊಡ್ತೀರಾ. ಈಗ ಹಾಲು ಮೊಸರಿನ ತೊಂದರೆ ತುಂಬಾ ಆಗಿದೆ ನನಗೆ.

ವಕೀಲ— ಆಃ! ಹಸು ಕಳುವಾದ್ದನ್ನು ನೋಡಿದಿರಾ?

ಕಮಲಾ— ಒಂದು ದಿನ ನೋಡಿದ್ದೆ. ನಸೀರಾಮ ಬಾಬುವಿನ ಹಸು ವನ್ನು ಒಂದು ದಿನ ಒಬ್ಬ ಮೋಚಿಗರ ಹುಡುಗ—

ವಕೀಲ— ಅದಲ್ಲ, ನಾನು ಕೇಳೋದು ಈ ಪ್ರಸನ್ನಗೌಳಗಿತ್ತಿಯ ಹಸು ಕಳವಾದಾಗ ನೀವು ಅದನ್ನು ನೋಡಿದಿರಾ? ಎಂದು.

ಕಮಲಾ— ಇಲ್ಲ! ನನ್ನನ್ನು ಸಾಕ್ಷಿಯಾಗಿ ಇಟ್ಟು ಹಸುವನ್ನು ಕಳವು ಮಾಡಬೇಕು ಅಂತ ಅವನ ಬುದ್ಧಿಗೆ ಹೊಳೆಯಲಿಲ್ಲವೆಂದು ಕಾಣುತ್ತೆ. ಹಾಗೆ ಮಾಡಿದ್ದರೆ ನಿಮ್ಮ ಕೆಲಸವೂ ಸುಲಭವಾಗ್ತಿತ್ತು, ನನಗೂ ಸರಳವಾಗ್ತಿತ್ತು.

ವಕೀಲನಿಗೆ ದುಡ್ಡು ಕೊಟ್ಟದ್ದು ವ್ಯರ್ಥವಾಯಿತೆಂದು ಪ್ರಸನ್ನಳು ತಿಳಿದಳು. ಆಗ ಅವಳು ವಕೀಲನ ಕಿವಿಯಲ್ಲಿ ಮೆಲ್ಲಗೆ - "ಈತನಿಗೆ ಅದೇನೂ ತಿಳಿಯದು. ಈತನು ಹಸುವನ್ನು ಗುರುತಿಸಬಲ್ಲ" ಎಂದಳು.

ಆಗ ವಕೀಲನಿಗೆ ತಿಳಿವಳಿಕೆಯುಂಟಾಯಿತು. ಅವನು ಗಟ್ಟಿಯಾಗಿ— "ನೀವು ಹಸುವನ್ನು ಗುರ್ತಿಸುವಿರಾ?" ಎಂದನು.

ಕಮಲಾಕಾಂತನು ಮಂದಹಾಸದಿಂದ ಹೇಳಿದ— "ಓಹೊ, ಗುರ್ತಿಸ ಬಲ್ಲೆನು. ಇಲ್ಲವಾದರೆ ನಿಮ್ಮೊಂದಿಗೆ ಇಷ್ಟು ಸರಸಸಲ್ಲಾಪವೆಲ್ಲಾಗುತ್ತಿತ್ತು."

ಸಾಕ್ಷಿದಾರನು ಏನೇನೋ ಮಾಡುತ್ತಿರುವನೆಂದು ತಿಳಿದು ನ್ಯಾಯಾಧೀಶನು - "ಅದೆಲ್ಲ ಹೆಚ್ಚು ಮಾತು ಬೇಡ!" ಎಂದು ಗರ್ಜಿಸಿದನು. ಪ್ರಸನ್ನ ಗೌಳಗಿತ್ತಿಯ ಕಪ್ಪು ಹಸುವನ್ನು ಕೋರ್ಟಿನ ಎದುರಿಗೆ ಮೈದಾನದಲ್ಲಿ, ಒಳಗಿನಿಂದ ಕಾಣಿಸುವಂತೆ ಕಟ್ಟಿದ್ದರು. ಅದರ ಕಡೆ ತೋರುತ್ತ ಡಿಪುಟಿ ಸಾಹೇಬನು— "ನಿಮಗೆ ಆ ಹಸುವಿನ ಪರಿಚಯವಿದೆಯೆ?" ಎಂದನು.

ಕಮಲಾಕಾಂತನು ಕೈಜೋಡಿಸಿಕೊಂಡು ಕೇಳಿದ— "ಯಾವ ಹಸು ಧರ್ಮಾವತಾರ!

ನ್ಯಾಯಾಧೀಶ— ಯಾವ ಹಸುವೆಂದರೇನು? ಎದುರಿಗೆ ಒಂದೇ ಹಸು ಕಾಣುತ್ತಿಲ್ಲವೆ?

ಕಮಲಾ— ತಮಗೆ ಕಾಣಿಸುತ್ತಿರುವುದು ಒಂದು ಹಸು— ನನಗೆ ಅನೇಕ ಹಸುಗಳು ಕಾಣಿಸುತ್ತಿವೆ.

ನ್ಯಾಯಾಧೀಶನು ಬೇಸರಗೊಂಡು— "ಕಾಣಿಸುತ್ತಿಲ್ಲವೆ ಶ್ಯಾಮಲ ವರ್ಣದ್ದು?

ಕಮಲಾಕಾಂತನು ಕಪ್ಪು ಹಸುವಿನ ಕಡೆ ನೋಡದೆ, ವಕೀಲನ ಶಾಮಲದ* ಕಡೆ ನೋಡಿ— ಈ ಶಾಮಲ ಕೂಡ ಚೋರಿ ಮಾಲೆ?

---

* ಶಾಮಲ ಎಂದರೆ ಬಂಗಾಳಿಯಲ್ಲಿ ಶಿರೋಭೂಷಣಕ್ಕೂ (ರುಮಾಲಿಗೂ) ಹೆಸರಿದೆ.

ಕಮಲಾಕಾಂತನ ತುಂಟತನವನ್ನು ಇನ್ನು ಸಹಿಸಲಾರದೆ ಡಿಪುಟಿಯು ಕಟುವಾಗಿ ಹೇಳಿದನು—"ನೀವು ಕೋರ್ಟಿನ ಕಾರ್ಯಕ್ಕೆ ಅಡ್ಡಿಪಡಿಸುತ್ತಿರುವಿರಿ. 'ಕಂಟೆಂಪ್ಟ್ ಆಫ್ ಕೋರ್ಟ್'ಗಾಗಿ ನಿಮಗೆ ಐದುರೂಪಾಯಿ ಜುಲ್ಮಾನೆ ವಿಧಿಸಲಾಗಿದೆ."

ಕಮಲಾಕಾಂತನು ಭೂಮಿ ಮುಟ್ಟಿ ಸಲಾಮುಮಾಡಿ, ಕೈಜೋಡಿಸಿ ನಿಂತು—"ಬಹಳ ಒಳ್ಳೆಯದಾಯಿತು, ಹುಜೂರ್! ಆ ಜುಲ್ಮಾನೆ ವಸೂಲು ಮಾಡಲು ಬರುವವರು ಯಾರು?

ನ್ಯಾಯಾಧೀಶ—ಯಾಕೆ?

ಕಮಲಾ—ಆ ಜುಲ್ಮಾನೆ ಹಣವನ್ನು ಹೇಗೆ ವಸೂಲ್ಮಾಡಬೇಕೆಂದು ಅವರಿಗೆ ನಾನು ಉಪದೇಶಮಾಡಬೇಕಾಗಿದೆ.

ನ್ಯಾಯಾಧೀಶ—ಉಪದೇಶದ ಅಗತ್ಯವೇನಿದೆ?

ಕಮಲಾ—ಈ ಲೋಕದಲ್ಲಿ ನನ್ನಿಂದ ಆತನು ಜುಲ್ಮಾನೆ ವಸೂಲ್ಮಾಡುವ ಸಂಭವವಿಲ್ಲ.—ಆತನು ನನ್ನ ಜತೆಗೆ ಪರಲೋಕಕ್ಕೆ ಬರಲು ಸಿದ್ಧನಾಗಿರುವನೊ ಇಲ್ಲವೊ ನಿರ್ಣಯವಾಗಬೇಕಾಗಿದೆ.

ನ್ಯಾಯಾ—ಜುಲ್ಮಾನೆ ಕೊಡದಿದ್ದರೆ ಜೈಲಿನಲ್ಲಿರಬೇಕಾಗುವುದು.

ಕಮಲಾ—ಎಷ್ಟು ದಿನಗಳ ಕಾಲ; ಧರ್ಮಾವತಾರ!

ನ್ಯಾಯಾ—ಜುಲ್ಮಾನೆ ಕೊಡದಿದ್ದರೆ ಒಂದು ತಿಂಗಳ ಕಾಲ.

ಕಮಲಾ—ದಯೆಯಿಟ್ಟು ಎರಡು ತಿಂಗಳು ಇಡಲು ಸಾಧ್ಯವಿಲ್ಲವೆ?

ನ್ಯಾಯಾ—ಹೆಚ್ಚುಕಾಲ ಜೈಲಿನಲ್ಲಿರಲು ಏಕೆ ಅಪೇಕ್ಷೆ?

ಕಮಲಾ—ಈಗಿನ ಕಾಲ ಬಹಳ ನಾಜೂಕಾಗಿದೆ. ಬ್ರಾಹ್ಮಣ ಭೋಜನದ ಆಮಂತ್ರಣ ಸಿಕ್ಕುವುದು ಈಗ ಅಷ್ಟು ಸುಲಭವಾಗಿಲ್ಲ. ಆದ್ದರಿಂದ ಜೈಲಿನಲ್ಲಿ ಈ ಬ್ರಾಹ್ಮಣ ಭೋಜನಕ್ಕೆ ಎರಡು ತಿಂಗಳು ಕಾಲ ಅನುಕೂಲ ಮಾಡಿಕೊಟ್ಟರೆ ಈ ಬಡಬ್ರಾಹ್ಮಣನಿಗೆ ಉಪಕಾರ ಮಾಡಿದಂತಾಗುವುದು. ಬ್ರಾಹ್ಮಣನು ನಿಮಗೆ ಶುಭವಾಗಲೆಂದು ಆಶೀರ್ವದಿಸುವನು.

ಇಂಥಾ ಜನರಿಗೆ ಜುಲ್ಮಾನೆ ಹಾಕುವುದು ಅಥವಾ ಜೈಲು ಶಿಕ್ಷೆ ವಿಧಿಸುವುದರಿಂದ ಏನು ಪ್ರಯೋಜನ? ಕಮಲಾಕಾಂತನ ಮಾತುಗಳನ್ನು ಕೇಳಿ

ನ್ಯಾಯಾಧೀಶನು ನಗುತ್ತ ನುಡಿದನು - "ಒಳ್ಳೆಯದು. ನೀವು ಈಗ ತಕರಾರುಮಾಡದೆ, ಸರಳವಾಗಿ ಸಾಕ್ಷ್ಯವನ್ನು ಕೊಡಿ, ನಿಮ್ಮ ಜುಲ್ಮಾನೆಯನ್ನು ಮಾಫ್ ಮಾಡುತ್ತೇನೆ. ಈ ಹಸುವಿನ ಗುರುತು ನಿಮಗೆ ಇದೆಯೆ?" ನ್ಯಾಯಾಧೀಶನು ಕಮಲಾಕಾಂತನನ್ನು ಹೊರಗೆ ಕಟ್ಟಿದ್ದ ಪ್ರಸನ್ನಳ ಹಸುವಿನ ಹತ್ತಿರ ಕರೆದುಕೊಂಡು ಅದನ್ನು ಅವನಿಗೆ ತೋರಿಸಲು ಒಬ್ಬ ಕಾನ್‌ಸ್ಟೇಬಲ್‌ಗೆ ಹೇಳಿದನು. ಅವನು ಹಾಗೆ ಮಾಡಿದನು. ಬಳಿಕ ವಿಷಣ್ಣನಾದ ವಕೀಲನು - "ಆ ಹಸು ನಿಮಗೆ ಗೊತ್ತೆ?" ಎಂದು ಕೇಳಿದನು.

ಕಮಲಾ—ಈ ಕೊಂಬಿರುವ ಹಸು ಅಂತ ಹೇಳಬಾರದಾಗಿತ್ತೆ!

ವಕೀಲ—ನೀವು ಯಾವುದು ಅಂತ ತಿಳಕೊಂಡಿದ್ದಿರಿ.

ಕಮಲಾ—ನಾನು ಶಾಮಲ ಧರಿಸಿರುವ ಹಸು ಅಂತ ತಿಳಿದಿದ್ದೆ. ಹೌದು, ಈ ಕೊಂಬಿನ ಹಸು ನನಗೆ ಚೆನ್ನಾಗಿ ಗೊತ್ತು. ನನಗೂ ಅದಕ್ಕೂ ಬಹು ಕಾಲದ ಸಂಬಂಧವಿದೆ.

ವಕೀಲ—ಆ ಹಸು ಯಾರದು?

ಕಮಲಾ—ನನ್ನದು.

ವಕೀಲ—ನಿಮ್ಮದೇ?

ಕಮಲಾ—ನನ್ನದೇ!

ಹರಿ! ಹರಿ! ಪ್ರಸನ್ನಳ ಮುಖ ಒಣಗಿಹೋಯಿತು. ಮೊಕದ್ದಮೆ ಕೆಟ್ಟುಹೋಯಿತೆಂದು ವಕೀಲನಿಗೆ ಭಾಸವಾಯಿತು. ಆಗ ಪ್ರಸನ್ನಳು ತರ್ಜನೆ ಗರ್ಜನೆಮಾಡುತ್ತ - "ಏ ಧೂರ್ತ! ಆ ಹಸು ನಿನ್ನದೇ?

ಕಮಲಾಕಾಂತ—ನನ್ನದಲ್ಲದಿದ್ದರೆ ಮತ್ಯಾರದು? ನಾನು ಅದರ ಹಾಲು ಕುಡಿತೇನೆ, ಅದರ ಮೊಸರು ತಿಂತೇನೆ, ಬೆಣ್ಣೆ ತಿಂತೇನೆ, ಅದರ ಮಜ್ಜಿಗೆ ಕುಡಿತೇನೆ, ತುಪ್ಪ ತಿಂತೇನೆ. ಇಷ್ಟೆಲ್ಲ ಇರುವಾಗ ಹಸು ನಿನ್ನದು ಹೇಗೆ? ನೀನು ಅದನ್ನು ಸಾಕುತ್ತಾ ಇದ್ದೀಯೆ, ಅಷ್ಟು ಮಾತ್ರಕ್ಕೆ ಹಸು ನಿನ್ನದಾಗತ್ತೇನು?

ವಕೀಲನಿಗೆ ಈ ಮಾತಿನ ಅರ್ಥವೆ ತಿಳಿಯದಂತಾಯಿತು. ಅವನು ನ್ಯಾಯಾಧೀಶನ ಕಡೆ ತಿರುಗಿ Witness hostile! (ಸಾಕ್ಷಿ ತಿರುಗಿ ಬಿತ್ತು!) ಪರ್ಮಿಷನ್ ಕೊಟ್ಟರೆ, ನಾನು ಅವನನ್ನು ಕ್ರಾಸ್ ಮಾಡುತ್ತೇನೆ.

ಕಮಲಾ—ಏನು ? ನನ್ನ ಕ್ರಾಸ್ ಮಾಡುತ್ತೀರೊ ?

ವಕೀಲ—ಹೌದು, ಮಾಡುತ್ತೇನೆ.

ಕಮಲಾ—ದೋಣಿಯ ಮೂಲಕವೊ, ಸೇತುವೆ ಕಟ್ಟಿಯೊ ?

ವಕೀಲ—ಹಾಗೆಂದರೇನು ?

ಕಮಲಾ—ಬಾಬು ನೀವು ಬಿರದಿನ ಬಾಲವನ್ನು ಹಚ್ಚಿಕೊಂಡಿದ್ದರೂ ಕಮಲಾಕಾಂತ ಸಾಗರವನ್ನು ದಾಟಬಲ್ಲ ಹನುಮಂತನಾಗಲಾರಿರಿ.

ಹಾಗೆಯೆ ಹೇಳುತ್ತ ಕಮಲಾಕಾಂತನು ಕೋಪದಿಂದ ನಡುಗತ್ತ ಕಟಾಂಜನದಿಂದ ಹೊರಗೆ ಹೋಗಲು ಪ್ರಯತ್ನಿಸಿದನು. ಸಿಪಾಯಿಯು ಅವನನ್ನು ಹಿಡಿದು ಒಳಕ್ಕೆ ಸೇರಿಸಿದನು. ಆಗ ಕಮಲಾಕಾಂತನು ನಿರು ಪಾಯದಿಂದ ನಿಶ್ಚೇಷ್ಟನಾಗಿ - "ಮಾಡಿ, ಬಾಬು, ಕ್ರಾಸ್ ಮಾಡಿ! ನಾನು ಅಗಾಧ ಸಮುದ್ರವಾಗಿ ಬಿದ್ದಿದ್ದೇನೆ - ಬೇಕಾದವರು ದಾಟಬಹುದು, ಹಾರ ಬಹುದು - "ಅಪಾಮಿವಾಧಾರಮನುತ್ತರಂಗಮ್"* ಆಗಿರುವೆನು. ವಕೀಲ ಮಹಾಶಯ ! ಈ ಪ್ರಶಾಂತವಾದ ಮಹಾಸಾಗರದಲ್ಲಿ ಅಲೆಗಳೇಳುವುದಿಲ್ಲ. ನೀವು ಸ್ವಚ್ಛಂದವಾಗಿ ಉಲ್ಲಂಘಿಸಬಹುದು."

ಆಗ ವಕೀಲನು ನ್ಯಾಯಾಧೀಶನ ಕಡೆ ತಿರುಗಿ - "ಧರ್ಮಾವತಾರ! ಈ ಮನುಷ್ಯ ಹುಚ್ಚನೆಂದು ಕಾಣುತ್ತದೆ. ಈತನನ್ನು ಕ್ರಾಸ್ ಮಾಡುವ ಅವಶ್ಯಕತೆ ಕಾಣುವುದಿಲ್ಲ. ಈತನು ಹುಚ್ಚನಾದ್ದರಿಂದ ಈತನ ಸಾಕ್ಷ್ಯವು ಕೆಲಸಕ್ಕೆ ಬಾರದು. ಈತನಿಗೆ ಹೋಗಲು ಅಪ್ಪಣೆ ಕೊಡಬಹುದು." ಕಮಲಾಕಾಂತನ ಕೈಯಿಂದ ತಪ್ಪಿಸಿಕೊಳ್ಳಲು ಕಾಯುತ್ತಿದ್ದ ನ್ಯಾಯಾ ಧೀಶನು ಅವನಿಗೆ ಅಪ್ಪಣೆಕೊಡಲು ಸಿದ್ಧನಾದನು. ಆಗ ಗೌಳಗಿತ್ತಿ ಪ್ರಸನ್ನಳು ಕೈಜೋಡಿಸಿ ಕೋರ್ಟಿಗೆ ನಿವೇದನೆ ಮಾಡಿಕೊಂಡಳು - "ಅಪ್ಪಣೆ ಆದರೆ ನಾನು ಆತನೊಂದಿಗೆ ಕೆಲವು ಮಾತುಗಳನ್ನಾಡುತ್ತೇನೆ. ಅನಂತರ ಅಪ್ಪಣೆ ಕೊಡಬೇಕಾದರೆ ಕೊಡಬಹುದು."

ನ್ಯಾಯಾಧೀಶನೂ ಕುತೂಹಲದಿಂದ ಅಪ್ಪಣೆ ಕೊಟ್ಟನು. ಆಗ ಪ್ರಸನ್ನಳು ಕಮಲಾಕಾಂತನ ಕಡೆ ತಿರುಗಿ - "ಠಾಕೂರರೆ ! ಭಂಗಿ ಸೇದುವ ಸಮಯವಾಗಿಲ್ಲವೆ ?" - ಎಂದಳು.

---

* ಅಲೆಗಳಿಲ್ಲದ ಸಮುದ್ರದಂತೆ.

ಕಮಲಾ—ಭಂಗಿ ಸೇದುವುದಕ್ಕೆ ಸಮಯ - ಅಸಮಯ ಅಂತ ಇದೆ ಯೇನೆ ಹೆಣ್ಣೆ ! - ಅಜರಾಮರವತ್ಪ್ರಾಜ್ಞೋ ವಿದ್ಯಾಂನಶಾಂಚ ಚಿನ್ತಯೇತ್|'

ಪ್ರಸನ್ನ—ಈಗ ನಿಮ್ಮ ಅಂ - ಬಂ ಎಲ್ಲ ಕಟ್ಟಿಡಿ. ಈಗ ನಿಷಾ ಸೇವನೆ ಆಗಬೇಕೊ ?

ಕಮಲಾ—ಎಲ್ಲಿದೆ ತಂದುಕೊಡು.

ಪ್ರಸನ್ನ—ಮೊದಲು ನಾನು ಕೇಳುವ ಮಾತಿಗೆ ಸರಿಯಾಗಿ ಉತ್ತರ ಕೊಟ್ಟರೆ, ನಾನು ತಂದುಕೊಡುತ್ತೇನೆ.

ಕಮಲಾ—ಹಾಗಾದರೆ ಬೇಗಬೇಗ ಕೇಳು-ಚಟ್‌ಪಟ್ ಅಂತ ಉತ್ತರ ಕೊಡ್ತೇನೆ.

ಪ್ರಸನ್ನ—ಈಗ ಹೇಳಿ ಹಸು ಯಾರದು ?

ಕಮಲಾ—ಹಸು ಮೂರು ಜನರದು. ಮೊದಲನೆಯ ಅವಸ್ಥೆಯಲ್ಲಿ ಗುರು ಮಹಾಶಯರಿಗೆ ಸೇರಿದ್ದು, ಮಧ್ಯ ವಯಸ್ಸಿನಲ್ಲಿ ಸ್ತ್ರೀ ಜಾತಿಗೆ ಸೇರಿದ್ದು, ಅಪರ ವಯಸ್ಸಿನಲ್ಲಿ ಉತ್ತರಾಧಿಕಾರಿಗಳಿಗೆ ಸೇರಿದ್ದು. ಹಗ್ಗ ಹರಿದುಕೊಂಡು ಹೋದಾಗ ಅದು ಯಾರಿಗೂ ಸೇರಿದ್ದಲ್ಲ.

ಪ್ರಸನ್ನ—ನಾನು ಕೇಳುವುದು ಅಲ್ಲಿ ಕಟ್ಟಿರುವ ಕಪ್ಪು ಹಸು ಯಾರದು ಅಂತ ?

ಕಮಲಾ—"ಅದು ಅದರ ಹಾಲು ಕುಡಿಯುವವನಿಗೆ ಸೇರಿದ್ದು."

ಪ್ರಸನ್ನ—ಆ ಹಸು ನನ್ನದಲ್ಲವೆ ?

ಕಮಲಾ—ನೀನು ಒಂದು ದಿನವೂ ಒಂದು ತೊಟ್ಟು ಅದರ ಹಾಲು ಕುಡಿಯುವುದಿಲ್ಲ. ಅದನ್ನು ಮಾರಿಮಾರಿಕೊಂಡು ಸಾಯ್ತೀಯೆ ! ಅಷ್ಟಕ್ಕೆ ಹಸು ನಿನ್ನದಾಗತ್ತೇನು ? ಆ ಹಸು ನಿನ್ನದಾಗುವುದಾದರೆ, ಬಂಗಾಳಾ ಬ್ಯಾಂಕಿನಲ್ಲಿರುವ ಹಣವೆಲ್ಲ ನನ್ನದಾಗಬೇಕು. ಹೆಣ್ಣೆ, ಆ ಹಸುವನ್ನು ಆ ಕಳ್ಳನಿಗೆ ಕೊಟ್ಟುಬಿಡು. ಬಡವ, ಅದರ ಹಾಲು ಕುಡಿದು ಬದುಕಿ ಕೊಳ್ತಾನೆ.

ಇವರಿಬ್ಬರೂ ಗಟ್ಟಿ ಗಟ್ಟಿಯಾಗಿ ಮಾತನಾಡುತ್ತ ಕೋರ್ಟನ್ನು ಮಾನಿನ ಸಂತೆಯಾಗಿ ಮಾಡುತ್ತಿದ್ದಾರೆಂದು ತಿಳಿದು, ಡಿಪುಟಿಯು ಅವರಿಬ್ಬರ ಮಾತನ್ನು ನಿಲ್ಲಿಸಿ, ಕಮಲಾಕಾಂತನನ್ನು ಪ್ರಶ್ನಿಸಿದನು.

—"ಪ್ರಸನ್ನಳು ಈ ಹಸುವಿನ ಹಾಲನ್ನು ಮಾರುತ್ತಾಳೊ ?

ಕಮಲಾ—ಹೌದು, ಹುಜೂರ್ !

"ಅವಳ ಗೋಶಾಲೆಯಲ್ಲಿ ಈ ಹಸು ಇರುತ್ತದೆ"

"ಆ ಹಸುವು ಇರುತ್ತೆ, ಕೆಲಕೆಲವು ವೇಳೆ ನಾನೂ ಇರ್ತ್ತೇನೆ."

"ಇವಳೇ ಅದಕ್ಕೆ, ತಿಂಡಿ ಕೊಡುತ್ತಾಳೊ ?

ಕಮಲಾ—ಅದಕ್ಕೂ ನನಗೂ ಇಬ್ಬರಿಗೂ.

ಫಿರ್ಯಾದಿಯ ವಕೀಲನು - "ಹಃ, ನನ್ನ ಕೆಲಸ ಆದಹಾಗೆ ಆಯಿತು. ಇನ್ನು ನಾನು ಸಾಕ್ಷಿಯನ್ನು ಪ್ರಶ್ನಿಸುವ ಪ್ರಮೇಯವೇ ಇಲ್ಲ" ಎನ್ನುತ್ತ ಕುಳಿತುಬಿಟ್ಟನು. ಆಗ ಅಪರಾಧಿಯ ವಕೀಲನು ಎದ್ದು ನಿಂತನು. ಆಗ ಕಮಲಾಕಾಂತನು ಆತನನ್ನು ನೋಡಿ - "ನೀವ್ಯಾರು ಮಹಾರಾಯ ಬಂದಿರಿ?" ಎಂದನು.

ವಕೀಲ—ನಾನು ಅಪರಾಧಿ ಕಡೆ ವಕೀಲ. ನಿಮ್ಮನ್ನು ಕ್ರಾಸ್ ಮಾಡಬೇಕಾಗಿದೆ.

ಕಮಲಾ—ಒಬ್ಬ ಮಹಾರಾಯ ಬಂದು ಕ್ರಾಸ್‌ಮಾಡಿ ಹೋದರು.

—ಈಗ ನೀವು ಕುಮಾರ ಬಹದ್ದೂರ್ ಬಂದಿರೇನು ?

ವಕೀಲ—ಕುಮಾರ ಬಹದ್ದೂರ್ ಯಾರು ?

ಕಮಲಾಕಾಂತ—ರಾಜಕುಮಾರನ ಪರಿಚಯವಿಲ್ಲವೆ? ಹಿಂದೆ ತ್ರೇತಾಯುಗದಲ್ಲಿ ಸಮುದ್ರವನ್ನು ಮೊದಲು ಕ್ರಾಸ್‌ಮಾಡಿದ ಮಹಾಶಯ ಪವನಾತ್ಮಜ, ಮಹಾವೀರ! ಆತನ ಬಳಿಕ ಕ್ರಾಸ್ ಮಾಡಿದವನು ಕುಮಾರ ಬಹದ್ದೂರನು - (ಅಂಗದ).

ವಕೀಲ—ಆ ಮಾತಿರಲಿ. - ಈ ಹಸುವಿನ ಗುರ್ತಿದೆ ಎಂದಿರಲ್ಲ. ಹೇಗೆ ಗುರ್ತಿಸಿದಿರಿ.

ಕಮಲಾ—ಅದರ ಕೊಂಬುಗಳಿಂದ ಮತ್ತೆ, ಅದರ ಕಪ್ಪು ಬಣ್ಣದಿಂದ.

ವಕೀಲನು ಕೋಪದಿಂದ, ಮೇಜಿನ ಮೇಲೆ ಕೈ ಹೊಡೆದು - "ನಿಮ್ಮ ಹುಚ್ಚು ಮಾತನ್ನೆಲ್ಲ ಕಟ್ಟಿಡಿ - ಹಸುವನ್ನು ಯಾವ ಲಕ್ಷಣಗಳಿಂದ ಗುರುತಿಸುವಿರಿ ?

ಕಮಲಾ—ಅದರ 'ಅಂಬಾ' ಎಂಬ ರಂಭಾ ಧ್ವನಿಯಿಂದ.

ವಕೀಲನು ಹತಾಶನಾಗಿ-'ಹೋಪ್‌ಲೆಸ್' ಎಂದು ಹೇಳಿ ಸವಾಲು ಮಾಡುವ ವಿಚಾರವನ್ನೆ ಬಿಟ್ಟು ಕುಳಿತುಬಿಟ್ಟನು.

ಕಮಲಾಕಾಂತನು ವಿನೀತ ಭಾವದಿಂದ-ಹಗ್ಗ ಯಾಕೆ ಹರೀತೀರಿ ಬಾಬು? ಎಂದನು.

ವಕೀಲನು ಇನ್ನು ಸಾಕ್ಷಿಯನ್ನು ಪ್ರಶ್ನಿಸುವುದಿಲ್ಲವೆಂದು ತಿಳಿದು, ಕಮಲಾಕಾಂತನಿಗೆ ಹೋಗಲು ಅಪ್ಪಣೆಯನ್ನಿತ್ತನು. ಕಮಲಾಕಾಂತನು ಊರ್ಧ್ವಶ್ವಾಸದಿಂದ ಕೋರ್ಟಿನಿಂದ ಹೊರಗೆ ಓಡಿದ. ನಾನು ಸ್ವಲ್ಪ ಕೆಲಸ ತೀರಿಸಿಕೊಂಡು ಹೊರಗೆ ಬಂದು ನೋಡಿದೆ. ಕಮಲಾಕಾಂತನ ಸುತ್ತಲೂ ಜನ ನೆರೆದಿದ್ದಾರೆ. ಪ್ರಸನ್ನಳೂ ಅಲ್ಲಿದ್ದಾಳೆ. ಕಮಲಾಕಾಂತನು ತಿರಸ್ಕಾರ ಭಾವದಿಂದ ಅವಳೊಂದಿಗೆ ಮಾತನಾಡುತ್ತಿದ್ದಾನೆ - ನಿನ್ನ ಹಸು ಮಂಗಳಾನ ಆಣೆ, ನಿನ್ನ ಹಾಲಿನ ಮಡಕೆ ಆಣೆ, ನಿನ್ನ ಹಾಲು ಮೊಸರ ಆಣೆ, ನೀನು ಆ ಕಳ್ಳನಿಗೆ ಹಸು ಕೊಟ್ಟುಬಿಡು."

ನಾನು ಪ್ರಶ್ನಿಸಿದೆ-"ಚಕ್ರವರ್ತಿ ಮಹಾಶಯ, ಹಸುವನ್ನು ಕಳ್ಳನಿಗೇಕೆ ಕೊಡಬೇಕು?"

ಕಮಲಾಕಾಂತನು ಉತ್ತರವಿತ್ತನು – "ಪೂರ್ವಕಾಲದಲ್ಲಿ ಮಹಾರಾಜ ಶ್ಯೇನಜಿತನು ಒಬ್ಬ ಬ್ರಾಹ್ಮಣನನ್ನು ಕರೆದು ಹೀಗೆ ಹೇಳಿದ್ದಾನೆ–"ಹೇ ವತ್ಸ! ಹಸುವಿನ ಪಾಲಕ ಮತ್ತು ಕಳ್ಳ ಇವರಿಬ್ಬರಲ್ಲಿ ಯಾರು ಹಸುವಿನ ಹಾಲು ಕುಡಿಯುತ್ತಾರೊ ಅವನೇ ಅದರ ನ್ಯಾಯವಾದ ಅಧಿಕಾರಿ. ಬೇರೆಯವರು ಅದರ ಮೇಲೆ ಮಮತೆಯನ್ನು ತೋರಿಕೊಳ್ಳುವುದು ನೆಪಮಾತ್ರ.* ಇದು ಭೀಷ್ಮ ಪಿತಾಮಹನ Hiudu Law (ಹಿಂದೂ ಕಾನೂನು.) ಅದೇ ಈಗ ಯೂರೋಪಿನ International Law (ಅಂತರ್ರಾಷ್ಟ್ರೀಯ ನಿಯಮ) ಆಗಿದೆ. ನೀನು ಸಭ್ಯ ಮತ್ತು ಉನ್ನತ (ದೊಡ್ಡವನು) ಆಗ ಬೇಕಾದು ಬೇರೆಯವರಿಂದ ಕಿತ್ತುಕೊಂಡು ತಿನ್ನಬೇಕು. ಗೋ ಶಬ್ದದ ಅರ್ಥ ಹಸು ಎಂತಲೂ ಆಗುತ್ತದೆ, ಭೂಮಿ ಎಂತಲೂ ಆಗುವದು. ಚೋರರೆ ಇದನ್ನು

* ಮಹಾಭಾರತ - ಶಾಂತಿ ಪರ್ವ. ಅಧ್ಯಾಯ ೧೭೪.

ಭೋಗಿಸುವವರು, ಸಿಕಂದರನಿಂದ ಮೊದಲಾಗಿ, ರಣಜಿತ್‌ಸಿಂಹನವರೆಗೆ ಎಲ್ಲ ಕಳ್ಳರೂ ಇದಕ್ಕೆ ಪ್ರಮಾಣರಾಗಿದ್ದಾರೆ. Right of conquest ಒಂದು 'ರೈಟ್' (ಹಕ್ಕು) ಆದರೆ Right of theft ಕೂಡ ಒಂದು 'ರೈಟ್' ಆಗುವುದು. ಆದ್ದರಿಂದ ಪ್ರಸನ್ನಾ ನಾಮಾಂಕಿತ ಗೋಪಕನ್ನೆ! ನೀನು ಕಾನೂನಿನಂತೆ ಕೆಲಸಮಾಡು, ಇತಿಹಾಸದ ರಾಜನೀತಿಯನ್ನು ಅನುಸರಿಸುವಳಾಗು, ಚೋರನಿಗೆ ಹಸುವನ್ನು ಕೊಟ್ಟುಬಿಡು."

ಹೀಗೆ ಹೇಳಿ ಕಮಲಾಕಾಂತನು ಅಲ್ಲಿಂದ ಹೊರಟುಹೋದನು. ನೋಡಿದೆ - ಅವನಿಗೆ ಹುಚ್ಚು ಪೂರ್ತಿಯಾಗಿ ಹಿಡಿದಿತ್ತು.

— ಶ್ರೀ ಭೀಷ್ಮದೇವ ಖೋಶನವೀಶ ಜೂನಿಯರ್.

---

## ಶ್ರೀ॥ ದ. ಕೃ. ಭಾರದ್ವಾಜರವರಿಂದ ರಚಿತವಾದ ಗ್ರಂಥಗಳು

| | | |
|---|---|---|
| | ಹಿಂದೀ ಸ್ವರಾಜ್ಯ (ಮಹಾತ್ಮಾಗಾಂಧಿ ಗ್ರಂಥಾನುವಾದ) | ೦—೧೨—೦ |
| * | ಅನಾಸಕ್ತಿಯೋಗ ,, | ೦—೮—೦ |
| * | ನೀತಿಧರ್ಮ ,, | ೦—೬—೦ |
| | ಬ್ರಹ್ಮಚರ್ಯೆಯೋ ಕಾಮಸಾಧನೆಯೊ? ,, | ೦—೧೨—೦ |
| | ದಾಂಪತ್ಯ ವಿಜ್ಞಾನ | ೩—೦—೦ |
| | ಸಂತಾನ ವಿಜ್ಞಾನ | ೩—೦—೦ |
| | ಆಹಾರ ವಿಜ್ಞಾನ | ೩—೦—೦ |
| | ರಾಷ್ಟ್ರ ಸಭೆಯ (ಕಾಂಗ್ರೆಸ್) ಇತಿಹಾಸ (ಸಚಿತ್ರ) | ೨—೮—೦ |
| * | ಭೀಷ್ಮ (ಬಂಗಾಳಿ ನಾಟಕಾನುವಾದ) | ೧—೮—೦ |
| | ಸೀತಾದೇವಿ ,, | ೦—೧೨—೦ |
| | ಆಯುರ್ವೇದ ಚಿಕಿತ್ಸಾ ಸಾರ ಸಂಗ್ರಹ | ೦—೮—೦ |
| * | ಸ್ವರಾಜ್ಯ ವಿಶ್ವಕೋಶ (೧೨ ಭಾಗ) ೧ ಭಾಗಕ್ಕೆ | ೦—೬—೦ |
| | Swaraj Cyclopaedia (2 parts) each | ೧—೦—೦ |
| | ಸಚಿತ್ರ ಭಾರತ ಯಾತ್ರೆ (ಉತ್ತರ ಭಾರತ) | ೧—೮—೦ |
| | ದಕ್ಷಿಣ ಭಾರತ ಯಾತ್ರೆ | ೧—೮—೦ |
| | ಕರ್ಣಾಟಕದ ಕೈಪಿಡಿ | ೧—೦—೦ |
| | Karnataka Hand Book | ೧—೦—೦ |

### ನಮ್ಮ ಪ್ರಕಟನೆಗಳು:

| | |
|---|---|
| ಜೀವನ ಚಿತ್ರ (ಸಣ್ಣ ಕಥೆಗಳು) | ೨—೦—೦ |
| ಕಮಲಾಕಾಂತನ ಕಡತ | |
| ನಾಟ್ಯರೂಪ ಹಿಂದುಸ್ಥಾನ | |
| ಶ್ರೀ ತುಳಸೀದಾಸ ರಾಮಾಯಣ | |
| ಭಾರದ್ವಾಜ ನಿಘಂಟು - ಕನ್ನಡ-ಕನ್ನಡ. | |

* ಈ ಗುರುತಿನ ಪುಸ್ತಕಗಳು ಪುನರ್ಮುದ್ರಣವಾಗಬೇಕಾಗಿವೆ.

★

**ಆನಂದ್ ಬ್ರದರ್ಸ್**

**ಕೆಂಪೇಗೌಡ ರೋಡ್, ಬೆಂಗಳೂರು-೨.**



**ದ. ಕೃ. ಭಾರದ್ವಾಜರು**

ನಲವತ್ತು ವರುಷಗಳಿಂದ ಇವರು ಸಾಹಿತ್ಯರಂಗಕ್ಕಿಳಿದು ಅನೇಕ ತ್ರೈಮಾಸಿಕ, ಮಾಸಿಕ, ಸಾಪ್ತಾಹಿಕ ಮತ್ತು ದೈನಿಕ ಪತ್ರಿಕೆಗಳ ಸಂಸ್ಥಾಪಕ, ಸಂಪಾದಕರಾಗಿ, ಸಹಸಂಪಾದಕರಾಗಿ, ಲೇಖಕರಾಗಿ ಕೆಲಸಮಾಡಿರುವವರು. ಕನ್ನಡದಲ್ಲಿ ಮೊಟ್ಟಮೊದಲನೆಯದಾಗಿ ಮನೋರಂಜಕವಾದ ಪ್ರಸಿದ್ಧ ಚಿತ್ರಕಾರರ ತ್ರಿವರ್ಣ ಚಿತ್ರಗಳನ್ನು ಪ್ರತಿ ಮಾಸದಲ್ಲಿಯೂ ಪ್ರಕಟವಾಗುತ್ತಿದ್ದ, ಕೇವಲ ನಾಟಕ ನಾಟ್ಯಕಲೆಗಾಗಿಯೇ ಮೀಸಲಾಗಿದ್ದ 'ಕರ್ಣಾಟಕ ರಂಗಭೂಮಿ' ಮತ್ತು ಮಕ್ಕಳಿಗಾಗಿ ಹೊರಟ 'ಮಕ್ಕಳ ಪುಸ್ತಕ' ಮಾಸಪತ್ರಿಕೆಗಳ ಸಂಸ್ಥಾಪಕ-ಸಂಪಾದಕರು ಇವರೇ. ಕೇವಲ ಸಾಹಿತ್ಯಕ್ಷೇತ್ರವಲ್ಲದೆ, ವಿಜ್ಞಾನ, ರಾಜಕೀಯ, ಸಾಮಾಜಿಕ, ವೈದ್ಯಕೀಯ ಕ್ಷೇತ್ರಗಳಲ್ಲಿ ದುಡಿದು, ಆಯಾ ಕ್ಷೇತ್ರಗಳಿಗೆ ಸಂಬಂಧಪಟ್ಟ ಗ್ರಂಥಗಳನ್ನು ರಚಿಸಿ ಕನ್ನಡಿಗರ ಮುಂದಿಟ್ಟಿರುವರು. ಇವರ ಇಂಗ್ಲೀಷ್–ಇಂಗ್ಲೀಷ್–ಕನ್ನಡ ನಿಘಂಟು ಕರ್ಣಾಟಕದಲ್ಲೆಲ್ಲರಿಗೂ ಪರಿಚಿತವಾಗಿದೆ. ಲೈಂಗಿಕವಿಜ್ಞಾನ ವಿಚಾರವಾಗಿ ಚೆನ್ನಾಗಿ ಅಧ್ಯಯನ ಮಾಡಿ, ವೈಜ್ಞಾನಿಕವಾಗಿ ಅದನ್ನು ವಿವೇಚಿಸಿ, ಸಶಾಸ್ತ್ರೀಯವಾಗಿ ಸರಳವಾದ ಶೈಲಿಯಲಿ 'ದಾಂಪತ್ಯವಿಜ್ಞಾನ' ಮತ್ತು 'ಸಂತಾನವಿಜ್ಞಾನ'ವೆಂಬ ಗ್ರಂಥರತ್ನಗಳನ್ನು ಕನ್ನಡಿಗ ಯುವಕ ಯುವತಿಯರಿಗೆ ಪ್ರಪ್ರಥಮವಾಗಿ ಕೊಟ್ಟವರಿವರು. ಇವರ ಕಥೆಗಳಲ್ಲಿ ಮಾನವನ ಬಾಳಿನ ಕಟು ಅನುಭವ ತರಂಗಗಳು ಸಾಮಾಜಿಕ ಸಮಸ್ಯೆಗಳನ್ನು ತಂದೊಡ್ಡುವವು.